## ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# 'ಶಿವಮಹಾಪುರಾಣಂ'

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ವಿವರಣೆಗಳೊಡನೆ)

## ಭಾಗ— ೧೦

### ಕೈಲಾಸಸಂಹಿತಾ



ಅನುವಾದಕ :

**ಹಾಸನದ ಪಂಡಿತ ವೆಂಕಟರಾವ್**

ಆಸ್ಥಾನ ವಿದ್ವಾಂಸ




ಮೈಸೂರು

ಶ್ರೀ ಚಾಮುಂಡೇಶ್ವರೀ ಎಲಕ್ಟ್ರಿಕ್ ಪ್ರೆಸ್

೧೯೪೬



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**



# ಶ್ರೀ ಪ್ರಸನ್ನ ಶಂಕರ

ವಾಮಾಂಕನ್ಯಸ್ತವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ಪಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲಲಿತವಪುಃ ಸಂಪದೇ ಪಾರ್ವತೀಶಃ ॥

# ಮುನ್ನುಡಿ.

ಶಿವಪುರಾಣದ ಆರನೆಯದಾದ ಈ ಕೈಲಾಸಸಂಹಿತೆಯಲ್ಲಿ ಮಂತ್ರಗಳಲ್ಲೆಲ್ಲಾ ಶ್ರೇಷ್ಠವೆಂದೂ, ವೇದಾದಿಯೆಂದೂ, ಪರಬ್ರಹ್ಮಸ್ವರೂಪವೆಂದೂ ಪರಿಗಣಿಸಲ್ಪಟ್ಟಿರುವ ಪ್ರಣವಮಂತ್ರದ ವಿವರಣೆ, ಅದರ ಅರ್ಥ, ಅದನ್ನು ಉಪಾಸನೆ ಮಾಡುವ ಕ್ರಮ, ಅದನ್ನು ಉಪಾಸನೆ ಮಾಡುವ ಅಧಿಕಾರಿ, ಈ ವಿಷಯಗಳನ್ನೂ, ಪ್ರಣವೋಪಾಸನೆಗೆ ಮುಖ್ಯಾಧಿಕಾರಿಯಾದ ಯತಿಯು ಗುರುವಿನಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸುವ ಕ್ರಮ, ಮಹಾವಾಕ್ಯಾರ್ಥಗಳನ್ನೊಳಗೊಂಡ ಪ್ರಣವಮಂತ್ರ ಜಪವಿಧಾನ, ಯತಿಯು ಆಚರಿಸಬೇಕಾದ ನಿಯಮಾದಿಗಳು, ಯತಿಯ ಅಂತ್ಯಸಂಸ್ಕಾರಕ್ರಿಯೆಗಳು, ಪ್ರಣವಜಪದಿಂದ ಹೊಂದಬಹುದಾದ ಕೈಲಾಸಪದಪ್ರಾಪ್ತಿ, ಮುಂತಾದ ವಿಷಯಗಳನ್ನೂ ವಿಸ್ತಾರವಾಗಿ ಹೇಳಿರುವುದರಿಂದ ಇವಕ್ಕೆ ಕೈಲಾಸಸಂಹಿತೆಯೆಂದು ಹೆಸರು ಬಂದಿರುವುದು. ಈ ಸಂಹಿತೆಯಲ್ಲಿಯೂ ಮುಂದಿನ ವಾಯುವೀಯಸಂಹಿತೆಯಲ್ಲಿಯೂ ವೇದಗಳ ಮತ್ತು ಉಪನಿಷತ್ತುಗಳ ಸಾರಭೂತವಾದ ವೇದಾಂತತತ್ತ್ವಗಳ ಪ್ರತಿಪಾದನೆಯೇ ಮುಖ್ಯವಾಗಿ ಅನುವಾದ ಮಾಡಲ್ಪಟ್ಟಿರುವುದು.

ಈ ಸಂಹಿತೆಯಲ್ಲಿ ಪ್ರಣವಾರ್ಥಸ್ವರೂಪವನ್ನು ವಿವರಿಸುವ ಸಂದರ್ಭದಲ್ಲಿ ಅದ್ವೈತ ತತ್ತ್ವವನ್ನು ಬೋಧಿಸುವ ತತ್ತ್ವಮಸಿ ಮೊದಲಾದ ಮಹಾವಾಕ್ಯಗಳೂ ಪ್ರತಿಪಾದಿಸಲ್ಪಟ್ಟಿರುವವು. ಈ ವಾಕ್ಯಗಳೆಲ್ಲವೂ, ಶುಕರಹಸ್ಯ, ಶ್ವೇತಾಶ್ವತರ, ತೈತ್ತಿರೀಯ, ಬೃಹದಾರಣ್ಯಕ ಮೊದಲಾದ ಉಪನಿಷತ್ತುಗಳಿಂದ ಆರಿಸಿ ತೆಗೆದುಕೊಂಡ ವಾಕ್ಯಗಳಾಗಿರುವವು. ಈ ವಾಕ್ಯಗಳಲ್ಲದೆ ಶ್ವೇತಾಶ್ವತರೋಪನಿಷತ್ತಿನ ವಾಕ್ಯಗಳಲ್ಲಿ ಬಹುಭಾಗವು ಶ್ಲೋಕರೂಪವಾಗಿ ವಿವರಿಸಲ್ಪಟ್ಟಿರುವುದು. ಗಹನಾರ್ಥಗಳನ್ನೊಳಗೊಂಡ ಈ ಉಪನಿಷದ್ವಾಕ್ಯಗಳನ್ನೆಲ್ಲಾ ಶ್ರುತಿಸ್ಮೃತಿ ಪ್ರಮಾಣಸಹಿತವಾಗಿಯೂ ನ್ಯಾಯಶಾಸ್ತ್ರದ ಯುಕ್ತಿಗಳಿಂದಲೂ ಪ್ರತಿಪಾದನೆ ಮಾಡಿದರೆ ಗ್ರಂಥವು ಬಹು ದೊಡ್ಡದಾಗುವುದೆಂಬ ಶಂಕೆಯಿಂದಲೂ, ಮುಖ್ಯವಾದ ಉಪನಿಷತ್ತುಗಳೆಲ್ಲವೂ ಭಾಷ್ಯಾನುವಾದಸಹಿತವಾಗಿ ಪ್ರತ್ಯೇಕವಾಗಿ ಮುದ್ರಣವಾಗುತ್ತಿರುವುದರಿಂದಲೂ ಅವುಗಳನ್ನು ಇಲ್ಲಿ ವಿಸ್ತಾರವಾಗಿ ವಿವರಿಸದೆ ಯಥೋಚಿತವಾಗಿಯೂ, ಸಂಕ್ಷೇಪವಾಗಿಯೂ ಅರ್ಥಾನುವಾದವನ್ನು ಕೊಟ್ಟ

ರುತ್ತೆ. ಪಾರಮಾರ್ಥಿಕ ದೃಷ್ಟಿಯಿಂದ ಈ ಸಂಹಿತೆಯೂ ಮುಂದಿನ ವಾಯವೀಯ ಸಂಹಿತೆಯೂ ಶಿವಪುರಾಣದಲ್ಲಿ ಅತ್ಯಂತ ಮಹತ್ತ್ವಪೂರಿತವಾದುವುಗಳೆಂದು ಪರಿಗಣಿಸಲ್ಪಟ್ಟಿರುವುದರಿಂದ ಭಕ್ತರಾದವರು ಈ ಭಾಗಗಳನ್ನು ಭಕ್ತಿಯಿಂದಲೂ ಏಕಾಗ್ರಚಿತ್ತದಿಂದಲೂ ಪಠನಶ್ರವಣಮನನಾದಿಗಳನ್ನು ಮಾಡುವುದರಿಂದ ಪರಮೇಶ್ವರನ ಅನುಗ್ರಹಕ್ಕೆ ಪಾತ್ರರಾಗುವುದರಲ್ಲಿ ಸಂಶಯವಿಲ್ಲ.

ಸಜ್ಜನರ ಅನುಕೂಲಕ್ಕಾಗಿ ಇಂತಹ ಉತ್ತಮವಾದ ಗ್ರಂಥವನ್ನು ಕನ್ನಡಕ್ಕೆ ಭಾಷಾಂತರಿಸಬೇಕೆಂದು ನಮ್ಮನ್ನಾಳುವ ಮಹಾಪ್ರಭುಗಳೂ, ಕರ್ಣಾಟಕ ಸಿಂಹಾಸನಾಧೀಶ್ವರರೂ, ಶಿವಭಕ್ತಿಪರಾಯಣರೂ ಆದ **ಶ್ರೀ ಜಯಚಾಮ ರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ. ಪ್ರಭುಗಳವರ** ಅಪ್ಪಣೆಮೇರೆಗೆ ಈ ಶಿವಪುರಾಣವನ್ನು ಶಿವಪ್ರೇರಣೆಯಿಂದಲೇ ಯಥಾಮತಿ ಬರೆದಿರುತ್ತೇನೆ. ಕೈಲಾಸಾಧಿಪತಿಯೂ, ಭಕ್ತಪರಾಧೀನನೂ, ಪಾರ್ವತೀಪತಿಯೂ ಆದ ಪರಮೇಶ್ವರನು ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ, ರಾಷ್ಟ್ರಕ್ಕೂ, ಸಕಲಭಕ್ತವೃಂದಕ್ಕೂ ಇತೋಽಪ್ಯತಿಶಯವಾದ ಸುಖಸಂತೋಷಾದಿಗಳನ್ನು ಅನುಗ್ರಹಿಸಲೆಂದು ಭಕ್ತಿಭಾವದಿಂದ ಪ್ರಾರ್ಥಿಸುವೆನು.

ಮೈಸೂರು,
ವ್ಯಯ ಸಂ॥ ಚೈತ್ರ ಶುದ್ಧ ದ್ವಿತೀಯಾ,
೪-೪-೪೬.

ಅನುವಾದಕ:
**ಹಾಸನದ ಪಂಡಿತ ವೆಂಕಟರಾವ್,**
ಆಸ್ಥಾನ ವಿದ್ವಾನ್.



# ವಿಷಯಾನುಕ್ರಮಣಿಕೆ.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ಷಷ್ಠ್ಯಾಂ ಕೈಲಾಸಸಂಹಿತಾಯಾಂ

## ಪ್ರಥಮೋಽಧ್ಯಾಯಃ



ನಮಃ ಶಿವಾಯ ಸಾಂಬಾಯ ಸಗಣಾಯ ಸಸೂನವೇ ।
ಪ್ರಧಾನಪುರುಷೇಶಾಯ ಸರ್ಗಸ್ಥಿತ್ಯಂತಹೇತವೇ ॥ ೧ ॥

॥ ಋಷಯ ಊಚುಃ ॥

ಶ್ರುತೋಮಾಸಂಹಿತಾ ರಮ್ಯಾ ನಾನಾಖ್ಯಾನಸಮನ್ವಿತಾ ।
ಕೈಲಾಸಸಂಹಿತಾಂ ಬ್ರೂಹಿ ಶಿವತತ್ತ್ವವಿವರ್ಧಿನೀಂ ॥ ೨ ॥

---

### ಒಂದನೆಯ ಅಧ್ಯಾಯ

೧. ಪ್ರಕೃತಿಪುರುಷರಲ್ಲಿ ಪ್ರಧಾನಭೂತನಾದ ಪುರುಷಸ್ವರೂಪನೂ, ಸೃಷ್ಟಿ ಸ್ಥಿತಿಸಂಹಾರಗಳಿಗೆ ಕಾರಣನೂ, ಪಾರ್ವತಿ, ಗಜಾನನ, ಷಣ್ಮುಖ, ಪ್ರಮಥಗಣಗಳು ಇವರಿಂದ ಸಹಿತನೂ ಆದ ಪರಶಿವನಿಗೆ ನಮಸ್ಕಾರವು.

೨. ಋಷಿಗಳು ವ್ಯಾಸಮುನಿಯನ್ನು ಪ್ರಶ್ನೆಮಾಡುತ್ತಾರೆ :—ಎಲೈ ವ್ಯಾಸಮಹರ್ಷಿಯೇ, ವಿಧವಿಧವಾದ ಉಪಾಖ್ಯಾನಗಳಿಂದ ಕೂಡಿ ಬಹುಮನೋಹರವಾಗಿರುವ ಉಮಾಸಂಹಿತೆಯನ್ನು ನಮಗೆ ಹೇಳಿರುತ್ತೀಯೆ. ಈಗ ಶಿವತತ್ತ್ವವನ್ನು ವಿಸ್ತಾರವಾಗಿ ಬೋಧಿಸುವ ಕೈಲಾಸಸಂಹಿತೆಯನ್ನೂ ನಮಗೆ ಹೇಳು ಎಂದು ಕೇಳಿದರು.

॥ ವ್ಯಾಸ ಉವಾಚ ॥

ಶೃಣುತ ಪ್ರೀತಿತೋ ವತ್ಸಾಃ ಕೈಲಾಸಾಖ್ಯಾಂ ಹಿ ಸಂಹಿತಾಂ ।
ಶಿವತತ್ತ್ವಪರಾಂ ದಿವ್ಯಾಂ ವಕ್ಷ್ಯೇ ವಃ ಸ್ನೇಹತಃ ಪರಾಂ ॥ ೩ ॥

ಹಿಮವಚ್ಛಿಖರೇ ಪೂರ್ವಂ ತಪಸ್ಯಂತೋ ಮಹೌಜಸಃ ।
ವಾರಾಣಸೀಂ ಗಂತುಕಾಮಾ ಮುನಯಃ ಕೃತಸಂವಿದಃ ॥ ೪ ॥

ನಿರ್ಗತ್ಯ ತಸ್ಮಾತ್ಸಂಪ್ರಾಪ್ಯ ಗಿರೇಃ ಕಾಶೀಂ ಸಮಾಹಿತಾಃ ।
ಸ್ನಾತವ್ಯಮೇವೇತಿ ತದಾ ದದೃಶುರ್ಮಣಿಕರ್ಣಿಕಾಂ ॥ ೫ ॥

ತತ್ರ ಸ್ನಾತ್ವಾ ಸುಸಂತರ್ಪ್ಯ ದೇವಾದೀನಥ ಜಾಹ್ನವೀಂ ।
ದೃಷ್ಟ್ವಾ ಸ್ನಾತ್ವಾ ಮುನೀಶಾಸ್ತೇ ವಿಶ್ವೇಶಂ ತ್ರಿದಶೇಶ್ವರಂ ॥ ೬ ॥

ನಮಸ್ಕೃತ್ಯಾಥ ಸಂಪೂಜ್ಯ ಭಕ್ತ್ಯಾ ಪರಮಯಾನ್ವಿತಃ ।
ಶತರುದ್ರಾದಿಭಿಃ ಸ್ತುತ್ವಾ ಸ್ತುತಿಭಿರ್ವೇದಪಾರಗಾಃ ॥ ೭ ॥

---

೩. ವ್ಯಾಸಮಹರ್ಷಿಯು ಹೇಳುತ್ತಾನೆ :—ಅಯ್ಯಾ, ಮಹರ್ಷಿಗಳೇ, ಹಾಗೆಯೇ ಆಗಲಿ. ಆ ಕೈಲಾಸಸಂಹಿತೆಯೆಂಬುದು ಶಿವತತ್ವವನ್ನು ತಿಳಿಸುವುದರಿಂದ ಸಂಹಿತೆಗಳಲ್ಲೆಲ್ಲಾ ಉತ್ತಮವಾದದ್ದು. ಅಂತಹ ಆ ದಿವ್ಯಸಂಹಿತೆಯನ್ನು ನಿಮ್ಮ ಮೇಲಿನ ವಿಶ್ವಾಸಕ್ಕಾಗಿ ಹೇಳುವೆನು. ಆದರದಿಂದ ಕೇಳಿ ಎಂದು ಹೇಳಲು ಪ್ರಾರಂಭಿಸಿದನು.

೪–೫. ಪೂರ್ವದಲ್ಲಿ ಮಹಾತೇಜಸ್ವಿಗಳಾದ ಕೆಲವರು ಮುನಿಗಳು ಹಿಮವತ್ಪರ್ವತದಲ್ಲಿ ನಿಯಮದಿಂದ ತಪಸ್ಸನ್ನು ಮಾಡುತ್ತಿದ್ದರು. ಹೀಗಿರಲು ಒಂದು ಸಮಯದಲ್ಲಿ ಕಾಶಿಗೆ ಹೋಗಿ ಅಲ್ಲಿ ಗಂಗಾಸ್ನಾನ ಮಾಡಬೇಕೆಂದು ಅವರಿಗೆ ಮನಸ್ಸಾಗಲು, ಅಲ್ಲಿಂದ ಹೊರಟು ಕಾಶಿಗೆ ಬಂದು ಅಲ್ಲಿರುವ ಪ್ರಸಿದ್ಧವಾದ ಮಣಿಕರ್ಣಿಕಾ ಎಂಬ ಘಟ್ಟವನ್ನು ನೋಡಿದರು.

೬–೭. ಅಲ್ಲಿ ಸ್ನಾನಮಾಡಿ ದೇವರ್ಷಿಪಿತೃಗಳಿಗೆ ತರ್ಪಣಾದಿಗಳನ್ನು ಕೊಟ್ಟು ಬಳಿಕ ಗಂಗೆಯಲ್ಲಿ ಸ್ನಾನಮಾಡಿ ದೇವದೇವನಾದ ವಿಶ್ವೇಶ್ವರನನ್ನು ಭಕ್ತಿಯಿಂದ ಪೂಜಿಸಿ ನಮಸ್ಕರಿಸಿದರು.. ಬಳಿಕ ವೇದಪಾರಗರಾದ ಆ ಮುನಿಗಳು ಶತರುದ್ರಾದಿ ವೇದಮಂತ್ರಗಳಿಂದಲೂ, ಅನೇಕ ಸ್ತೋತ್ರಗಳಿಂದಲೂ ವಿಶ್ವೇಶ್ವರನನ್ನು ಅನೇಕ ವಿಧವಾಗಿ ಸ್ತೋತ್ರಮಾಡಿದರು.

ಆತ್ಮಾನಂ ಮೇನಿರೇ ಸರ್ವೇ ಕೃತಾರ್ಥಾ ವಯಮಿತ್ಯುತ .
ಶಿವಪ್ರೀತ್ಯಾ ಸುಪೂರ್ಣಾರ್ಥಾಶ್ಶಿವಭಕ್ತಿರತಾಸ್ಸದಾ ॥ ೮ ॥

ತಸ್ಮಿನ್ನವಸರೇ ಸೂತಂ ಪಂಚಕ್ರೋಶದಿದೃಕ್ಷಯಾ ।
ಗತ್ವಾ ಸಮಾಗತಂ ವೀಕ್ಷ್ಯ ಮುದಾ ತೇ ತಂ ವಿವಂದಿರೇ ॥ ೯ ॥

ಸೋಽಪಿ ವಿಶ್ವೇಶ್ವರಂ ಸಾಕ್ಷಾದ್ದೇವದೇವಮುಮಾಪತಿಂ ।
ನಮಸ್ಕೃತ್ಯಾಥ ತೈಸ್ಸಾಕಂ ಮುಕ್ತಿಮಂಡಪಮಾವಿಶತ್ ॥ ೧೦ ॥

ತತ್ರಾಸೀನಂ ಮಹಾತ್ಮಾನಂ ಸೂತಪೌರಾಣಿಕೋತ್ತಮಂ ।
ಅರ್ಘ್ಯಾದಿಭಿಸ್ತದಾ ಸರ್ವೇ ಮುನಯಸ್ಸಮುಪಾಚರನ್ ॥ ೧೧ ॥

ತತಃ ಸೂತಃ ಪ್ರಸನ್ನಾತ್ಮಾ ಮುನೀನಾಲೋಕ್ಯ ಸುವ್ರತಾನ್ ।
ಪಪ್ರಚ್ಛ ಕುಶಲಂ ತೇಽಪಿ ಪ್ರೋಚುಃ ಕುಶಲಮಾತ್ಮನಃ ॥ ೧೨ ॥

---

೮. ಆ ಮುನಿಗಳಾದರೋ ಶಿವನಲ್ಲಿ ಪರಮಭಕ್ತಿಯುಳ್ಳವರು. ಶಿವನನ್ನು ಸಂತೋಷಪಡಿಸುವುದೇ ತಮ್ಮ ಮನೋರಥವೆಂದು ಭಾವಿಸಿ, ವಿಧವಿಧವಾಗಿ ಸ್ತೋತ್ರ ಮಾಡಿ, ತಾವೆಲ್ಲರೂ ಕೃತಾರ್ಥರಾದೆವೆಂದು ತಿಳಿದು ಸಂತೋಷದಿಂದಿದ್ದರು.

೯. ಈ ಸಮಯದಲ್ಲಿ ಪಂಚಕ್ರೋಶವನ್ನು ನೋಡಬೇಕೆಂಬ ಅಪೇಕ್ಷೆಯಿಂದ ಸೂತಮುನಿಯು ಅಲ್ಲಿಗೆ ಬರಲು ಅವನನ್ನು ಕಂಡು ಋಷಿಗಳೆಲ್ಲರೂ ಸಂತೋಷದಿಂದ ಅವನ ಸಮೀಪವನ್ನೈದಿದರು.

೧೦. ಆ ಸೂತಮುನಿಯೂ ಸಹ ದೇವದೇವನೂ ಪಾರ್ವತೀಪತಿಯೂ ಆದ ಸಾಕ್ಷಾದ್ವಿಶ್ವೇಶ್ವರನನ್ನು ಭಕ್ತಿಯಿಂದ ನಮಸ್ಕರಿಸಿ, ಆ ಮುನಿಗಳೊಡನೆ ಸಹಿತನಾಗಿ ಅಲ್ಲಿರುವ ಮುಕ್ತಿಮಂಟಪಕ್ಕೆ ಬಂದು ಸುಖಾಸನದಲ್ಲಿ ಕುಳಿತನು.

೧೧. ಸೂತಪೌರಾಣಿಕನು ಸುಖಾಸನದಲ್ಲಿ ಕುಳಿತಮೇಲೆ ಆ ಮುನಿಗಳೆಲ್ಲರೂ ಅವನನ್ನು ಅರ್ಘ್ಯಾದಿಗಳಿಂದ ಸತ್ಕರಿಸಿ ಉಪಚರಿಸಿದರು.

೧೨. ಬಳಿಕ ಸೂತನು ಪ್ರಸನ್ನಚಿತ್ತನಾಗಿ ನಿಯಮಶೀಲರಾದ ಆ ಮುನಿಗಳನ್ನು ಕುಶಲಪ್ರಶ್ನೆಮಾಡಲು ಅವರು ತಮ್ಮ ತಮ್ಮ ಕ್ಷೇಮಸಮಾಚಾರಗಳನ್ನು ಹೇಳಿದರು.

ತೇ ತು ಸಂಹೃಷ್ಟಹೃದಯಂ ಜ್ಞಾತ್ವಾ ತಂ ವೈ ಮುನೀಶ್ವರಾಃ ।
ಪ್ರಣವಾರ್ಥಾವಗತ್ಯರ್ಥಮೂಚುಃ ಪ್ರಾಸ್ತಾವಿಕಂ ವಚಃ ॥ ೧೩ ॥

॥ ಮುನಯ ಊಚುಃ ॥

ವ್ಯಾಸಶಿಷ್ಯ ಮಹಾಭಾಗ ಸೂತ ಪೌರಾಣಿಕೋತ್ತಮ ।
ಧನ್ಯಸ್ತ್ವಂ ಶಿವಭಕ್ತೋ ಹಿ ಸರ್ವವಿಜ್ಞಾನಸಾಗರಃ ॥ ೧೪ ॥

ಭವಂತಮೇವ ಭಗವಾನ್ ವ್ಯಾಸಸ್ಸರ್ವಜಗದ್ಗುರುಃ ।
ಅಭಿಷಿಚ್ಯ ಪುರಾಣಾನಾಂ ಗುರುತ್ವೇ ಸಮಯೋಜಯತ್ ॥ ೧೫ ॥

ತಸ್ಮಾತ್ಪೌರಾಣಿಕೀ ವಿದ್ಯಾ ಭವತೋ ಹೃದಿ ಸಂಸ್ಥಿತಾ ।
ಪುರಾಣಾನಿ ಚ ಸರ್ವಾಣಿ ವೇದಾರ್ಥಂ ಪ್ರವದಂತಿ ಹಿ ॥ ೧೬ ॥

ವೇದಾಃ ಪ್ರಣವಸಂಭೂತಾಃ ಪ್ರಣವಾರ್ಥೋ ಮಹೇಶ್ವರಃ ।
ಅತೋ ಮಹೇಶ್ವರಸ್ಥಾನಂ ತ್ವಯಿ ಧಿಷ್ಣ್ಯಂ ಪ್ರತಿಷ್ಠಿತಂ ॥ ೧೭ ॥

---

೧೩. ಅದನ್ನೆಲ್ಲಾ ಕೇಳಿ ಸೂತಮುನಿಯು ಸಂತೋಷದಿಂದಿರಲು ಮುನೀಶ್ವರರು ಪ್ರಣವಮಹಾಮಂತ್ರದ ಸ್ವರೂಪವನ್ನು ಕೇಳಿ ತಿಳಿಯಬೇಕೆಂಬ ಅಭಿಲಾಷೆಯಿಂದ ಮೊದಲು ಈರೀತಿ ಪ್ರಸ್ತಾಪಮಾಡಿದರು.

೧೪. ಮುನಿಗಳು ಕೇಳಿದರು :—ಎಲೈ ವ್ಯಾಸಶಿಷ್ಯನಾದ ಸೂತನೇ, ನೀನು ಪುರಾಣಗಳನ್ನು ಹೇಳುವವರಲ್ಲಿ ಶ್ರೇಷ್ಠನು, ಪೂಜ್ಯನು, ಶಿವನಲ್ಲಿ ನಿನಗೆ ಅಚಲವಾದ ಭಕ್ತಿಯಿರುವುದು. ಆದುದರಿಂದ ನೀನೇ ಧನ್ಯನು. ಸಮಸ್ತಜ್ಞಾನಗಳಿಗೂ ನೀನು ನಿಧಿಯಂತಿರುವೆ, ಎಂದರೆ ಎಲ್ಲವನ್ನೂ ತಿಳಿದಿರುವೆ.

೧೫. ಸರ್ವಜಗತ್ತಿಗೂ ಗುರುವೆನಿಸಿದ ಆ ವ್ಯಾಸಮಹಾಮುನಿಯು ನಿನ್ನ ಅಸದೃಶವಾದ ಜ್ಞಾನವನ್ನು ನೋಡಿ, ಪುರಾಣಗಳಿಗೆಲ್ಲಾ ನಿನ್ನನ್ನೇ ಗುರುಸ್ಥಾನದಲ್ಲಿ ಪಟ್ಟಗಟ್ಟಿ ಜನರಿಗೆ ಪುರಾಣಶ್ರವಣಮಾಡಿಸಲು ನಿಯಮಿಸಿರುವನು.

೧೬-೧೭. ಆದುದರಿಂದ ಪುರಾಣವಿದ್ಯೆಗಳೆಲ್ಲವೂ ನಿನ್ನ ಹೃದಯದಲ್ಲಿಯೇ ನೆಲಸಿರುವವು. ಆ ಪುರಾಣಗಳಾದರೋ ವೇದಾರ್ಥವನ್ನು ಸ್ಪಷ್ಟಪಡಿಸುವವು. ವೇದಗಳು ಪ್ರಣವದಿಂದ ಉಂಟಾದವು. ಅಂತಹ ಪ್ರಣವವು ಮಹೇಶ್ವರನನ್ನು ಪ್ರತಿಪಾದಿಸುವುದು. ಮಹೇಶ್ವರನ ಸ್ವರೂಪವನ್ನು ತಿಳಿಯಬೇಕಾದರೆ ಪ್ರಣ

ತ್ವನ್ಮುಖಾಬ್ಜಪರಿಸ್ಯಂದಮಕರಂದಮನೋಹರಂ ।
ಪ್ರಣವಾರ್ಥಾಮೃತಂ ಪೀತ್ವಾ ಭವಿಷ್ಯಾಮೋ ಗತಜ್ವರಾಃ ॥ ೧೮ ॥

ವಿಶೇಷತೋ ಗುರುಸ್ತ್ವಂ ಹಿ ನಾನ್ಯೋಽಸ್ಮಾಕಂ ಮಹಾಮತೇ ।
ಪರಂ ಭಾವಂ ಮಹೇಶಸ್ಯ ಪರಯಾ ಕೃಪಯಾ ವದ ॥ ೧೯ ॥

ಇತಿ ತೇಷಾಂ ವಚಃ ಶ್ರುತ್ವಾ ಸೂತೋ ವ್ಯಾಸಪ್ರಿಯಃ ಸುಧೀಃ ।
ಗಣೇಶಂ ಷಣ್ಮುಖಂ ಸಾಕ್ಷಾನ್ಮಹೇಶಾನಂ ಮಹೇಶ್ವರೀಂ ॥ ೨೦ ॥

ಶಿಲಾದತನಯಂ ದೇವಂ ನಂದೀಶಂ ಸುಯಶಾಪತಿಂ ।
ಸನತ್ಕುಮಾರಂ ವ್ಯಾಸಂ ಚ ಪ್ರಣಿಪತ್ಯೇದಮಬ್ರವೀತ್ ॥ ೨೧ ॥

॥ ಸೂತ ಉವಾಚ ॥

ಸಾಧು ಸಾಧು ಮಹಾಭಾಗ ಮುನಯಃ ಕ್ಷೀಣಕಲ್ಮಷಾಃ ।
ಮತಿರ್ದೃಢತರಾ ಜಾತಾ ದುರ್ಲಭಾ ಸಾಪಿ ದುಷ್ಕೃತಾಂ ॥ ೨೨ ॥

---

ವಾರ್ಥವನ್ನು ಅವಶ್ಯವಾಗಿ ತಿಳಿಯಲೇಬೇಕು. ಆದುದರಿಂದ ಮಹೇಶ್ವರಪ್ರತಿಪಾದ್ಯ ವಾದ ಪ್ರಣವಾರ್ಥಜ್ಞಾನವು ನಿನ್ನಿಂದಲೇ ನಮಗೆ ಆಗಬೇಕಾಗಿರುವುದು.

೧೮. ನಿನ್ನ ಮುಖಾರವಿಂದದಿಂದ ಹೊರಡುವ ಪ್ರಣವಾರ್ಥವೆಂಬ ಮನೋ ಹರವಾದ ಅಮೃತವನ್ನು ಪಾನಮಾಡಿ ಸಂಸಾರಕ್ಲೇಶಗಳಿಂದ ಮುಕ್ತರಾಗಬೇಕೆಂದು ಬಯಸುವೆವು.

೧೯. ಇದಲ್ಲದೆ ನೀನೇ ನಮಗೆ ಗುರುವು. ಮಹಾ ಬುದ್ಧಿಶಾಲಿಯು. ನಿನ್ನಂತಹ ಗುರುವು ನಮಗೆ ಮತ್ತೊಬ್ಬರಿಲ್ಲ. ಆದುದರಿಂದ ನಮ್ಮ ಮೇಲೆ ದಯವಿಟ್ಟು ಮಹೇ ಶ್ವರನ ಪರಸ್ವರೂಪವನ್ನು ವಿವರಿಸಿ ಹೇಳಿ, ನಮ್ಮನ್ನು ಅನುಗ್ರಹಿಸು ಎಂದನು.

೨೦-೨೧. ಹೀಗೆ ಹೇಳುತ್ತಿರುವ ಆ ಮುನಿಗಳ ಮಾತನ್ನು ಕೇಳಿ ಮಹಾ ಬುದ್ಧಿಶಾಲಿಯಾದ ಆ ವ್ಯಾಸಶಿಷ್ಯನು, ಗಣೇಶ, ಷಣ್ಮುಖ, ಮಹೇಶ್ವರ, ಪಾರ್ವತೀ, ನಂದಿ, ಸನತ್ಕುಮಾರ, ವ್ಯಾಸ ಇವರನ್ನು ನಮಸ್ಕರಿಸಿ, ಹೇಳಲುಪಕ್ರಮಿಸಿದನು.

೨೨. ಸೂತನು ಹೇಳಿದನು :—ಎಲೈ ಮುನಿಗಳೇ, ನೀವು ಒಳ್ಳೆಯ ವಿಷಯ ವನ್ನೇ ಕೇಳಿದಿರಿ. ನೀವೇ ಭಾಗ್ಯಶಾಲಿಗಳು, ದೋಷರಹಿತರು. ಏಕೆಂದರೆ ಪುರಾಣ ಶ್ರವಣದಲ್ಲಿ ನಿಮಗೆ ದೃಢವಾದ ಬುದ್ಧಿಯು ಹುಟ್ಟಿದೆ. ಅಂತಹ ಸದ್ಬುದ್ಧಿಯು ಪಾಪಾ ತ್ಮರಿಗೆ ಎಂದಿಗೂ ಹುಟ್ಟುವುದಿಲ್ಲ.

ಪಾರಾಶರ್ಯೇಣ ಗುರುಣಾ ನೈಮಿಷಾರಣ್ಯವಾಸಿನಾಂ ।
ಮುನೀನಾಮುಪದಿಷ್ಟಂ ಯದ್ವಕ್ಷ್ಯೇ ತನ್ಮುನಿಪುಂಗವಾಃ ॥ ೨೩ ॥

ಯಸ್ಯ ಶ್ರವಣಮಾತ್ರೇಣ ಶಿವಭಕ್ತಿರ್ಭವೇನ್ನೃಣಾಂ ।
ಸಾವಧಾನಾ ಭವಂತೋಽದ್ಯ ಶೃಣ್ವಂತು ಪರಯಾ ಮುದಾ ॥ ೨೪ ॥

ಸ್ವಾರೋಚಿಷೇಂತರೇ ಪೂರ್ವಂ ತಪಸ್ಯಂತೋ ದೃಢವ್ರತಾಃ ।
ಋಷಯೋ ನೈಮಿಷಾರಣ್ಯೇ ಸರ್ವಸಿದ್ಧನಿಷೇವಿತೇ ॥ ೨೫ ॥

ದೀರ್ಘಸತ್ರಂ ವಿತನ್ವಂತೋ ರುದ್ರಮಧ್ವರನಾಯಕಂ ।
ಪ್ರೀಣಯಂತಃ ಪರಂ ಭಾವಮೈಶ್ವರ್ಯಂ ಜ್ಞಾತುಮಿಚ್ಛವಃ ॥ ೨೬ ॥

ನಿವಸಂತಿ ಸ್ಮ ತೇ ಸರ್ವೇ ವ್ಯಾಸದರ್ಶನಕಾಂಕ್ಷಿಣಃ ।
ಶಿವಭಕ್ತಿರತಾ ನಿತ್ಯಂ ಭಸ್ಮರುದ್ರಾಕ್ಷಧಾರಿಣಃ ॥ ೨೭ ॥

---

೨೩. ಎಲೈ ಮುನಿಶ್ರೇಷ್ಠರೆ, ಪರಾಶರಪುತ್ರನಾದ ವ್ಯಾಸಮಹರ್ಷಿಯು ನೈಮಿಶಾರಣ್ಯವಾಸಿಗಳಾದ ಋಷಿಗಳಿಗೆ ಹಿಂದೆ ಉಪದೇಶಮಾಡಿರುವ ವಿಷಯವನ್ನೇ ಈಗ ನಿಮಗೆ ಹೇಳುವೆನು.

೨೪. ಆ ವ್ಯಾಸೋಪದೇಶವನ್ನು ಕೇಳಿದ ಮಾತ್ರದಿಂದಲೇ ಮಾನವರಿಗೆ ಶಿವನಲ್ಲಿ ಭಕ್ತಿಯು ಜನಿಸುವುದು. ಆದುದರಿಂದ ನೀವೆಲ್ಲರೂ ಸಂತೋಷಚಿತ್ತರಾಗಿ ನಾನು ಹೇಳುವುದನ್ನು ಸಾವಧಾನವಾಗಿ ಶ್ರವಣಮಾಡಿ.

೨೫-೨೭. ಹಿಂದೆ ಸ್ವಾರೋಚಿಷ ಮನ್ವಂತರದಲ್ಲಿ ಜಿತೇಂದ್ರಿಯರಾದ ಅನೇಕ ಋಷಿಗಳು ನೈಮಿಷಾರಣ್ಯವೆಂಬ ಸಿದ್ಧಸಾಧ್ಯರು ವಾಸಿಸುವ ದಿವ್ಯಕ್ಷೇತ್ರದಲ್ಲಿ ತಪಸ್ಸನ್ನು ಮಾಡುತ್ತಿದ್ದರು. ಆಗ ಅವರು ಶಿವಸ್ವರೂಪವನ್ನು ತಿಳಿಯಬೇಕೆಂದು ಅಪೇಕ್ಷಿಸಿ, ಅದಕ್ಕಾಗಿ ರುದ್ರನನ್ನುದ್ದೇಶಿಸಿ ಬಹುಕಾಲ ಮಾಡಬೇಕಾದ ಒಂದು ಯಾಗವನ್ನು ಆಚರಿಸುತ್ತಿದ್ದರು. ಆ ಋಷಿಗಳು ಭಸ್ಮವನ್ನೂ, ರುದ್ರಾಕ್ಷವನ್ನೂ ಯಾವಾಗಲೂ ಧರಿಸಿಕೊಂಡು ಶಿವನಲ್ಲಿ ಪರಮ ಭಕ್ತಿಯುಳ್ಳವರಾಗಿದ್ದರು. ಈರೀತಿ ಯಾಗವನ್ನು ಮಾಡುತ್ತಾ ವ್ಯಾಸಮುನಿಯು ಅಲ್ಲಿಗೆ ಯಾವಾಗ ಬರುವನೆಂದು ನಿರೀಕ್ಷಿಸುತ್ತಿದ್ದರು.

ತೇಷಾಂ ಭಾವಂ ಸಮಾಲೋಕ್ಯ ಭಗವಾನ್ಬಾದರಾಯಣಃ ।
ಪ್ರಾದುರ್ಬಭೂವ ಸರ್ವಾತ್ಮಾ ಪರಾಶರತಪಃಫಲಂ ॥ ೨೮ ॥

ತಂ ದೃಷ್ಟ್ವಾ ಮುನಯಸ್ಸರ್ವೇ ಪ್ರಹೃಷ್ಟವದನೇಕ್ಷಣಾಃ ।
ಅಭ್ಯುತ್ಥಾನಾದಿಭಿಸ್ಸರ್ವೈರುಪಚಾರೈರುಪಾಚರನ್ ॥ ೨೯ ॥

ಸತ್ಕೃತ್ಯ ಪ್ರದದುಸ್ತಸ್ಮೈ ಸೌವರ್ಣಂ ವಿಷ್ಟರಂ ಶುಭಂ ।
ಸುಖೋಪವಿಷ್ಟಃ ಸ ತದಾ ತಸ್ಮಿನ್ಸೌವರ್ಣವಿಷ್ಟರೇ ।
ಪ್ರಾಹ ಗಂಭೀರಯಾ ವಾಚಾ ಪಾರಾಶರ್ಯೋ ಮಹಾಮುನಿಃ ॥ ೩೦ ॥

॥ ವ್ಯಾಸ ಉವಾಚ ॥

ಕುಶಲಂ ಕಿಂ ನು ಯುಷ್ಮಾಕಂ ಪ್ರಬ್ರೂತಾಸ್ಮಿನ್ಮಹಾಮುಖೇ ।
ಅರ್ಚಿತಃ ಕಿಂ ನು ಯುಷ್ಮಾಭಿಸ್ಸಮ್ಯಗಧ್ವರನಾಯಕಃ ॥ ೩೧ ॥

ಕಿಮರ್ಥಮತ್ರ ಯುಷ್ಮಾಭಿರಧ್ವರೇ ಪರಮೇಶ್ವರಃ ।
ಸ್ವರ್ಚಿತೋ ಭಕ್ತಿಭಾವೇನ ಸಾಂಬಸ್ಸಂಸಾರಮೋಚಕಃ ॥ ೩೨ ॥

---

೨೮. ಇವರ ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ತಿಳಿದು ಪರಾಶರಪುತ್ರನಾದ ಭಗವಾನ್ ವ್ಯಾಸಮುನಿಯು ಅವರಿಗೆ ಪ್ರತ್ಯಕ್ಷನಾಗಲು,

೨೯. ಆ ಮುನಿಯನ್ನು ನೋಡಿ ಋಷಿಗಳೆಲ್ಲರೂ ಕೂಡಲೇ ಎದ್ದು, ಗೌರವಿಸಿ ಸಂತೋಷದಿಂದ ಅರ್ಘ್ಯಾದಿಗಳನ್ನು ಕೊಟ್ಟು ಉಪಚರಿಸಿದರು.

೩೦. ಕುಳಿತುಕೊಳ್ಳಲು ಸುವರ್ಣಮಯವಾದ ದಿವ್ಯಾಸನವನ್ನು ಕೊಟ್ಟರು. ಅದರ ಮೇಲೆ ಸುಖವಾಗಿ ಕುಳಿತು ಆ ಪರಾಶರಪುತ್ರನಾದ ವ್ಯಾಸಮಹರ್ಷಿಯು ಗಂಭಿರವಾಗಿಂತೆಂದನು.

೩೧. ವ್ಯಾಸಋಷಿಯು ಹೇಳಿದನು:—ಎಲೈ ಋಷಿಗಳಿರಾ ಈ ಪ್ರಭೂತವಾದ ಯಜ್ಞವನ್ನು ಮಾಡುತ್ತಿರುವ ನೀವೆಲ್ಲರೂ ಕುಶಲದಿಂದ ಇರುವಿರಷ್ಟೆ? ಯಜ್ಞಕ್ಕೆ ಅಧಿಪನಾದ ಶಿವನನ್ನು ನೀವು ಚೆನ್ನಾಗಿ ಪೂಜಿಸಿರುವಿರಾ ?

೩೨. ನೀವುಗಳು ಸಂಸಾರಸಂಬಂಧವಾದ ಕ್ಲೇಶಗಳನ್ನು ನಾಶಪಡಿಸುವವನಾದ ಶಿವನನ್ನು ಭಕ್ತಿಭಾವದಿಂದ ಯಜ್ಞದಲ್ಲಿಯಾವ ಇಷ್ಟಾರ್ಥಸಾಧನೆಗಾಗಿ ಪೂಜಿಸಿದಿರಿ ?

ಯುಷ್ಮತ್ಪ್ರವೃತ್ತಿರ್ಮೇ ಭಾತಿ ಶುಶ್ರೂಷಾ ಪೂರ್ವಮೇವ ಹಿ ।
ಪರಭಾವೇ ಮಹೇಶಸ್ಯ ಮುಕ್ತಿಹೇತೋಶ್ಶಿವಸ್ಯ ಚ ॥ ೩೩ ॥

ಏವಮುಕ್ತ್ವಾ ಮುನೀಂದ್ರೇಣ ವ್ಯಾಸೇನಾಮಿತತೇಜಸಾ ।
ಮುನಯೋ ನೈಮಿಷಾರಣ್ಯವಾಸಿನಃ ಪರಮೌಜಸಃ ॥ ೩೪ ॥

ಪ್ರಣಿಪತ್ಯ ಮಹಾತ್ಮಾನಂ ಪಾರಾಶರ್ಯಂ ಮಹಾಮುನಿಂ ।
ಶಿವಾನುರಾಗಸಂಹೃಷ್ಟಮಾನಸಂ ಚ ತಮಬ್ರುವನ್ ॥ ೩೫ ॥

॥ ಮುನಯ ಊಚುಃ ॥

ಭಗವನ್ಮುನಿಶಾರ್ದೂಲ ಸಾಕ್ಷಾನ್ನಾರಾಯಣಾಂಶಜ ।
ಕೃಪಾನಿಧೇ ಮಹಾಪ್ರಾಜ್ಞ ಸರ್ವವಿದ್ಯಾಧಿಪ ಪ್ರಭೋ ॥ ೩೬ ॥

ತ್ವಂ ಹಿ ಸರ್ವಜಗದ್ಭರ್ತುರ್ಮಹಾದೇವಸ್ಯ ವೇಧಸಃ ।
ಸಾಂಬಸ್ಯ ಸಗಣಸ್ಯಾಸ್ಯ ಪ್ರಸಾದಾನಾಂ ನಿಧಿಸ್ಸ್ವಯಂ ॥ ೩೭ ॥

---

೩೩. ನೀವು ಶಿವನನ್ನು ಚೆನ್ನಾಗಿ ಸೇವಿಸಬೇಕೆಂದು ಇಚ್ಛೆಯನ್ನು ಹೊಂದಿರುವುದನ್ನೂ ನೀವು ಮಾಡುತ್ತಿರುವ ಕೆಲಸವನ್ನೂ ವಿಚಾರಮಾಡಿದರೆ ನೀವು ಶಿವನ ಪರಭಾವವನ್ನು ಹೊಂದಿ ತನ್ಮೂಲಕವಾಗಿ ಮುಕ್ತಿಯನ್ನು ಹೊಂದಲು ಇಚ್ಛೆಯುಳ್ಳವರಾಗಿರುವಿರೆಂದು ನನಗೆ ತಿಳಿದು ಬರುತ್ತದೆ ಎಂದನು.

೩೪. ವ್ಯಾಸಋಷಿಯು ಹೀಗೆ ಹೇಳುತ್ತಿರುವಾಗ ನೈಮಿಶಾರಣ್ಯದಲ್ಲಿ ವಾಸ ಮಾಡುತ್ತಿರುವ ತೇಜಶ್ಶಾಲಿಗಳಾದ ಆ ಋಷಿಗಳು, ಬಹಳ ಮಹಿಮೆಯುಳ್ಳವನೂ ಪರಾಶರಋಷಿಯ ಪುತ್ರನೂ ಆದ ವ್ಯಾಸಋಷಿಗೆ ಭಕ್ತಿಯಿಂದ ನಮಸ್ಕರಿಸಿ ಶಿವನಲ್ಲಿ ಉಂಟಾದ ಭಕ್ತ್ಯತಿಶಯದಿಂದ ಇಂತೆಂದರು.

೩೫. ಪೂಜ್ಯನಾದ ಎಲೈ ವ್ಯಾಸಋಷಿಯೇ ನೀನು ಪ್ರತ್ಯಕ್ಷವಾದ ವಿಷ್ಣುವಿನ ಅಂಶದಿಂದ ಹುಟ್ಟಿರುವೆ. ಎಲ್ಲಾ ವಿದ್ಯೆಗಳಿಗೂ ಅಧಿಪತಿಯಾಗಿರುವೆ. ಬಹಳ ತಿಳುವಳಿಕೆಯುಳ್ಳವನಾಗಿಯೂ ಸರ್ವಪ್ರಾಣಿಗಳಲ್ಲಿ ದಯೆಯುಳ್ಳವನಾಗಿಯೂ ಇರುತ್ತೀಯೆ.

೩೬-೩೭. ಆದುದರಿಂದ ಎಲೈ ಪ್ರಭುವಾದ ವ್ಯಾಸಋಷಿಯೇ, ನೀನು ಪಾರ್ವತಿಯಿಂದಲೂ, ಗಣಗಳಿಂದಲೂ, ಕೂಡಿ ಶೋಭಿಸುತ್ತಾ ಎಲ್ಲಾ ಲೋಕಗಳಿಗೂ ಅಧಿಪತಿಯಾದ ಪರಮೇಶ್ವರನ ಅನುಗ್ರಹವೆಂಬ ನಿಧಿಯನ್ನು ಸಂಪಾದಿಸಿರುತ್ತೀಯೆ.

ತ್ವತ್ಪಾದಾಬ್ಜರಸಾಸ್ವಾದಮಧುಪಾಯಿತಮಾನಸಾಃ ।
ಕೃತಾರ್ಥಾ ವಯಮದ್ಯೈವ ಭವತ್ಪಾದಾಬ್ಜದರ್ಶನಾತ್ ॥ ೩೮ ॥

ತ್ವದೀಯಚರಣಾಂಭೋಜದರ್ಶನಂ ಖಲು ಪಾಪಿನಾಂ ।
ದುರ್ಲಭಂ ಲಬ್ಧಮಸ್ಮಾಭಿಸ್ತಸ್ಮಾತ್ಸುಕೃತಿನೋ ವಯಂ ॥ ೩೯ ॥

ಅಸ್ಮಿನ್ದೇಶೇ ಮಹಾಭಾಗ ನೈಮಿಷಾರಣ್ಯಸಂಜ್ಞಕೇ ।
ದೀರ್ಘಸತ್ರಾನ್ವಿತಾಸ್ಸರ್ವೇ ಪ್ರಣವಾರ್ಥಪ್ರಕಾಶಕಾಃ ॥ ೪೦ ॥

ಶ್ರೋತವ್ಯಃ ಪರಮೇಶಾನ ಇತಿ ಕೃತ್ವಾ ವಿನಿಶ್ಚಿತಾಃ ।
ಪರಸ್ಪರಂ ಚಿಂತಯಂತಃ ಪರಂ ಭಾವಂ ಮಹೇಶಿತುಃ ॥ ೪೧ ॥

---

೩೮. ನಿನ್ನ ಪಾದಕಮಲಗಳ ದೆಸೆಯಿಂದುಂಟಾದ ಮಕರಂದದ ಪಾನದಲ್ಲಿ ನಾವೆಲ್ಲರೂ ಆಸಕ್ತವಾದ ಮನಸ್ಸುಳ್ಳವರಾಗಿ ನಿನ್ನ ಪಾದಕಮಲಗಳ ದರ್ಶನದಿಂದ ಕೃತಕೃತ್ಯರಾಗಿರುವೆವು.

೩೯. ಪಾಪಿಗಳಾದವರಿಗೆ ನಿನ್ನ ಪಾದಕಮಲದ ದರ್ಶನವೂ ಕೂಡ ಕಷ್ಟತರ ವಾಗಿರುವುದು. ಹೀಗಿರುವಲ್ಲಿ ನಮಗೆ ನಿನ್ನ ಪಾದದರ್ಶನವು ಸಿಕ್ಕಿರುವುದರಿಂದ ನಾವುಗಳೆಲ್ಲರೂ ಬಹಳ ಪುಣ್ಯಶಾಲಿಗಳಾಗಿರುವೆವು.

೪೦. ಎಲೈ ಪೂಜ್ಯನಾದ ವ್ಯಾಸಋಷಿಯೇ, ನಾವು ನೈಮಿಷವೆಂದು ಹೆಸರುಳ್ಳ ಈ ಕಾಡಿನಲ್ಲಿ ಬಹಳ ದೊಡ್ಡದಾದ ಸತ್ರಯಾಗವನ್ನು ಮಾಡಲು ಉದ್ಯುಕ್ತರಾಗಿ ಪ್ರಣವ ಮಂತ್ರದ ಅರ್ಥವನ್ನು ತಿಳಿಯಲು ಆಸೆಯುಳ್ಳವರಾಗಿರುವೆವು.

೪೧. ನಾವು ಪರಮೇಶ್ವರನ ಉತ್ತಮವಾದ ಸ್ವರೂಪವನ್ನು ಪರಸ್ಪರವಾಗಿ ಚರ್ಚೆಮಾಡಿ ತಿಳಿಯುವ ಉದ್ದೇಶದಿಂದ ನಿನ್ನಿಂದ ಪರಮೇಶ್ವರನ ವಿಷಯವನ್ನು ಕೇಳಲು ಇಷ್ಟವುಳ್ಳವರಾಗಿರುವೆವು.

ಅಜ್ಞಾತವಂತ ಏವೈತೇ ವಯಂ ತಸ್ಮಾದ್ಧವಾನ್ಪ್ರಭೋ ।
ಛೇತ್ತುಮರ್ಹತಿ ತಾನ್ಸರ್ವಾನ್ಸಂಶಯಾನಲ್ಪಚೇತಸಾಂ ॥ ೪೨ ॥

ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹಿ ಜಗತ್ತ್ರಯೇ ।
ತಸ್ಮಾದಪಾರಗಂಭೀರವ್ಯಾಮೋಹಾಬ್ಧೌ ನಿಮಜ್ಜತಃ ॥ ೪೩ ॥

ತಾರಯಸ್ವ ಶಿವಜ್ಞಾನಪೋತೇನಾಸ್ಮಾನ್ದಯಾನಿಧೇ ।
ಶಿವಸದ್ಭಕ್ತಿತತ್ತ್ವಾರ್ಥಂ ಜ್ಞಾತುಂ ಶ್ರದ್ಧಾಲವೋ ವಯಂ ॥ ೪೪ ॥

ಸ ಏವಮಭ್ಯರ್ಥಿತಸ್ತತ್ರ ಮುನಿಭಿರ್ವೇದಪಾರಗೈಃ ।
ಸರ್ವವೇದಾರ್ಥವಿನ್ಮುಖ್ಯಃ ಶುಕತಾತೋ ಮಹಾಮುನಿಃ ॥
ವೇದಾಂತಸಾರಸರ್ವಸ್ವಂ ಪ್ರಣವಂ ಪರಮೇಶ್ವರಂ ॥ ೪೫ ॥

---

೪೨. ನೀನು ಎಲ್ಲವನ್ನೂ ತಿಳಿದಿರುವೆ. ನೀನು ಮಹಾಮಹಿಮೆಯುಳ್ಳವನು. ನಾವುಗಳು ಏನೂ ತಿಳಿಯದವರು. ಅಲ್ಪ ಬುದ್ಧಿಯುಳ್ಳವರು. ಸಂಶಯವು ಬಹಳ ವಾಗಿರುವುದು. ಇದನ್ನೆಲ್ಲಾ ತಿಳಿದು ನಮ್ಮ ಸಂಶಯಗಳನ್ನು ನಾಶಮಾಡಬೇಕು.

೪೩–೪೪. ಈ ಪ್ರಕಾರದಿಂದ ಇರುವ ನಮ್ಮ ಸಂಶಯವನ್ನು ಪರಿಹರಿಸಲು ನಿನಗಿಂತಲೂ ಬೇರೆಯಾದವರು ಮೂರು ಲೋಕದಲ್ಲೂ ಇಲ್ಲ. ಆದ್ದರಿಂದ ದಡ ವಿಲ್ಲದಿರುವ ಆಳವಾದ ಸಮುದ್ರದಂತಿರುವ ಅಜ್ಞಾನದಲ್ಲಿ ಮುಳುಗಿಹೋಗುತ್ತಿರುವ ನಮ್ಮನ್ನು ದಯಾಶಾಲಿಯಾದ ನೀನು ಶಿವಜ್ಞಾನವೆಂಬ ತೆಪ್ಪದಿಂದಉದ್ಧರಿಸಿ ರಕ್ಷಿಸು. ನಾವುಗಳು ಶಿವನ ಸಂಬಂಧವಾದ ಉತ್ತಮವಾದ ಭಕ್ತಿಯಿಂದ ಕೂಡಿ ಶಿವಜ್ಞಾನ ವನ್ನು ತಿಳಿಯಲು ಇಚ್ಛೆಯುಳ್ಳವರಾಗಿ ಆಸಕ್ತಿಯಿಂದ ಇರುತ್ತೇವೆ ಎಂದರು.

೪೫–೪೬. ವೇದಾಂತವನ್ನು ಚೆನ್ನಾಗಿ ತಿಳಿದಿರುವ ಆ ಋಷಿಗಳು ವ್ಯಾಸ ಋಷಿಯನ್ನು ಹೀಗೆ ಪ್ರಾರ್ಥನೆಮಾಡಲು, ಶುಕಋಷಿಗೆ ತಂದೆಯಾಗಿಯೂ, ವೇದಾಂತ ವನ್ನೂ, ವೇದಗಳ ಅರ್ಥವನ್ನೂ ತಿಳಿದವರಲ್ಲಿ ಶ್ರೇಷ್ಠನೂ ಆದ ಆ ವ್ಯಾಸಋಷಿಯು

**ಧ್ಯಾತ್ವಾ ಹೃತ್ಕರ್ಣಿಕಾಮಧ್ಯೇ ಸಾಂಬಂ ಸಂಸಾರಮೋಚಕಂ ।**
**ಪ್ರಹೃಷ್ಟಮಾನಸೋ ಭೂತ್ವಾ ವ್ಯಾಜಹಾರ ಮಹಾಮುನಿಃ ॥ ೪೬ ॥**

**॥ ಇತಿ ಶ್ರೀ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ ॥**
**॥ ವ್ಯಾಸಶೌನಕಾದಿಸಂವಾದೋ ನಾಮ ಪ್ರಥಮೋಽಧ್ಯಾಯಃ ॥**



---

ಪರಮೇಶ್ವರನನ್ನು ಧ್ಯಾನಮಾಡಿದನು. ಆ ಪರಮೇಶ್ವರನು ವೇದಾಂತಸಾರಕ್ಕೆ ನಿಧಿಯಂತೆ ಇರುವವನು. ಪ್ರಣವಸ್ವರೂಪನು. ಜಗನ್ಮಾತೆಯಾದ ಪಾರ್ವತಿಯೊಡನೆ ಇರುವವನು. ಸಂಸಾರದ ಕ್ಲೇಶಗಳನ್ನು ನಾಶಮಾಡುವವನು. ಇಂತಹ ಪರಮೇಶ್ವರನನ್ನು ತನ್ನ ಹೃದಯಕಮಲದ ಕರ್ಣಿಕಾಸ್ಥಾನದಲ್ಲಿ ಧ್ಯಾನಮಾಡಿಕೊಂಡು ಬಹಳ ಸಂತೋಷವುಳ್ಳ ಮನಸ್ಸಿನಿಂದ ಋಷಿಗಳನ್ನು ಕುರಿತು ಇಂತೆಂದನು.

ಇಲ್ಲಿಗೆ ಶ್ರೀ ಶಿವಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ವ್ಯಾಸಶೌನಕ
ಸಂವಾದವೆಂಬ ಮೊದಲನೆಯ ಅಧ್ಯಾಯವು ಮುಗಿದುದು.



ಶ್ರೀಃ

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೈಲಾಸಸಂಹಿತಾಯಾಂ

## ದ್ವಿತೀಯೋಽಧ್ಯಾಯಃ

|| ವ್ಯಾಸ ಉವಾಚ ||

ಸಾಧು ಪೃಷ್ಟಮಿದಂ ವಿಪ್ರಾ ಭವದ್ಭಿರ್ಭಾಗ್ಯವತ್ತಮೈಃ ।
ದುರ್ಲಭಂ ಹಿ ಶಿವಜ್ಞಾನಂ ಪ್ರಣವಾರ್ಥಪ್ರಕಾಶಕಂ || ೧ ||

ಯೇಷಾಂ ಪ್ರಸನ್ನೋ ಭಗವಾನ್ಸಾಕ್ಷಾಚ್ಛೂಲವರಾಯುಧಃ ।
ತೇಷಾಮೇವ ಶಿವಜ್ಞಾನಂ ಪ್ರಣವಾರ್ಥಪ್ರಕಾಶಕಂ || ೨ ||

---

## ಎರಡನೆಯ ಅಧ್ಯಾಯ

೧. ವ್ಯಾಸಮುನಿಯಿಂತೆಂದನು :—ನೀವುಗಳು ಬಹಳ ಅದೃಷ್ಟಶಾಲಿಗಳು, ಬಹಳ ಉತ್ತಮವಾದ ಪ್ರಶ್ನೆಯನ್ನು ಕೇಳುತ್ತೀರಿ. ಪ್ರಣವಮಂತ್ರದ ಅರ್ಥವನ್ನು ತಿಳಿಸುವ ಶಿವಜ್ಞಾನವು ಹೊಂದಲು ಬಹಳ ಕಷ್ಟಸಾಧ್ಯವಾದದ್ದು.

೨-೩. ಉತ್ತಮವಾದ ತ್ರಿಶೂಲಾಯುಧವನ್ನು ಧರಿಸಿದ ಪೂಜ್ಯನಾದ ಶಿವನು ಯಾರಿಗೆ ಪ್ರಸನ್ನನಾಗುವನೋ ಅವರಿಗೆ ಮಾತ್ರ ಪ್ರಣವದ ಅರ್ಥವನ್ನು ತಿಳಿಸುವ ಶಿವಜ್ಞಾನವು ಉಂಟಾಗುವುದು. ಇತರರಿಗೆ ಉಂಟಾಗುವುದಿಲ್ಲ. ಈ ವಿಷಯದಲ್ಲಿ

ಜಾಯತೇ ನ ಹಿ ಸಂದೇಹೋ ನೇತರೇಷಾಮಿತಿ ಶ್ರುತಿಃ ।
ಶಿವಭಕ್ತಿವಿಹೀನಾನಾಮಿತಿ ತತ್ತ್ವಾರ್ಥನಿಶ್ಚಯಃ ॥ ೩ ॥

ದೀರ್ಘಸತ್ರೇಣ ಯುಷ್ಮಾಭಿರ್ಭಗವಾನಂಬಿಕಾಪತಿಃ ।
ಉಪಾಸಿತ ಇತೀದಂ ಮೇ ದೃಷ್ಟಮದ್ಯ ವಿನಿಶ್ಚಿತಂ ॥ ೪ ॥

ತಸ್ಮಾದ್ವಕ್ಷ್ಯಾಮಿ ಯುಷ್ಮಾಕಮಿತಿಹಾಸಂ ಪುರಾತನಂ ।
ಉಮಾಮಹೇಶಸಂವಾದರೂಪಮದ್ಭುತಮಾಸ್ತಿಕಾಃ ॥ ೫ ॥

ಪುರಾಖಿಲಜಗನ್ಮಾತಾ ಸತೀ ದಾಕ್ಷಾಯಣೀ ತನುಂ ।
ಶಿವನಿಂದಾಪ್ರಸಂಗೇನ ತ್ಯಕ್ತ್ವಾ ಚ ಜನಕಾಧ್ವರೇ ॥ ೬ ॥

ತಪಃಪ್ರಭಾವಾತ್ಸಾ ದೇವೀ ಸುತಾಭೂದ್ಧಿಮವದ್ಗಿರೇಃ ।
ಶಿವಾರ್ಥಮತಪತ್ಸಾ ವೈ ನಾರದಸ್ಯೋಪದೇಶತಃ ॥ ೭ ॥

---

ಕೊಂಚವೂ ಸಂದೇಹ ಪಡಕೂಡದು ಎಂದು ನಾನು ಕೇಳಿರುವೆನು. ಶಿವನಲ್ಲಿ ಭಕ್ತಿ ಇಲ್ಲದವರಿಗೆ ಖಂಡಿತವಾಗಿಯೂ ಪ್ರಣವದ ಅರ್ಥವು ಗೊತ್ತಾಗುವುದಿಲ್ಲವೆಂಬುದು ನಿಶ್ಚಯವಾಗಿರುತ್ತದೆ.

೪. ಪೂಜ್ಯನಾದ ಮಹಾದೇವನನ್ನು ಬಹಳಕಾಲ ನಡೆಯುವ ಸತ್ರಯಾಗದಲ್ಲಿ ನೀವು ಸೇವಿಸಿರುವಿರಿ ಎಂಬುದನ್ನು ನಾನು ಈಗ ನೋಡಿ ನಿಶ್ಚಯಮಾಡಿಕೊಂಡಿರುವೆನು ಎಲೈ ಆಸ್ತಿಕರಾದ ಋಷಿಗಳೇ ಕೇಳಿರಿ, ಆದ್ದರಿಂದಲೇ ನಾನು ನಿಮಗೆ ಬಹಳಕಾಲದ ಹಿಂದೆ ನಡೆದಿರುವ ಪಾರ್ವತೀಪರಮೇಶ್ವರರ ಸಂವಾದರೂಪವಾದ ಒಂದು ಇತಿಹಾಸ ವನ್ನು ಹೇಳುವೆನು, ಅದು ಅತ್ಯಾಶ್ಚರ್ಯಕರವಾಗಿರುವುದು.

೫-೮. ಪೂರ್ವದಲ್ಲಿ ಸಕಲಲೋಕಗಳಿಗೂ ತಾಯಿಯೂ, ದಕ್ಷಬ್ರಹ್ಮನ ಮಗಳೂ ಆದ, ಸತೀದೇವಿಯು, ಶಿವನ ನಿಂದೆಯನ್ನು ತಾನು ಕೇಳಿದೆನೆಂದು ದುಃಖಗೊಂಡು ತನ್ನ ತಂದೆಯ ಯಾಗಶಾಲೆಯಲ್ಲಿ ತನ್ನ ಶರೀರವನ್ನು ತ್ಯಾಗಮಾಡಿ, ತನ್ನ ತಪಸ್ಸಿನ ಮಹಿಮೆಯಿಂದ ಹಿಮವತ್ಪರ್ವತದ ಮಗಳಾಗಿ ಪಾರ್ವತೀ ಎಂಬ ಹೆಸರಿನಿಂದ ಅವತಾರವನ್ನು ಮಾಡಿದಳಷ್ಟೆ. ಆ ದೇವಿಯು ಶ್ರೇಷ್ಠವಾದ ಆ ಪರ್ವತ ದಲ್ಲಿಯೇ ನಾರದ ಋಷಿಯ ಉಪದೇಶದಿಂದ ಶಿವನೇ ತನಗೆ ಪತಿಯಾಗಬೇಕೆಂದು ತಪಸ್ಸು ಮಾಡಿದಳು. ದೇವದೇವನಾದ ಶಿವನು ಸ್ವಯಂವರದ ರೀತಿಯನ್ನು ಅನು

ತಸ್ಮಿನ್ ಭೂಧರವರ್ಯೇ ತು ಸ್ವಯಂವರವಿಧಾನತಃ ।
ದೇವೇಶೇ ಚ ಕೃತೋದ್ವಾಹೇ ಪಾರ್ವತೀ ಸುಖಮಾಪ ಸಾ ॥ ೮ ॥

ತಥೈಕಸ್ಮಿನ್ಮಹಾದೇವಿ ಸಮಯೇ ಪತಿನಾ ಸಹ ।
ಸೂಪವಿಷ್ಟಾ ಮಹಾಶೈಲೇ ಗೌರೀ ದೇವಮಭಾಷತ ॥ ೯ ॥

॥ ಮಹಾದೇವ್ಯುವಾಚ ॥

ಭಗವನ್ಪರಮೇಶಾನ ಪಂಚಕೃತ್ಯವಿಧಾಯಕ ।
ಸರ್ವಜ್ಞ ಭಕ್ತಿಸುಲಭ ಪರಮಾನ್ಮೃತವಿಗ್ರಹ ॥ ೧೦ ॥

ದಾಕ್ಷಾಯಣೀಂ ತನುಂ ತ್ಯಕ್ತ್ವಾ ತವ ನಿಂದಾಪ್ರಸಂಗತಃ ।
ಆಸಮದ್ಯ ಮಹೇಶಾನ ಪುತ್ರೀ ಹಿಮವತೋ ಗಿರೇಃ ॥ ೧೧ ॥

ಕೃಪಯಾ ಪರಮೇಶಾನ ಮಂತ್ರದೀಕ್ಷಾವಿಧಾನತಃ ।
ಮಾಂ ವಿಶುದ್ಧಾತ್ಮತತ್ತ್ವಸ್ಥಾಂ ಕುರು ನಿತ್ಯಂ ಮಹೇಶ್ವರ ॥ ೧೨ ॥

---

ಸರಿಸಿ ಆ ದೇವಿಯನ್ನು ವಿವಾಹ ಮಾಡಿಕೊಂಡನಂತರ ಅವಳು ಸುಖವನ್ನು ಹೊಂದಿದಳು.

೯. ಹೀಗೆಯೇ ಕೆಲವು ಕಾಲ ಕಳೆದನಂತರ ಒಂದು ದಿನ ತನ್ನ ಪತಿಯೊಡನೆ ಆ ದೇವಿಯು ಸುಖವಾಗಿ ಕುಳಿತುಕೊಂಡಿರುವ ಕಾಲದಲ್ಲಿ ಮಹೇಶ್ವರನೊಡನಿಂತೆಂದಳು.

೧೦–೧೧. ಎಲೈ ಮಹಾದೇವನೇ, ನೀನು ಷಡ್ಗುಣೈಶ್ವರ್ಯಸಂಪನ್ನನು. ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹಗಳೆಂಬ ಐದು ಕಾರ್ಯಗಳನ್ನೂ ನಡೆಸುವವನು. ಸರ್ವವನ್ನೂ ತಿಳಿದಿರುವವನು. ಭಕ್ತಗಮ್ಯನು. ಸುಂದರವಾದ ಶರೀರವುಳ್ಳವನು. ಇಂತಹ ನಿನ್ನನ್ನು ಪತಿಯನ್ನಾಗಿ ಪಡೆದಿದ್ದ ದಾಕ್ಷಾಯಣೀ ಎಂಬ ಹೆಸರಿನಿಂದಿದ್ದ ನಾನು ಶಿವನಿಂದೆಯನ್ನು ಕೇಳಿ, ಆ ದೋಷ ಪರಿಹಾರಾರ್ಥವಾಗಿ ದಾಕ್ಷಾಯಣೀ ಶರೀರವನ್ನು ಬಿಟ್ಟು ಹಿಮವತ್ಪರ್ವತದ ಮಗಳಾಗಿ ಜನ್ಮವೆತ್ತಿರುವೆನು.

೧೨. ಎಲೈ ಮಹೇಶ್ವರನೇ, ಈಗ ನೀನು ನನ್ನಲ್ಲಿ ದಯೆಯಿಂದ ಮಂತ್ರ ದೀಕ್ಷೆಯ ಕ್ರಮವನ್ನು ಅನುಸರಿಸಿ ಯಾವಾಗಲೂ ನಾನು ಪರಿಶುದ್ಧವಾದ ಆತ್ಮತತ್ತ್ವದಲ್ಲಿರುವ ಹಾಗೆ ಅನುಗ್ರಹವನ್ನು ಮಾಡು ಎಂದು ಪ್ರಾರ್ಥಿಸಲು,

ಇತಿ ಸಂಪ್ರಾರ್ಥಿತೋ ದೇವ್ಯಾ ದೇವಃ ಶೀತಾಂಶುಭೂಷಣಃ ।
ಪ್ರತ್ಯುವಾಚ ತತೋ ದೇವೀಂ ಪ್ರಹೃಷ್ಟೇನಾಂತರಾತ್ಮನಾ ॥ ೧೩ ॥

॥ ಮಹಾದೇವ ಉವಾಚ ॥

ಧನ್ಯಾ ತ್ವಂ ದೇವದೇವೇಶಿ ಯದಿ ಜಾತೇದೃಶೀಂ ಮತಿಃ ।
ಕೈಲಾಸಶಿಖರಂ ಗತ್ವಾ ಕರಿಷ್ಯೇ ತ್ವಾಂ ಚ ತಾದೃಶೀಂ ॥ ೧೪ ॥

ತತೋ ಹಿಮವತೋ ಗತ್ವಾ ಕೈಲಾಸಂ ಭೂಧರೇಶ್ವರಂ ।
ಜಗೌ ದೀಕ್ಷಾವಿಧಾನೇನ ಪ್ರಣವಾದೀನ್ಮನೂನ್ಕ್ರಮಾತ್ ॥ ೧೫ ॥

ಉಕ್ತ್ವಾ ಮಂತ್ರಾಂಶ್ಚ ತಾನ್ದೇವೀಂ ಕೃತ್ವಾ ಶುದ್ಧಾತ್ಮನಿ ಸ್ಥಿತಾಂ ।
ಸಾರ್ಧಂ ದೇವ್ಯಾ ಮಹಾದೇವೋ ದೇವೋದ್ಯಾನಂ ಗತೋಽಭವತ್ ॥ ೧೬ ॥

ತತಃ ಸುಮಾಲಿನೀಮುಖ್ಯೈರ್ದೇವ್ಯಾಃ ಪ್ರಿಯಸಖೀಜನೈಃ ।
ಸಮಾಹೃತೈಃ ಪ್ರಫುಲ್ಲೈಸ್ತೈಃ ಪುಷ್ಪೈಃ ಕಲ್ಪತರೂದ್ಭವೈಃ ॥ ೧೭ ॥

---

೧೩. ಚಂದ್ರಶೇಖರನಾದ ಆ ಪರಮೇಶ್ವರನು ಪಾರ್ವತೀದೇವಿಯ ಈ ವಿಧವಾದ ಪ್ರಾರ್ಥನೆಯನ್ನು ಕೇಳಿ ಸಂತೋಷಗೊಂಡು,

೧೪. ಎಲೈ ದೇವೇಶ್ವರಿಯೇ! ನೀನೇ ಪುಣ್ಯವಂತಳು. ಆದುದರಿಂದಲೇ ನಿನಗೆ ಈ ಪ್ರಕಾರವಾದ ಬುದ್ಧಿಯು ಹುಟ್ಟಿರುವುದು. ನಾವಿಬ್ಬರೂ ಕೈಲಾಸಪರ್ವತದ ಶಿಖರಕ್ಕೆ ಹೋಗೋಣ. ಆಮೇಲೆ ನಿನಗೆ ನಿನ್ನ ಇಚ್ಛಾನುಸಾರವಾಗಿ ಮಂತ್ರದೀಕ್ಷೆಯನ್ನು ಕೊಟ್ಟು ಪರಿಶುದ್ಧಾತ್ಮಳನ್ನಾಗಿ ಮಾಡುವೆನು ಎಂದು ಹೇಳಿ,

೧೫. ಹಿಮವತ್ಪರ್ವತದಿಂದ ಹೊರಟು ಕೈಲಾಸಗಿರಿಯನ್ನು ಸೇರಿ ದೀಕ್ಷಾಕ್ರಮದಿಂದ ಪ್ರಣವವೇ ಮೊದಲಾದ ಮಂತ್ರಗಳೆಲ್ಲವನ್ನೂ ಕ್ರಮವಾಗಿ ಉಪದೇಶ ಮಾಡಿದನು.

೧೬. ಮಂತ್ರಗಳೆಲ್ಲವನ್ನೂ ಉಪದೇಶಮಾಡಿದನಂತರ ಆ ಪಾರ್ವತೀದೇವಿಯು ಪರಿಶುದ್ಧವಾದ ಆತ್ಮಸ್ವರೂಪದಿಂದ ಇರುವಂತೆ ಮಾಡಿ ಆ ದೇವಿಯನ್ನು ತನ್ನ ಸಂಗಡ ಕರೆದುಕೊಂಡು ದೇವತೆಗಳ ಉದ್ಯಾನವನಕ್ಕೆ ಹೋದನು.

೧೭-೧೮. ಅಲ್ಲಿ ಸುಮಾಲಿನಿಯೇ ಮೊದಲಾದ ಪ್ರಿಯಸಖಿಯರು, ಕಲ್ಪವೃಕ್ಷದಲ್ಲಿ ಹುಟ್ಟಿ ಚೆನ್ನಾಗಿ ಅರುಳಿರುವ ಹೂವುಗಳನ್ನು ತಂದು ಒಪ್ಪಿಸಲು, ಆ ಹೂವು

ಅಲಂಕೃತ್ಯ ಮಹಾದೇವೀಂ ಸ್ವಾಂಕಮಾರೋಪ್ಯ ಶಂಕರಃ ।
ಪ್ರಹೃಷ್ಟವದನಸ್ತಸ್ಥೌ ವಿಲೋಕ್ಯ ಚ ತದಾನನಂ ॥ ೧೮ ॥

ತತಃ ಪ್ರಿಯಕಥಾ ಜಾತಾಃ ಪಾರ್ವತೀಪರಮೇಶಯೋಃ ।
ಹಿತಾಯ ಸರ್ವಲೋಕಾನಾಂ ಸಾಕ್ಷಾಚ್ಛ್ರುತ್ಯರ್ಥಸಮ್ಮಿತಾಃ ॥ ೧೯ ॥

ತದಾ ಸರ್ವಜಗನ್ಮಾತಾ ಭರ್ತುರಂಕಂ ಸಮಾಶ್ರಿತಾಃ ।
ವಿಲೋಕ್ಯ ವದನಂ ಭರ್ತುರಿದಮಾಹ ತಪೋಧನಾಃ ॥ ೨೦ ॥

॥ ಶ್ರೀದೇವ್ಯುವಾಚ ॥

ಉಪದಿಷ್ಟಾಸ್ತ್ವಯಾ ದೇವ ಮಂತ್ರಾಸ್ಸಪ್ರಣವಾ ಮತಾಃ ।
ತತ್ರಾದೌ ಶ್ರೋತುಮಿಚ್ಛಾಮಿ ಪ್ರಣವಾರ್ಥಂ ವಿನಿಶ್ಚಿತಂ ॥ ೨೧ ॥

ಕಥಂ ಪ್ರಣವ ಉತ್ಪನ್ನಃ ಕಥಂ ಪ್ರಣವ ಉಚ್ಯತೇ ।
ಮಾತ್ರಾಃ ಕತಿ ಸಮಾಖ್ಯಾತಾಃ ಕಥಂ ವೇದಾದಿರುಚ್ಯತೇ ॥ ೨೨ ॥

---

ಗಳಿಂದ ಪಾರ್ವತಿಗೆ ಅಲಂಕಾರವನ್ನು ಮಾಡಿ ಆ ದೇವಿಯನ್ನು ತನ್ನ ತೊಡೆಯಮೇಲೆ ಕೂಡಿಸಿಕೊಂಡು ಮುಖವನ್ನು ನೋಡುತ್ತಾ ಸಂತೋಷದಿಂದಿದ್ದನು.

೧೯. ಅನಂತರದಲ್ಲಿ ಪಾರ್ವತೀ ಪರಮೇಶ್ವರರಿಬ್ಬರಿಗೂ ವಿನೋದಕರವಾದ ಅನೇಕವಿಧವಾದ ಮಾತುಕಥೆಗಳು ನಡೆದವು. ಅವುಗಳೆಲ್ಲವೂ, ಎಲ್ಲಾ ಲೋಕಗಳಿಗೂ ಹಿತಕರಗಳಾಗಿಯೂ, ವೇದಾರ್ಥಗಳನ್ನು ಸಾಕ್ಷಾತ್ತಾಗಿ ಬೋಧಿಸುವವುಗಳಾಗಿಯೂ, ಇದ್ದುವು.

೨೦. ಆಗ ತನ್ನ ಪತಿಯ ತೊಡೆಯಲ್ಲಿ ಕುಳಿತುಕೊಂಡಿರುವ ಜಗನ್ಮಾತೆಯಾದ ಪಾರ್ವತೀದೇವಿಯು ತನ್ನ ಪತಿಯ ಮುಖವನ್ನು ನೋಡುತ್ತಾ ಒಂದು ಪ್ರಶ್ನೆಯನ್ನು ಮಾಡಿದಳು. ಎಲೈ ಋಷಿಗಳಿರಾ, ಅದನ್ನು ಹೇಳುವೆನು ಏಕಾಗ್ರಭಾವದಿಂದ ಕೇಳಿರಿ.

೨೧-೨೫. ದೇವಿಯು ಪ್ರಶ್ನೆಮಾಡಿದಳು :—ಎಲೈ ದೇವನೇ, ಪ್ರಣವದಿಂದ ಕೂಡಿ ಜಪಮಾಡಬೇಕಾಗಿರುವ ಮಂತ್ರಗಳೆಲ್ಲವನ್ನೂ ನೀನು ಉಪದೇಶ ಮಾಡಿರುತ್ತೀಯೆ. ಅದರಲ್ಲಿ ಮೊದಲು ನಿಶ್ಚಯಮಾಡಿ ಗೊತ್ತುಮಾಡಲ್ಪಟ್ಟಿರುವ ಓಂಕಾರದ ಅರ್ಥವನ್ನು ಕೇಳಲು ಇಚ್ಛೆಪಡುತ್ತೇನೆ. ಓಂಕಾರವು ಹೇಗೆ ಹುಟ್ಟಿತು? ಅದಕ್ಕೆ

ದೇವತಾಃ ಕತಿ ಚ ಪ್ರೋಕ್ತಾಃ ಕಥಂ ವೇದಾದಿಭಾವನಾ ।
ಕ್ರಿಯಾಃ ಕತಿವಿಧಾಃ ಪ್ರೋಕ್ತಾ ವ್ಯಾಪ್ಯವ್ಯಾಪಕತಾ ಕಥಂ ॥ ೨೩ ॥

ಬ್ರಹ್ಮಾಣಿ ಪಂಚ ಮಂತ್ರೇಽಸ್ಮಿನ್ಕಥಂ ತಿಷ್ಠಂತ್ಯನುಕ್ರಮಾತ್ ।
ಕಲಾಃ ಕತಿ ಸಮಾಖ್ಯಾತಾಃ ಪ್ರಪಂಚಾತ್ಮಕತಾ ಕಥಂ ॥ ೨೪ ॥

ವಾಚ್ಯವಾಚಕಸಂಬಂಧಸ್ಥಾನಾನಿ ಚ ಕಥಂ ಶಿವ ॥
ಕೋಽತ್ರಾಧಿಕಾರೀ ವಿಜ್ಞೇಯೋ ವಿಷಯಃ ಕ ಉದಾಹೃತಃ ॥ ೨೫ ॥

ಸಂಬಂಧಃ ಕೋಽತ್ರ ವಿಜ್ಞೇಯೋ ಕಿಂ ಪ್ರಯೋಜನಮುಚ್ಯತೇ ।
ಉಪಾಸಕಸ್ತು ಕಿಂರೂಪಃ ಕಿಂ ವಾ ಸ್ಥಾನಮುಪಾಸನಂ ॥ ೨೬ ॥

ಉಪಾಸ್ಯಂ ವಸ್ತು ಕಿಂ ರೂಪಂ ಕಿಂ ವಾ ಫಲಮುಪಾಸಿತುಃ ।
ಅನುಷ್ಠಾನವಿಧಿಃ ಕೋ ವಾ ಪೂಜಾಸ್ಥಾನಂ ಚ ಕಿಂ ಪ್ರಭೋ ॥ ೨೭ ॥

---

ಪ್ರಣವವೆಂದು ಹೆಸರು ಬರಲು ಕಾರಣವೇನು? ಅದಕ್ಕೆ ಮಾತ್ರೆಗಳು ಎಷ್ಟು ಇರುವುವು? ಆ ಪ್ರಣವವು ವೇದಗಳಿಗೆ ಹೇಗೆ ಮೊದಲಾಯಿತು? ಅದಕ್ಕೆ ದೇವತೆಗಳು ಯಾರು? ಅದನ್ನು ವೇದಗಳಿಗೆಲ್ಲಕ್ಕೂ ಮೊದಲು ಭಾವನೆಯನ್ನು ಹೇಗೆ ಮಾಡಬೇಕು? ಅದನ್ನು ಉಪಾಸನೆಮಾಡಲು ವಿಧಿನಿಯಮಗಳೇನು? ಪ್ರಣವಕ್ಕೂ ವೇದಗಳಿಗೂ ವ್ಯಾಪ್ಯವ್ಯಾಪಕಭಾವವು ಹೇಗೆ ಇರುವುದು? ಪಂಚಬ್ರಹ್ಮರೂ ಈ ಮಂತ್ರದಲ್ಲಿ ಕ್ರಮವಾಗಿ ಹೇಗೆ ಇರುವರು? ಈ ಮಂತ್ರದಲ್ಲಿ ಎಷ್ಟು ಕಲೆಗಳು ಇರುವುವು? ಅವುಗಳಿಗೆ ಪ್ರಪಂಚರೂಪದಿಂದ ಇರುವ ಕ್ರಮವು ಹೇಗೆ? ಎಲೈ ಶಿವನೇ ಪ್ರಣವಮಂತ್ರಕ್ಕೂ ಅದರ ಅರ್ಥಕ್ಕೂ ವಾಚ್ಯವಾಚಕಸ್ಥಾನಗಳು ಹೇಗೆ ಇರುವುವು? ಈ ಮಂತ್ರವನ್ನು ಉಪಾಸನೆಮಾಡುವುದಕ್ಕೆ ಅಧಿಕಾರಿಯು ಯಾರು? ಪ್ರಣವಮಂತ್ರದಿಂದ ಯಾರನ್ನು ಧ್ಯಾನಮಾಡಬೇಕು?

೨೬–೨೮. ಈ ಮಂತ್ರವನ್ನು ಉಪಾಸನೆ ಮಾಡುವವನಿಗೂ ಈ ಮಂತ್ರಕ್ಕೂ ಯಾವ ಸಂಬಂಧವು ಇರುವುದು? ಈ ಮಂತ್ರವನ್ನು ಜಪಮಾಡಿದವನಿಗೆ ಯಾವ ಫಲವು ಉಂಟಾಗುವುದು? ಉಪಾಸಕನು ಕೊನೆಗೆ ಯಾವ ರೂಪವನ್ನು ಹೊಂದುವನು? ಉಪಾಸನೆಯನ್ನು ಯಾವ ಪ್ರದೇಶದಲ್ಲಿ ಮಾಡಬೇಕು? ಉಪಾಸ್ಯವಾದ ದೇವತೆಯಾವುದು? ಉಪಾಸಕನು ಈ ಆಕಾರವನ್ನು ಉಪಾಸನೆಮಾಡಿದ್ದರಿಂದ

ಪೂಜಾಯಾಂ ಮಂಡಲಂ ಕಿಂ ವಾ ಕಿಂ ವಾ ಋಷ್ಯಾದಿಕಂ ಹರ ।
ನ್ಯಾಸಜಾತವಿಧಿಃ ಕೋ ವಾ ಕೋ ವಾ ಪೂಜಾವಿಧಿಕ್ರಮಃ ॥ ೨೮ ॥

ಏತತ್ಸರ್ವಂ ಮಹೇಶಾನ ಸಮಾಚಕ್ಷ್ವ ವಿಶೇಷತಃ ।
ಶ್ರೋತುಮಿಚ್ಛಾಮಿ ತತ್ತ್ವೇನ ಯದ್ಯಸ್ತಿ ಮಯಿ ತೇ ಕೃಪಾ ॥ ೨೯ ॥

ಇತಿ ದೇವ್ಯಾ ಸಮಾಪೃಷ್ಟೋ ಭಗವಾನಿಂದುಭೂಷಣಃ ।
ತಾಂ ಪ್ರಶಸ್ಯ ಮಹೇಶಾನೀಂ ವಕ್ತುಂ ಸಮುಪಚಕ್ರಮೇ ॥ ೩೦ ॥

॥ ಇತಿ ಶ್ರೀ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ ॥
॥ ದೇವೀದೇವಸಂವಾದೇ ದೇವೀಕೃತಪ್ರಶ್ನವರ್ಣನಂ ನಾಮ ॥
॥ ದ್ವಿತಿಯೋಽಧ್ಯಾಯಃ ॥

---

ಯಾವಫಲವು ಉಂಟಾಗುವುದು. ? ಇದನ್ನು ಉಪಾಸನೆ ಮಾಡಲು ಕ್ರಮವೇನು ? ಯಾವ ಸ್ಥಾನದಲ್ಲಿ ಪೂಜೆಯನ್ನು ಮಾಡಬೇಕು ? ಪೂಜೆಯನ್ನು ಮಾಡುವುದರಲ್ಲಿ ಯಾವರೀತಿಯಿಂದ ಮಂಡಲವನ್ನು ಮಾಡಬೇಕು ? ಎಲೈ ಶಿವನೇ ಈ ಮಂತ್ರಕ್ಕೆ ಋಷಿಯೇ ಮೊದಲಾದವರು ಯಾರು ? ಈ ಮಂತ್ರವನ್ನು ನ್ಯಾಸಮಾಡುವ ಕ್ರಮವೂ ಮತ್ತು ಪೂಜಿಸುವ ಕ್ರಮವೂ ಯಾವುದು ?

೨೯. ಎಲೈ ಮಹೇಶ್ವರನೇ ! ನಿನಗೆ ನನ್ನಲ್ಲಿ ದಯೆಯಿದ್ದರೆ ಇವೆಲ್ಲವನ್ನೂ ವಿವರಿಸಿ ಹೇಳು. ಇವೆಲ್ಲವನ್ನೂ ಅವುಗಳ ತತ್ತ್ವಸ್ಥಿತಿಪೂರ್ವಕವಾಗಿ ಕೇಳುವುದಕ್ಕೆ ನನಗೆ ಬಹಳವಾದ ಆಸಕ್ತಿಯಿರುವುದು ಎನ್ನಲು,

೩೦. ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು ಆ ಮಹಾದೇವಿಯನ್ನು ಬಹಳ ಶ್ಲಾಘನೆಮಾಡಿ ಆ ದೇವಿಯು ಕೇಳಿರುವ ಪ್ರಶ್ನೆಗಳೆಲ್ಲಕ್ಕೂ ಕ್ರಮವಾಗಿ ಉತ್ತರ ವನ್ನು ಹೇಳಲುಪಕ್ರಮಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ದೇವಿಯ ಪ್ರಶ್ನಕಥನವೆಂಬ ಎರಡನೆಯ ಅಧ್ಯಾಯವು ಮುಗಿದುದು.

---

ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ಕೈಲಾಸಸಂಹಿತಾಯಾಂ

## ತೃತೀಯೋಽಧ್ಯಾಯಃ



॥ ಈಶ್ವರ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಯನ್ಮಾಂ ತ್ವಂ ಪರಿಪೃಚ್ಛಸಿ ।
ತಸ್ಯ ಶ್ರವಣಮಾತ್ರೇಣ ಜೀವಸ್ಸಾಕ್ಷಾಚ್ಛಿವೋ ಭವೇತ್ ॥ ೧ ॥

ಪ್ರಣವಾರ್ಥಪರಿಜ್ಞಾನಮೇವ ಜ್ಞಾನಂ ಮದಾತ್ಮಕಂ ।
ಬೀಜಂ ತತ್ಸರ್ವವಿದ್ಯಾನಾಂ ಮಂತ್ರಂ ಪ್ರಣವನಾಮಕಂ ॥ ೨ ॥

---

## ಮೂರನೆಯ ಅಧ್ಯಾಯ

೧-೨. ಈಶ್ವರನಿಂತೆಂದನು—ಎಲೈ ದೇವಿಯೇ ಕೇಳು, ನೀನು ನನ್ನನ್ನು ಪ್ರಶ್ನೆಮಾಡಿದ ವಿಷಯವೆಲ್ಲವನ್ನೂ ಒಂದೊಂದಾಗಿ ಹೇಳುವೆನು. ಅದನ್ನು ಕೇಳಿದವನು ಕೇಳಿದಮಾತ್ರದಿಂದಲೇ ಶಿವಭಾವವನ್ನು ಹೊಂದುವನು. ( ಪ್ರಣವಮಂತ್ರದ ಅರ್ಥವನ್ನು ತಿಳಿಯುವುದು ನನ್ನ ಸ್ವರೂಪವನ್ನು ತಿಳಿದಂತೆಯೇ ಇರುವುದು. ಪ್ರಣವವೆಂದು ಹೆಸರುಳ್ಳ ಮಂತ್ರವು ಎಲ್ಲಾವಿದ್ಯೆಗಳಿಗೂ ಕಾರಣವಾಗಿ ಇರುವುದು ಎಂದರೆ ಬೀಜರೂಪವಾಗಿರುವುದು. )

ಅತಿಸೂಕ್ಷ್ಮಂ ಮಹಾರ್ಥಂ ಚ ಜ್ಞೇಯಂ ತದ್ವಟಬೀಜವತ್ ।
ವೇದಾದಿ ವೇದಸಾರಂ ಚ ಮದ್ರೂಪಂ ಚ ವಿಶೇಷತಃ ॥ ೩ ॥

ದೇವೋ ಗುಣತ್ರಯಾತೀತಃ ಸರ್ವಜ್ಞಃ ಸರ್ವಕೃತ್ಪ್ರಭುಃ ।
ಓಮಿತ್ಯೇಕಾಕ್ಷರೇ ಮಂತ್ರೇ ಸ್ಥಿತೋಽಹಂ ಸರ್ವಗಶ್ಶಿವಃ ॥ ೪ ॥

ಯದಸ್ತಿ ವಸ್ತು ತತ್ಸರ್ವಂ ಗುಣಪ್ರಾಧಾನ್ಯಯೋಗತಃ ।
ಸಮಸ್ತಂ ವ್ಯಸ್ತಮಪಿ ಚ ಪ್ರಣವಾರ್ಥಂ ಪ್ರಚಕ್ಷತೇ ॥ ೫ ॥

ಸರ್ವಾರ್ಥಸಾಧಕಂ ತಸ್ಮಾದೇಕಂ ಬ್ರಹ್ಮೈತದಕ್ಷರಂ ।
ತೇನೋಮಿತಿ ಜಗತ್ಕೃತ್ಸ್ನಂ ಕುರುತೇ ಪ್ರಥಮಂ ಶಿವಃ ॥ ೬ ॥

---

೩. ಆ ಮಂತ್ರವು ಬಹಳ ಸೂಕ್ಷ್ಮವಾಗಿದ್ದರೂ, ಆಲದಮರದ ಬೀಜದಹಾಗೆ ಅದರ ಅರ್ಥವೂ, ಫಲವೂ ಬಹಳ ದೊಡ್ಡದಾಗಿರುವುದು. ಅದು ವೇದಗಳಿಗೆ ಆದಿಯಾಗಿಯೂ, ವೇದಗಳ ಸಾರರೂಪವಾಗಿಯೂ, ಇರುವುದಲ್ಲದೆ ನನ್ನ ರೂಪಾಂತರವಾಗಿರುವುದು.

೪. ಮೂರುಗುಣಗಳನ್ನೂ ಮೀರಿರುವ ಸರ್ವಜ್ಞನಾದ, ಎಲ್ಲವನ್ನೂ ನಿರ್ಮಿಸುವುದೇ ಮೊದಲಾದ ಕೆಲಸಗಳನ್ನು ಮಾಡುವವನಾದ, ಪ್ರಭುವಾದ, ಪ್ರಪಂಚವೆಲ್ಲದರಲ್ಲಿಯೂ ಇರುವ, ದೇವದೇವನಾದ, ಶಿವಭಾವದಿಂದ ಇರುವ ನಾನೇ ಏಕಾಕ್ಷರಾತ್ಮಕವಾದ ಓಂಕಾರಮಂತ್ರಕ್ಕೆ ದೇವತೆಯಾಗಿರುವೆನು.

೫. ಗುಣಪ್ರಧಾನಭಾವವನ್ನು ಹೊಂದಿ ಸಮಷ್ಟಿವ್ಯಷ್ಟಿರೂಪದಿಂದ ಇರುವ ಪ್ರಪಂಚದ ಪದಾರ್ಥವೆಲ್ಲವೂ ಈ ಪ್ರಣವಮಂತ್ರಕ್ಕೆ ಅರ್ಥವಾಗಿರುವುದು ಎಂದು ತತ್ತ್ವಜ್ಞರು ಹೇಳುವರು.

೬. ಎಲ್ಲಾವಿಧ ಪ್ರಯೋಜನವನ್ನೂ ಸಾಧಿಸಿಕೊಡುವ ಈ ಅಕ್ಷರವು ಬ್ರಹ್ಮಸ್ವರೂಪದಿಂದ ಇರುವುದು. ಆ ಕಾರಣದಿಂದಲೇ ಶಿವನು ಪ್ರಪಂಚವನ್ನು ನಿರ್ಮಿಸುವುದಕ್ಕೆ ಮೊದಲು ಓಂಕಾರವನ್ನು ಉಚ್ಚರಿಸಿ ಪ್ರಪಂಚವೆಲ್ಲವನ್ನೂ ನಿರ್ಮಿಸಿರುವನು.

ಶಿವೋ ವಾ ಪ್ರಣವೋ ಹ್ಯೇಷ ಪ್ರಣವೋ ವಾ ಶಿವಃ ಸ್ಮೃತಃ ।
ವಾಚ್ಯವಾಚಕಯೋರ್ಭೇದೋ ನಾತ್ಯಂತಂ ವಿದ್ಯತೇ ಯತಃ ।    ॥ ೭ ॥

ತಸ್ಮಾದೇಕಾಕ್ಷರಂ ದೇವಂ ಮಾಂ ಚ ಬ್ರಹ್ಮರ್ಷಯೋ ವಿದುಃ ।
ವಾಚ್ಯವಾಚಕಯೋರೈಕ್ಯಂ ಮನ್ಯಮಾನಾ ವಿಪಶ್ಚಿತಃ    ॥ ೮ ॥

ಅತಸ್ತದೇವ ಜಾನೀಯಾತ್ಪ್ರಣವಂ ಸರ್ವಕಾರಣಂ ।
ನಿರ್ವಿಕಾರೀ ಮುಮುಕ್ಷುರ್ಮಾಂ ನಿರ್ಗುಣಂ ಪರಮೇಶ್ವರಂ    ॥ ೯ ॥

ಏನಮೇವ ಹಿ ದೇವೇಶಿ ಸರ್ವಮಂತ್ರಶಿರೋಮಣಿಂ ।
ಕಾಶ್ಯಾಮಹಂ ಪ್ರದಾಸ್ಯಾಮಿ ಜೀವಾನಾಂ ಮುಕ್ತಿಹೇತವೇ    ॥ ೧೦ ॥

---

೭-೮. ಈ ಪ್ರಣವಮಂತ್ರಕ್ಕೂ, ಇದರ ಅರ್ಥಕ್ಕೂ ಇರುವ ವಾಚ್ಯವಾಚಕ ಸಂಬಂಧದಲ್ಲಿ ವಾಚ್ಯವಾಚಕಗಳಾದ ಪದಪದಾರ್ಥಗಳೆರಡಕ್ಕೂ ಐಕ್ಯವನ್ನು ವಿದ್ವಾಂಸರಾದ ಬ್ರಹ್ಮರ್ಷಿಗಳು ತಿಳಿದಿರುವರು. ಪ್ರಣವಮಂತ್ರವೇ ಶಿವನು. ಶಿವನೇ ಪ್ರಣವಮಂತ್ರವು ಎಂಬದಾಗಿ ಇವೆರಡಕ್ಕೂ ಪದಪದಾರ್ಥಗಳಿಗೆ ವಾಚ್ಯವಾಚಕ ಭೇದವಿಲ್ಲದೇ ಕೊಂಚಮಟ್ಟಿನ ಭೇದವನ್ನು ಬ್ರಹ್ಮರ್ಷಿಗಳು ಹೇಳುವರು. ಓಂಕಾರರೂಪದಿಂದ ಇರುವ ಒಂದು ಅಕ್ಷರದ ಈ ಮಂತ್ರಕ್ಕೆ ನನ್ನನ್ನೇ ದೇವತೆಯನ್ನಾಗಿ ಅವರು ತಿಳಿದಿರುವುದೇ ಈ ವಿಧವಾದ ಐಕ್ಯಕ್ಕೆ ಕಾರಣವಾಗಿರುವುದು.

೯. ಈ ಕಾರಣದಿಂದಲೇ ಮನಸ್ಸಿನಲ್ಲಿ ಯಾವವಿಧವಾದ ವಿಕಾರವೂ ಭಾವನೆಯೂ ಇಲ್ಲದಿರುವವನೂ, ಮೋಕ್ಷವನ್ನು ಹೊಂದಲು ಇಚ್ಛೆಯುಳ್ಳವನೂ ಆದವನು ಈ ಮಂತ್ರವನ್ನು ಉಪಾಸನೆ ಮಾಡಬೇಕು. ಗುಣಸಂಬಂಧವಿಲ್ಲದಿರುವ ಪರಮೇಶ್ವರನಾದ ನನ್ನನ್ನೇ ಈ ಮಂತ್ರಕ್ಕೆ ದೇವತೆಯಾಗಿ ತಿಳಿಯಬೇಕು. ಆ ಪ್ರಣವಮಂತ್ರವನ್ನು ಎಲ್ಲಕ್ಕೂ ಕಾರಣವನ್ನಾಗಿ ತಿಳಿಯಬೇಕು.

೧೦. ಎಲೈ ಮಹಾದೇವಿಯೇ ಕೇಳು ! ಎಲ್ಲಾ ಮಂತ್ರಗಳಿಗೂ ಶ್ರೇಷ್ಠವಾದ ಈ ಮಂತ್ರವನ್ನು, ನಾನು ಜೀವರುಗಳು ಮುಕ್ತಿಯನ್ನು ಹೊಂದಲಿ ಎಂದು ಅವರೆಲ್ಲರಿಗೂ ಕಾಶಿಯಲ್ಲಿ ಉಪದೇಶಮಾಡುವೆನು.

ತತ್ರಾದೌ ಸಂಪ್ರವಕ್ಷ್ಯಾಮಿ ಪ್ರಣವೋದ್ಧಾರಮಂಬಿಕೇ ।
ಯಸ್ಯ ವಿಜ್ಞಾನಮಾತ್ರೇಣ ಸಿದ್ಧಿಶ್ಚ ಪರಮಾ ಭವೇತ್ ॥ ೧೧ ॥

ನಿವೃತ್ತಿಮುದ್ಧರೇತ್ಪೂರ್ವಮಿಂಧನಂ ಚ ತತಃ ಪರಂ ।
ಕಾಲಂ ಸಮುದ್ಧರೇತ್ಪಶ್ಚಾದ್ದಂಡಮೀಶ್ವರಮೇವ ಚ ॥ ೧೨ ॥

ವರ್ಣಪಂಚಕರೂಪೋಽಯಮೇವಂ ಪ್ರಣವ ಉದ್ಧೃತಃ ।
ತ್ರಿಮಾತ್ರಬಿಂದುನಾದಾತ್ಮಾ ಮುಕ್ತಿದೋ ಜಪತಾಂ ಸದಾ ॥ ೧೩ ॥

ಬ್ರಹ್ಮಾದಿಸ್ಥಾವರಾಂತಾನಾಂ ಸರ್ವೇಷಾಂ ಪ್ರಾಣಿನಾಂ ಖಲು ।
ಪ್ರಾಣಃ ಪ್ರಣವ ಏವಾಯಂ ತಸ್ಮಾತ್ಪ್ರಣವ ಈರಿತಃ ॥ ೧೪ ॥

---

೧೧. ಎಲೈ ಅಂಬಿಕಾದೇವಿಯೇ ಕೇಳು. ಅದರಲ್ಲಿ ಮೊದಲು ಪ್ರಣವಮಂತ್ರದ ಉದ್ಧಾರಕ್ರಮವನ್ನು (ಪ್ರಣವಮಂತ್ರವು ಹುಟ್ಟಿದ ಕ್ರಮವನ್ನು) ಹೇಳುವೆನು. ಅದನ್ನು ಕೇಳಿದ ಮಾತ್ರದಿಂದ ಸಮಸ್ತ ಸಿದ್ಧಿಯೂ ಉಂಟಾಗುವುದು.

೧೨-೧೩. ಮೊದಲು ಎಲ್ಲಾ ಅಕ್ಷರಗಳಿಗೂ ಮೊದಲನೆಯದಾದ ಅಕಾರವನ್ನು ಹೇಳಬೇಕು. ಅನಂತರ ಉಕಾರವನ್ನೂ, ಅನಂತರ ಮಕಾರವನ್ನೂ, ಆಮೇಲೆ ದಂಡಾಕಾರದಿಂದ ಉಚ್ಚರಿಸುವ ನಾದಬಿಂದುಗಳನ್ನೂ ಹೇಳಬೇಕು. ಐದು ವರ್ಣಗಳ ರೂಪದಿಂದ ಇರುವ ಪ್ರಣವಮಂತ್ರದಉದ್ಧಾರಕ್ರಮವು ಈಪ್ರಕಾರವಾಗಿರುವುದು. ಮೂರು ಮಾತ್ರಾಕಾಲದಿಂದ ಉಚ್ಚರಿಸಬಹುದಾದ ನಾದಬಿಂದು ರೂಪದಿಂದ ಇರುವ ಈ ಪ್ರಣವಮಂತ್ರವು ಜಪವನ್ನು ಮಾಡುವವರಿಗೆ ಯಾವಾಗಲೂ ಮೋಕ್ಷವನ್ನು ಕೊಡುವುದಾಗಿರುವುದು.

೧೪. ಬ್ರಹ್ಮನೇ ಮೊದಲಾದ ಚರಾಚರ ಸ್ಥಿರರೂಪದಿಂದಿರುವ ಎಲ್ಲಾ ಪ್ರಾಣಿಗಳಿಗೂ ಈ ಮಂತ್ರವು ಪ್ರಾಣರೂಪವಾಗಿರುವುದರಿಂದ ಈ ಮಂತ್ರಕ್ಕೆ ಪ್ರಣವವೆಂದು ಹೆಸರಾಯಿತು. (ಪ್ರಣವ = ಪ್ರಾಣ).

ಆದ್ಯಂ ವರ್ಣಮಕಾರಂ ಚ ಉಕಾರಮುತ್ತರೇ ತತಃ ।
ಮಕಾರಂ ಮಧ್ಯತಶ್ಚೈವ ನಾದಾಂತಂ ತಸ್ಯಚೋಮಿತಿ ॥ ೧೫ ॥

ಜಲವದ್ವರ್ಣಮಾದ್ಯಂ ತು ದಕ್ಷಿಣೇ ಚೋತ್ತರೇ ತಥಾ ।
ಮಧ್ಯೇ ಮಕಾರಂ ಶುಚಿವದೋಂಕಾರೇ ಮುನಿಸತ್ತಮ ॥ ೧೬ ॥

ಅಕಾರಶ್ಚಾಪ್ಯುಕಾರೋಽಯಂ ಮಕಾರಶ್ಚ ತ್ರಯಂ ಕ್ರಮಾತ್ ।
ತಿಸ್ರೋ ಮಾತ್ರಾಸ್ಸಮಾಖ್ಯಾತಾ ಅರ್ಧಮಾತ್ರಾ ತತಃ ಪರಂ ॥ ೧೭ ॥

ಅರ್ಧಮಾತ್ರಾ ಮಹೇಶಾನಿ ಬಿಂದುನಾದಸ್ವರೂಪಿಣೀ ।
ವರ್ಣನೀಯಾ ನ ವೈ ಚಾದ್ಧಾ ಜ್ಞೇಯಾ ಜ್ಞಾನಿಭಿರೇವ ವಾ ॥ ೧೮ ॥

ಈಶಾನಸ್ಸರ್ವವಿದ್ಯಾನಾಮಿತ್ಯಾದ್ಯಾಶ್ಶ್ರುತಯಃ ಪ್ರಿಯೇ ।
ಮತ್ತ ಏವ ಭವಂತೀತಿ ವೇದಾಸ್ಸತ್ಯಂ ವದಂತಿ ಹಿ ॥ ೧೯ ॥

---

೧೫. ಈ ಮಂತ್ರದಸ್ವರೂಪವು ಹೀಗಿರುವುದು—ಮೊದಲನೆಯ ವರ್ಣವು ಅಕಾರವಾಗಿಯೂ, ಅದರಮುಂದೆ ಉಕಾರವೂ, ಮಕಾರವು ಮಧ್ಯದಲ್ಲಿಯೂ, ನಾದ ಬಿಂದುಗಳು ಕೊನೆಯಲ್ಲಿಯೂ ಇರುವುದರಿಂದ ಈ ಮಂತ್ರದ ಆಕಾರವು ಓಂಕಾರ ವೆಂದೆನಿಸಿಕೊಂಡಿರುವುದು.

೧೬. ಎಲೈ ಋಷಿಶ್ರೇಷ್ಠನೇ ಕೇಳು, ಈ ಓಂಕಾರದಲ್ಲಿ ಮೊದಲನೆಯ ಮತ್ತೂ ಅದರ ಮುಂದಿನ ಅಕ್ಷರಗಳಾದ ಅಕಾರ ಉಕಾರಗಳು ಜಲತತ್ತ್ವದಿಂದಲೂ, ಮಧ್ಯ ದಲ್ಲಿರುವ ಮಕಾರವು ಅಗ್ನಿತತ್ವವುಳ್ಳದ್ದಾಗಿಯೂ ಇರುವುದು.

೧೭. ಈ ಮಂತ್ರದ ಅಕಾರ, ಉಕಾರ, ಮಕಾರ, ಈ ಮೂರು ವರ್ಣಗಳೂ ಕ್ರಮವಾಗಿ ಮೂರು ಮಾತ್ರೆಗಳುಳ್ಳವಾಗಿರುವುವು. ಅದರ ಮುಂದಿನವುಗಳು ಅರ್ಧ ಮಾತ್ರೆಯಿಂದಿರುವುದು.

೧೮. ಎಲೈ ಮಹೇಶ್ವರಿಯೇ ಕೇಳು, ಬಿಂದು ನಾದಸ್ವರೂಪದಿಂದ ಇರುವ ಈ ಅರ್ಧಮಾತ್ರೆಯು ವರ್ಣಿಸುವುದಕ್ಕೆ ಆಗುವುದಿಲ್ಲ. ಇದನ್ನು ಜ್ಞಾನಿಗಳು ಮಾತ್ರವೇ ತಿಳಿಯುವರು.

೧೯-೨೦. ಎಲೈ ಪ್ರೀತಿಪಾತ್ರಳಾದ ಪಾರ್ವತಿಯೇ ಕೇಳು, ಈಶಾನಸ್ಸರ್ವ ವಿದ್ಯಾನಾಂ ಎಂಬಿವೇ ಮೊದಲಾದ ಶ್ರುತಿಗಳು ನನ್ನಿಂದಲೇ ಉಂಟಾದವೆಂದು ವೇದ

ತಸ್ಮಾದ್ವೇದಾದಿರೇವಾಹಂ ಪ್ರಣವೋ ಮಮ ವಾಚಕಃ ।
ವಾಚಕತ್ವಾನ್ಮಮೈಷೋಽಪಿ ವೇದಾದಿರಿತಿ ಕಥ್ಯತೇ ॥ ೨೦ ॥

ಅಕಾರಸ್ತು ಮಹದ್ಬೀಜಂ ರಜಸ್ಸ್ರಷ್ಟಾ ಚತುರ್ಮುಖಃ ।
ಉಕಾರಃ ಪ್ರಕೃತಿರ್ಯೋನಿಸ್ಸತ್ತ್ವಂ ಪಾಲಯಿತಾ ಹರಿಃ ॥ ೨೧ ॥

ಮಕಾರಃ ಪುರುಷೋ ಬೀಜೋ ತಮಸ್ಸಂಹಾರಕೋ ಹರಃ ।
ಬಿಂದುರ್ಮಹೇಶ್ವರೋ ದೇವಸ್ತಿರೋಭಾವ ಉದಾಹೃತಃ ॥ ೨೨ ॥

ನಾದಸ್ಸದಾಶಿವಃ ಪ್ರೋಕ್ತಸ್ಸರ್ವಾನುಗ್ರಹಕಾರಕಃ ।
ನಾದಮೂರ್ಧನಿ ಸಂಚಿಂತ್ಯಃ ಪರಾತ್ಪರತರಶ್ಶಿವಃ ॥ ೨೩ ॥

ಸ ಸರ್ವಜ್ಞಃ ಸರ್ವಕರ್ತಾ ಸರ್ವೇಶೋ ನಿರ್ಮಲೋಽವ್ಯಯಃ ।
ಅನಿರ್ದೇಶ್ಯಃ ಪರಬ್ರಹ್ಮ ಸಾಕ್ಷಾತ್ಸದಸತಃ ಪರಃ ॥ ೨೪ ॥

---

ಗಳೆಲ್ಲವೂ, ಸತ್ಯವಾಗಿ ಹೇಳುತ್ತಿರುವುವು. ಆದ್ದರಿಂದ ನಾನೇ ವೇದಗಳೆಲ್ಲಕ್ಕೂ ಆದಿಯಾದವನು. ಈ ಕಾರಣದಿಂದಲೇ ಈ ಓಂಕಾರರೂಪವಾದ ಪ್ರಣವವು ನನಗೆ ವಾಚಕವಾಗಿರುವುದು. ಈ ಮಂತ್ರವು ನನಗೆ ವಾಚಕವಾಗಿರುವುದರಿಂದ ಇದು ಎಲ್ಲಾ ವೇದಗಳಿಗೂ ಆದಿಯಾಗಿರುವುದು ಎಂದು ಇದನ್ನು ಹೇಳುವರು.

೨೧-೨೩. ಅಕಾರಕ್ಕೆ ಮಹತ್ತತ್ತ್ವವು ಬೀಜವು. ಗುಣವು, ರಜೋಗುಣವು. ಸೃಷ್ಟಿಕರ್ತನಾದ ಚತುರ್ಮುಖನಾದ ಬ್ರಹ್ಮನೇ ದೇವತೆಯು. ಉಕಾರಕ್ಕೆ ಪ್ರಕೃತಿತತ್ತ್ವವು ಬೀಜವು. ಗುಣವು ಸತ್ತ್ವಗುಣವು, ಸ್ಥಿತಿಕರ್ತೃವಾದ ವಿಷ್ಣುವೇ ದೇವತೆಯು. ಮಕಾರಕ್ಕೆ ಪುರುಷತತ್ತ್ವವು ಬೀಜವು. ಗುಣವು ತಮೋಗುಣವು. ಸಂಹಾರಕರ್ತೃವಾದ ಹರನೇ ದೇವತೆಯು. ಬಿಂದುವಿಗೆ ಮಹೇಶ್ವರನೇ ದೇವತೆಯು. ತಿರೋಭಾವವೇ ಇದರ ಕಾರ್ಯವು. ನಾದಕ್ಕೆ ಎಲ್ಲರಿಗೂ ಅನುಗ್ರಹವನ್ನು ಮಾಡುವ ಸದಾಶಿವನೇ ದೇವತೆಯು. ನಾದದ ಕೊನೆಯಲ್ಲಿ ಪರವಸ್ತುಗಳೆಲ್ಲಕ್ಕೂ ಶ್ರೇಷ್ಠನಾದ ಶಿವನನ್ನು ಧ್ಯಾನಮಾಡಬೇಕು. ಈಗ ಹೇಳಿದ ಪ್ರಕಾರದಿಂದ ದೇವತೆ, ತತ್ತ್ವಬೀಜಗಳನ್ನು ಧ್ಯಾನಮಾಡಬೇಕು.

೨೪-೨೫. ಸರ್ವಜ್ಞನಾಗಿಯೂ, ಸರ್ವಕರ್ತನಾಗಿಯೂ, ಎಲ್ಲರಿಗೂ ಅಧಿಪತಿಯಾಗಿಯೂ, ನಿರ್ಮಲನಾಗಿಯೂ, ಪರಿಪೂರ್ಣನಾಗಿಯೂ, ನಾಶರಹಿತನಾಗಿಯೂ

**ಅಕಾರಾದಿಷು ವರ್ಣೇಷು ವ್ಯಾಪಕಂ ಚೋತ್ತರೋತ್ತರಂ ।**
**ವ್ಯಾಪ್ಯಂ ತ್ವಧಸ್ತನಂ ವರ್ಣಮೇವಂ ಸರ್ವತ್ರ ಭಾವಯೇತ್ ॥ ೨೫ ॥**

**ಸದ್ಯಾದೀಶಾನಪರ್ಯಂತಾನ್ಯಕಾರಾದಿಷು ಪಂಚಸು ।**
**ಸ್ಥಿತಾನಿ ಪಂಚ ಬ್ರಹ್ಮಾಣಿ ತಾನಿ ಮನ್ಮೂರ್ತಯಃ ಕ್ರಮಾತ್ ॥ ೨೬ ॥**

**ಅಷ್ಟೌ ಕಲಾಸ್ಸಮಾಖ್ಯಾತಾ ಅಕಾರೇ ಸದ್ಯಜಾಶ್ರಿವೇ ।**
**ಉಕಾರೇ ವಾಮರೂಪಿಣ್ಯಸ್ತ್ರಯೋದಶ ಸಮೀರಿತಾಃ ॥ ೨೭ ॥**

**ಅಷ್ಟಾವಘೋರರೂಪಿಣ್ಯೋ ಮಕಾರೇ ಸಂಸ್ಥಿತಾಃ ಕಲಾಃ ।**
**ಬಿಂದೌ ಚತಸ್ರಸ್ಸಂಭೂತಾಃ ಕಲಾಃ ಪುರುಷಗೋಚರಾಃ ॥ ೨೮ ॥**

**ನಾದೇ ಪಂಚ ಸಮಾಖ್ಯಾತಾಃ ಕಲಾ ಈಶಾನಸಂಭವಾಃ ।**
**ಷಡ್ವಿಧೈಕ್ಯಾನುಸಂಧಾನಾತ್ಪ್ರಪಂಚಾತ್ಮಕತೋಚ್ಯತೇ ॥ ೨೯ ॥**

---

ಅನಿರ್ವಚನೀಯವಾಗಿಯೂ, ಸತ್ಪದಾರ್ಥ, ಅಸತ್ಪದಾರ್ಥ ಇವುಗಳೆಲ್ಲಕ್ಕಿಂತಲೂ ಶ್ರೇಷ್ಠನಾಗಿಯೂ, ಇರುವ ಪರಬ್ರಹ್ಮನೇ ಈ ಪ್ರಣವಮಂತ್ರದ ಅಕಾರವೇ ಮೊದಲಾದ ವರ್ಣಗಳಿಗೆ ವ್ಯಾಪಕನಾಗಿರುವನು. ವಾಚಕವಾಗಿರುವ ವರ್ಣಗಳು ಮಾತ್ರ ವ್ಯಾಪ್ಯವಾಗಿರುವವೆಂದು ಎಲ್ಲಾ ಕಡೆಯಲ್ಲಿಯೂ ಹೀಗೆ ಭಾವನೆಯನ್ನು ಮಾಡತಕ್ಕದ್ದು.

೨೬. ಸದ್ಯೋಜಾತರೂಪವೇ ಮೊದಲಾದ ಈಶಾನರೂಪವೇ ಕಡೆಯಾಗಿರುವ ಬ್ರಹ್ಮಸ್ವರೂಪವಾದ ನನ್ನ ಐದು ಆಕಾರಗಳು ಅಕಾರವೇ ಮೊದಲಾದ ಐದು ವರ್ಣಗಳಲ್ಲಿ ಕ್ರಮವಾಗಿ ಇರುವುವು.

೨೭-೨೯. ಎಲೌ ದೇವಿಯೇ ಕೇಳು, ಅಕಾರದಲ್ಲಿ ಸದ್ಯೋಜಾತ ಮೂರ್ತಿಯ ಎಂಟು ಕಲೆಗಳಿರುವುವು. ಉಕಾರದಲ್ಲಿ ವಾಮದೇವಮೂರ್ತಿಯ ಹದಿಮೂರು ಕಲೆಗಳಿರುವುವು. ಮಕಾರದಲ್ಲಿ ಅಘೋರರೂಪದಲ್ಲಿರುವ ಎಂಟು ಕಲೆಗಳು ಇರುವುವು. ಬಿಂದುವಿನಲ್ಲಿ ತತ್ಪುರುಷಮೂರ್ತಿಯ ರೂಪದಲ್ಲಿ ಇರುವ ನಾಲ್ಕು ಕಲೆಗಳಿರುವುವು. ನಾದದಲ್ಲಿ ಈಶಾನರೂಪದಲ್ಲಿರುವ ಐದು ಕಲೆಗಳಿರುವುವು ಈ ಆರು ವಿಧವಾದ ಐಕ್ಯವನ್ನು ಅನುಸಂಧಾನಮಾಡಿರುವುದರಿಂದ ಈ ಮಂತ್ರವು ಪ್ರಪಂಚದ ರೂಪವನ್ನು ಹೊಂದುವ ಕ್ರಮವನ್ನು ಹೇಳುವೆನು.

ಮಂತ್ರೋ ಯಂತ್ರಂ ದೇವತಾ ಚ ಪ್ರಪಂಚೋ ಗುರುರೇವ ಚ ।
ಶಿಷ್ಯಶ್ಚ ಷಟ್ಪದಾರ್ಥಾನಾಮೇಷಾಮರ್ಥಂ ಶೃಣು ಪ್ರಿಯೇ ॥ ೩೦ ॥

ಪಂಚವರ್ಣಸಮಷ್ಟಿಃ ಸ್ಯಾನ್ಮಂತ್ರಃ ಪೂರ್ವಮುದಾಹೃತಃ ।
ಸ ಏವ ಯಂತ್ರತಾಂ ಪ್ರಾಪ್ತೋ ವಕ್ಷ್ಯೇ ತನ್ಮಂಡಲಕ್ರಮಂ ॥ ೩೧ ॥

ಯಂತ್ರಂ ತು ದೇವತಾರೂಪಂ ದೇವತಾ ವಿಶ್ವರೂಪಿಣೀ ।
ವಿಶ್ವರೂಪೋ ಗುರುಃ ಪ್ರೋಕ್ತಶ್ಶಿಷ್ಯೋ ಗುರುವಪುಸ್ಸ್ಮೃತಃ ॥ ೩೨ ॥

ಓಮಿತೀದಂ ಸರ್ವಮಿತಿ ಸರ್ವಂ ಬ್ರಹ್ಮೇತಿ ಚ ಶ್ರುತೇಃ ।
ವಾಚ್ಯವಾಚಕಸಂಬಂಧೋಽಸ್ಯಯಮೇವಾರ್ಥ ಈರಿತಃ ॥ ೩೩ ॥

ಆಧಾರೋ ಮಣಿಪೂರಶ್ಚ ಹೃದಯಂ ತು ತತಃ ಪರಂ ।
ವಿಶುದ್ಧಿರಾಜ್ಞಾ ಚ ತತಃ ಶಕ್ತಿಃ ಶಾಂತಿರಿತಿ ಕ್ರಮಾತ್ ॥ ೩೪ ॥

---

೩೦. ಈ ಆರು ವಿಧವಾದ ಐಕ್ಯಕ್ಕೆ ಅನುಸಂಧೇಯವಾದ ಆರು ಪದಾರ್ಥಗಳನ್ನೂ ಅವುಗಳ ಅರ್ಥವನ್ನೂ ವಿವರಿಸಿ ಹೇಳುವೆನು ಕೇಳು. ಮಂತ್ರ, ಯಂತ್ರ, ದೇವತೆ, ಪ್ರಪಂಚ, ಗುರು, ಶಿಷ್ಯ, ಎಂಬ ಈ ಆರು ಪದಾರ್ಥಗಳು ಇರುವವು. ಇವುಗಳ ವಿವರಣೆಯನ್ನು ಹೇಳುವೆನು ಕೇಳು.

೩೧–೩೨. ಐದು ವರ್ಣಗಳ (ಅಕ್ಷರಗಳ) ಸಮೂಹವು (ಪ್ರಣವ) ಮಂತ್ರವೆಂದು ಮೊದಲು ಹೇಳಿರುವೆನು. ಆ ಮಂತ್ರವೇ ಯಂತ್ರದ ರೂಪವನ್ನು ಹೊಂದಿರುವುದು. ದೇವತೆಯು ಪ್ರಪಂಚದ ರೂಪದಿಂದ ಇರುವುದು. ಗುರು ಪ್ರಪಂಚದ ರೂಪವುಳ್ಳವನೆಂದು ಹೇಳುವರು. ಶಿಷ್ಯನು ಗುರುವಿನ ಭಾವನೆಯಿಂದ ಗುರುವಿನ ಆಕಾರದಿಂದ ಇರುವನೆಂದು ನಿಶ್ಚಯಿಸಲ್ಪಟ್ಟಿರುವುದು.

೩೩. "ಓಮಿತೀದಂ ಸರ್ವಂ" ಎಂಬುದಾಗಿಯೂ, "ಸರ್ವಂ ಬ್ರಹ್ಮ" ಎಂಬುದಾಗಿಯೂ ವೇದವೇ ಇರುವುದರಿಂದ (ತೈ. ಉ. ಅಧ್ಯಾಯ ೧) ವಾಚ್ಯವಾಚಕರೂಪವಾದ ಸಂಬಂಧವೂ, ಈ ಪ್ರಕಾರವೆಂದು ಹೇಳಿದ್ದಾಯಿತು.

೩೪–೩೫. ಆಧಾರ, ಮಣಿಪೂರ, ಹೃದಯ, ವಿಶುದ್ಧಿ, ಆಜ್ಞಾ, ಶಕ್ತಿ, ಶಾಂತಿ ಎಂಬ ಸ್ಥಾನಗಳು ಕ್ರಮವಾಗಿ ಧ್ಯಾನಮಾಡಲು ಯೋಗ್ಯವಾದ ಪ್ರದೇಶಗಳಾಗಿರು

ಸ್ಥಾನಾನ್ಯೇತಾನಿ ದೇವೇಶಿ ಶಾಂತ್ಯತೀತಾ ಪರಾತ್ಪರಂ ।
ಅಧಿಕಾರೀ ಭವೇದ್ಯಸ್ಯ ವೈರಾಗ್ಯಂ ಜಾಯತೇ ದೃಢಂ ॥ ೩೫ ॥

ವಿಷಯಃ ಸ್ಯಾಮಹಂ ದೇವಿ ಜೀವಬ್ರಹ್ಮೈಕ್ಯಭಾವನಾತ್ ।
ಸಂಬಂಧಂ ಶೃಣು ದೇವೇಶಿ ವಿಷಯಃ ಸಮ್ಯಗೀರಿತಃ ॥ ೩೬ ॥

ಜೀವಾತ್ಮನೋರ್ಮಯಾ ಸಾರ್ಧಮೈಕ್ಯಸ್ಯ ಪ್ರಣವಸ್ಯ ಚ ।
ವಾಚ್ಯವಾಚಕಭಾವೋಽತ್ರ ಸಂಬಂಧಸ್ಸಮುದೀರಿತಃ ॥ ೩೭ ॥

ವ್ರತಾದಿನಿರತಃ ಶಾಂತಸ್ತಪಸ್ವೀ ವಿಜಿತೇಂದ್ರಿಯಃ ।
ಶೌಚಾಚಾರಸಮಾಯುಕ್ತೋ ಭೂದೇವೋ ವೇದನಿಷ್ಠಿತಃ ॥ ೩೮ ॥

---

ವುವು. ಇವು ಶರೀರದಲ್ಲಿರುವ ಷಟ್ಚಕ್ರಗಳು. ಯೋಗಿಗಳು ಇದನ್ನು ಚೆನ್ನಾಗಿ ತಿಳಿದಿರುವರು. ಎಲೈ ದೇವೇಶಿಯೇ ಕೇಳು. ಶಾಂತ್ಯತೀತವೆಂಬುದು ಎಲ್ಲಕ್ಕಿಂತಲೂ ಉತ್ತಮವಾದದ್ದು. ಯಾವನಿಗೆ ದೃಢವಾದ ವೈರಾಗ್ಯವು ಇರುವುದೋ ಅವನೇ ಇದಕ್ಕೆ ಅಧಿಕಾರಿಯೆನಿಸುವನು.

೩೬. ಎಲೈ ದೇವಿಯೇ ಕೇಳು, ಜೀವಬ್ರಹ್ಮರಿಗೆ ಐಕ್ಯಭಾವನೆಯನ್ನು ಮಾಡುವುದರಿಂದ ನಾನೇ ಈ ಮಂತ್ರಕ್ಕೆ ವಿಷಯವಾಗಿರುವೆನು. ಈ ವಿಷಯವನ್ನು ಚೆನ್ನಾಗಿ ಹೇಳಿರುವೆನು. ಇನ್ನು ಮುಂದೆ ಸಂಬಂಧವನ್ನು ಹೇಳುವೆನು.

೩೭. ಜೀವಬ್ರಹ್ಮರಿಗೂ, ನನಗೂ, ಪ್ರಣವಕ್ಕೂ ಐಕ್ಯವನ್ನು ಪ್ರತಿಪಾದನೆ ಮಾಡುವುದೇ ವಾಚ್ಯವಾಚಕಭಾವವೆನಿಸುವುದು. ಇದನ್ನು ಸಂಬಂಧವೆಂತಲೂ ಹೇಳುವರು.

೩೮-೩೯. ವೇದಾದಿ ಮಂತ್ರಗಳಲ್ಲಿ ಆಸಕ್ತನಾದವನೂ, ಉಪಶಾಂತನೂ, ತಪಸ್ಸನ್ನು ಮಾಡುವವನೂ, ಇಂದ್ರಿಯ ಜಯವನ್ನು ಹೊಂದಿರುವವನೂ, ಶೌಚವೇ ಮೊದಲಾದ ಆಚಾರದಿಂದ ಕೂಡಿರುವವನೂ, ಬ್ರಹ್ಮನಿಷ್ಠನಾದ ವಿಪ್ರನೂ, ಐಹಿಕವಾದ ಮತ್ತು ಪಾರಲೌಕಿಕವಾದ ಸೌಖ್ಯಗಳಲ್ಲಿ ವಿರಕ್ತಿಯಿಂದ ಇರುವವನೂ,

**ವಿಷಯೇಷು ವಿರಕ್ತಸ್ಸನ್ನೈಹಿಕಾಮುಷ್ಮಿಕೇಷು ಚ ।**
**ದೇವಾನಾಂ ಬ್ರಾಹ್ಮಣೋऽಪೀಹ ಲೋಕಜೇಷು ಶಿವವ್ರತೀ ॥ ೩೯ ॥**

**ಸರ್ವಶಾಸ್ತ್ರಾರ್ಥತತ್ತ್ವಜ್ಞಂ ವೇದಾಂತಜ್ಞಾನಪಾರಗಂ ।**
**ಆಚಾರ್ಯಮುಪಸಂಗಮ್ಯ ಯತಿಂ ಮತಿಮತಾಂ ವರಂ ॥ ೪೦ ॥**

**ದೀರ್ಘದಂಡಪ್ರಣಾಮಾದ್ಯೈಸ್ತೋಷಯೇದ್ಯತ್ನತಸ್ಸುಧೀಃ ।**
**ಶಾಂತಾದಿಗುಣಸಂಯುಕ್ತಃ ಶಿಷ್ಯಸ್ಸೌಶೀಲ್ಯವಾನ್ನರಃ ॥ ೪೧ ॥**

**ಯೋ ಗುರುಃ ಸ ಶಿವಃ ಪ್ರೋಕ್ತೋ ಯಶ್ಶಿವಸ್ಸಗುರುಸ್ಸ್ಮೃತಃ ।**
**ಇತಿ ನಿಶ್ಚಿತ್ಯ ಮನಸಾ ಸ್ವವಿಚಾರಂ ನಿವೇದಯೇತ್ ॥ ೪೨ ॥**

---

ದೇವರಪೂಜೆಯುನ್ನು ಮಾಡುವ ಬ್ರಾಹ್ಮಣನೂ, ಮತ್ತು ಈ ಲೋಕದಲ್ಲಿ ಶಿವವ್ರತಾನುಷ್ಠಾನಮಾಡುವವನೂ, ಇವರುಗಳೆಲ್ಲರೂ ಈ ಪ್ರಣವಮಂತ್ರ ಜಪಕ್ಕೆ ಅಧಿಕಾರಿಯೆನಿಸುವರು.

೪೦-೪೧. ಮೇಲೆ ಹೇಳಿದ ಗುಣಗಳಿಂದ ಕೂಡಿರುವ ಅಧಿಕಾರಿಯು ವೇದಾಂತಜ್ಞಾನಪಾರಂಗತನೂ ಎಲ್ಲಾ ಶಾಸ್ತ್ರಾರ್ಥಗಳನ್ನೂ ತಿಳಿದಿರುವವನೂ, ಆಚಾರಶೀಲನೂ ಆದ ಸನ್ಯಾಸಿಯುನ್ನು ಗುರುವನ್ನಾಗಿ ಹೊಂದಿ ಅವನಿಗೆ ದೀರ್ಘದಂಡನಮಸ್ಕಾರವೇ ಮೊದಲಾದ ಉಪಚಾರಗಳನ್ನು ಮಾಡಿ ಪ್ರಯತ್ನಪೂರ್ವಕವಾಗಿ ಅವನನ್ನು ಸಂತೋಷಪಡಿಸಬೇಕು. ಉಪಶಾಂತಿಯೇ ಮೊದಲಾದ ಗುಣಗಳಿಂದ ಕೂಡಿದವನೂ, ಸರಿಯಾದ ಸ್ವಭಾವವುಳ್ಳವನೂ ಆಗಿರುವವನು ಉತ್ತಮವಾದ ಶಿಷ್ಯನೆನಿಸುವನು.

೪೨. ಗುರುವೇ ಸಾಕ್ಷಾಚ್ಛಿವನು, ಶಿವನೇ ಗುರುರೂಪದಿಂದಿರುವನು. ಹೀಗೆಂದು ಉತ್ತಮನಾದ ಶಿಷ್ಯನು ಮನಸ್ಸಿನಲ್ಲಿ ಭಾವಿಸಿ ಗುರುವನ್ನು ಶುಶ್ರೂಷಾದಿಗಳಿಂದ ಸಂತೋಷಪಡಿಸಬೇಕು. ತನ್ನ ವಿಚಾರವನ್ನು ಎಂದರೆ ತನಗೆ ಮಂತ್ರೋಪದೇಶವು ಆಗಬೇಕೆಂಬ ವಿಚಾರವನ್ನು ಗುರುವಿಗೆ ಅರಿಕೆಮಾಡಬೇಕು.

ಲಬ್ಧಾನುಜ್ಞಸ್ತು ಗುರುಣಾ ದ್ವಾದಶಾಹಂ ಪಯೋವ್ರತೀ ।
ಸಮುದ್ರತೀರೇ ನದ್ಯಾಂ ಚ ಪರ್ವತೇ ವಾ ಶಿವಾಲಯೇ ॥ ೪೩ ॥

ಶುಕ್ಲಪಕ್ಷೇ ತು ಪಂಚಮ್ಯಾಮೇಕಾದಶ್ಯಾಂ ತಥಾಪಿ ವಾ ।
ಪ್ರಾತಃ ಸ್ನಾತ್ವಾ ತು ಶುದ್ಧಾತ್ಮಾ ಕೃತನಿತ್ಯಕ್ರಿಯಸ್ಸುಧೀಃ ॥ ೪೪ ॥

ಗುರುಮಾಹೂಯ ವಿಧಿನಾ ನಾಂದೀಶ್ರಾದ್ಧಂ ವಿಧಾಯ ಚ ।
ಕ್ಷೌರಂ ಚ ಕಾರಯಿತ್ವಾಥ ಕಕ್ಷೋಪಸ್ಥವಿವರ್ಜಿತಂ ॥ ೪೫ ॥

ಕೇಶಶ್ಮಶ್ರುನಖಾನಾಂ ವೈ ಸ್ನಾತ್ವಾ ನಿಯತಮಾನಸಃ ।
ಸಕ್ತುಂ ಪ್ರಾಶ್ಯಾಥ ಸಾಯಾಹ್ನೇ ಸ್ನಾತ್ವಾ ಸಂಧ್ಯಾಮುಪಾಸ್ಯ ಚ ॥ ೪೬ ॥

ಸಾಯಮೌಪಾಸನಂ ಕೃತ್ವಾ ಗುರುಣಾ ಸಹಿತೋ ದ್ವಿಜಃ ।
ಶಾಸ್ತ್ರೋಕ್ತದಕ್ಷಿಣಾಂ ದತ್ವಾ ಶಿವಾಯ ಗುರುರೂಪಿಣೇ ॥ ೪೭ ॥

---

೪೩–೪೪- ತನಗೆ ಗುರುವಾದವನ ಅನುಜ್ಞೆಯನ್ನು ಪಡೆದನಂತರ ಹನ್ನೆರಡು ದಿವಸಗಳು ಪಯೋವ್ರತವನ್ನು ಎಂದರೆ ಹಾಲು ಒಂದನೇ ಆಹಾರವಾಗಿ ಉಪಯೋಗಿಸುತ್ತಿರುವ ವ್ರತವನ್ನು ಆಚರಿಸಬೇಕು. ಸಮುದ್ರತೀರ, ನದೀತೀರ, ಪರ್ವತ ಪ್ರದೇಶ, ಶಿವದೇವಸ್ಥಾನ, ಈ ಪ್ರದೇಶಗಳಲ್ಲಿ ಎಲ್ಲಿಯಾದರೂ, ಒಂದು ಪ್ರಶಸ್ತವಾದ ಕಡೆಯಲ್ಲಿ ಶುಕ್ಲಪಕ್ಷದ ಪಂಚಮಿ, ಏಕಾದಶಿ, ಇವೆರಡರಲ್ಲಿ ಯಾವುದಾದರೂ, ಒಂದು ದಿನ ಬೆಳಗ್ಗೆ ಸ್ನಾನವನ್ನು ಮಾಡಿ ಪರಿಶುದ್ಧನಾಗಿ ತನ್ನ ನಿತ್ಯಕರ್ಮಗಳೆಲ್ಲವನ್ನೂ ಮಾಡಿಕೊಳ್ಳಬೇಕು.

೪೫-೪೭. ಅನಂತರ ತನ್ನ ಗುರುವನ್ನು ಬರಮಾಡಿಕೊಂಡು ಶಾಸ್ತ್ರಕ್ರಮದ ಪ್ರಕಾರವಾಗಿ ನಾಂದೀಶ್ರಾದ್ಧವನ್ನು ಮಾಡಿದ ಅನಂತರ ಕಕ್ಷೋಪಸ್ಥಗಳನ್ನು ಬಿಟ್ಟು ಉಳಿದ ಗಡ್ಡ, ಮೀಸೆ, ಉಗುರು, ಕೂದಲು ಇವುಗಳನ್ನು ತೆಗೆಯಿಸಿ ಕ್ಷೌರವನ್ನು ಮಾಡಿಸಿಕೊಳ್ಳಬೇಕು. ನಂತರ ಸ್ನಾನವನ್ನುಮಾಡಿ, ಶುದ್ಧವಾದ ಮನಸ್ಸುಳ್ಳವನಾಗಿ ಹಿಟ್ಟನ್ನು ಆಹಾರವನ್ನಾಗಿ ಉಪಯೋಗಿಸಿ, ಇದ್ದುಕೊಂಡು ಸಾಯಂಕಾಲದಲ್ಲಿ ಪುನಃ ಸ್ನಾನ ಸಂಧ್ಯಾವಂದನೆಯನ್ನು ಮಾಡಿ, ತನ್ನ ಗುರುವಿನ ಸನ್ನಿಧಿಯಲ್ಲೇ ಸಾಯಂಕಾಲದ ಔಪಾಸನೆಯನ್ನು ಮಾಡಿ, ಶಿವರೂಪದಿಂದ ಇರುವ ಗುರುವಿಗೆ ಶಾಸ್ತ್ರೋಕ್ತವಾದ ದಕ್ಷಿಣೆಯನ್ನು ಕೊಡಬೇಕು.

ಹೋಮದ್ರವ್ಯಾಣಿ ಸಂಪಾದ್ಯ ಸ್ವಸೂತ್ರೋಕ್ತವಿಧಾನತಃ ।
ಅಗ್ನಿಮಾಧಾಯ ವಿಧಿವಲ್ಲೌಕಿಕಾದಿವಿಭೇದತಃ ॥ ೪೮ ॥

ಆಹಿತಾಗ್ನಿಸ್ತು ಯಃ ಕುರ್ಯಾತ್ಪ್ರಾಜಾಪತ್ಯೇಷ್ಟಿನಾಹಿತೇ ।
ಶ್ರೌತೇ ವೈಶ್ವಾನರೇ ಸಮ್ಯಕ್ಸರ್ವವೇದಸದಕ್ಷಿಣಂ ॥ ೪೯ ॥

ಅಥಾಗ್ನಿಮಾತ್ಮನ್ಯಾರೋಪ್ಯ ಬ್ರಾಹ್ಮಣಃ ಪ್ರವ್ರಜೇದ್ಗೃಹಾತ್ ।
ಶ್ರಪಯಿತ್ವಾ ಚರುಂ ತಸ್ಮಿನ್ಸಮಿದನ್ನಾಜ್ಯಭೇದತಃ ॥ ೫೦ ॥

ಪೌರುಷೇಣೈವ ಸೂಕ್ತೇನ ಹುತ್ವಾ ಪ್ರತ್ಯೃಚಮಾತ್ಮವಾನ್ ।
ಹುತ್ವಾ ಚ ಸೌವಿಷ್ಟಕೃತೀಂ ಸ್ವಸೂತ್ರೋಕ್ತವಿಧಾನತಃ ॥ ೫೧ ॥

ಹುತ್ವೋಪರಿಷ್ಟಾತ್ತನ್ತ್ರಂ ಚ ತೇನಾಗ್ನೇರುತ್ತರೇ ಬುಧಃ ।
ಸ್ಥಿತ್ವಾಸನೇ ಜಪೇನ್ಮೌನೀ ಚೈಲಾಜಿನಕುಶೋತ್ತರೇ ।

---

೪೮. ತನ್ನ ಶಾಖಾಸೂತ್ರಗಳಿಗನುಸಾರವಾಗಿ ಹೋಮದ್ರವ್ಯವನ್ನು ಸಂಪಾದಿಸಿ, ಲೌಕಿಕ ವೈದಿಕವೇ ಮೊದಲಾದ ಭೇದಕ್ಕನುಸಾರವಾಗಿ ಅಗ್ನಿಯನ್ನು ಪ್ರತಿಷ್ಠಿಸಿ ಆಧಾನಮಾಡಿಕೊಳ್ಳಬೇಕು.

೪೯-೫೦. ಆಹಿತಾಗ್ನಿಯಾದ ಎಂದರೆ ಅಗ್ನಿಹೋತ್ರವನ್ನಿಟ್ಟುಕೊಂಡಿರುವ ಬ್ರಾಹ್ಮಣನು ತನಗೆ ಹಿತಕರವಾದ ವೈಶ್ವಾನರವೆಂಬ ಶ್ರೌತಾಗ್ನಿಯಲ್ಲಿ ಪ್ರಾಜಾಪತ್ಯವೆಂಬ ಇಷ್ಟಿಯಿಂದಲೂ, ಸರ್ವವೇದವೆಂಬ ಇಷ್ಟಿಯಿಂದಲೂ, ದಕ್ಷಿಣೆ ಸಹಿತವಾಗಿ ಆ ಹೋಮವನ್ನು ಮಾಡಿದ ನಂತರ ಅಗ್ನಿಯನ್ನು ಆತ್ಮಸಮಾರೋಪಣೆ ಮಾಡಿಕೊಂಡು ವೈರಾಗ್ಯದಿಂದ ಮನೆಯಿಂದ ಹೊರಕ್ಕೆ ಹೊರಡಬೇಕು.

೫೧-೫೨. ಸಂನ್ಯಾಸಗ್ರಹಣಮಾಡುವವನು ಆಧಾನಮಾಡಿದ ಆ ಅಗ್ನಿಯಲ್ಲಿ ಚರುವನ್ನು ಪಾಕಮಾಡಿ ಸಮಿತ್, ಅನ್ನ, ಆಜ್ಯ, ಎಂಬ ಮೂರು ಹೋಮ ದ್ರವ್ಯಗಳನ್ನು ಉಪಯೋಗಿಸಿ ಪುರುಷಸೂಕ್ತದಿಂದ ಪ್ರತಿಯೊಂದು ಮಂತ್ರಕ್ರಮವಾಗಿ ಹೋಮಮಾಡಿದ ನಂತರ, ತನ್ನ ಸೂತ್ರಾನುಸಾರವಾಗಿ ಹೇಳಿರುವ ಕ್ರಮದಿಂದ ಸ್ವಿಷ್ಟಕೃದ್ಧೋಮವನ್ನೂ ಮಾಡಿ, ಆ ಅಗ್ನಿಯ ಉತ್ತರದಿಕ್ಕಿನಲ್ಲಿ ದರ್ಭೆಯಮೇಲೆ ಅಜಿನವನ್ನೂ ಅದರಮೇಲೆ ಬಟ್ಟೆಯನ್ನೂ ಹಾಕಿ ಆ ಆಸನದಲ್ಲಿ ಕುಳಿತುಕೊಳ್ಳಬೇಕು.

ಯಾವದ್ಬ್ರಾಹ್ಮಮುಹೂರ್ತಂ ತು ಗಾಯತ್ರೀಂ ದೃಢಮಾನಸಃ । ॥ ೫೨ ॥

ತತಃ ಸ್ನಾತ್ವಾ ಯಥಾಪೂರ್ವಂ ಶ್ರಪಯಿತ್ವಾ ಚರುಂ ತತಃ ॥
ಪೌರುಷಂ ಸೂಕ್ತಮಾರಭ್ಯ ವಿರಜಾನ್ತಂ ಹುನೇದ್ಬುಧಃ ॥ ೫೩ ॥

ವಾಮದೇವಮತೇನಾಪಿ ಶೌನಕಾದಿಮತೇನ ವಾ ।
ತತ್ರ ಮುಖ್ಯಂ ವಾಮದೇವ್ಯಂ ಗರ್ಭಯುಕ್ತೋ ಯತೋ ಮುನಿಃ ॥ ೫೪ ॥

ಹೋಮಶೇಷಂ ಸಮಾಪ್ಯಾಥ ಪ್ರಾತರೌಪಾಸನಂ ಹುನೇತ್ ।
ತತೋಽಗ್ನಿಮಾತ್ಮನ್ಯಾರೋಪ್ಯ ಪ್ರಾತಸ್ಸನ್ಧ್ಯಾಮುಪಾಸ್ಯ ಚ ॥ ೫೫ ॥

ಸವಿತರ್ಯುದಿತೇ ಪಶ್ಚಾತ್ಸಾವಿತ್ರೀಂ ಪ್ರವಿಶೇತ್ಕ್ರಮಾತ್ ।
ಏಷಣಾನಾಂ ತ್ರಯಂ ತ್ಯಕ್ತ್ವಾ ಪ್ರೇಷಮುಚ್ಚಾರ್ಯ ಚ ಕ್ರಮಾತ್ ॥ ೫೬ ॥

---

ಯಾರ ಸಂಗಡವೂ, ಯಾವ ಮಾತನ್ನೂ ಆಡಬಾರದು. ಬ್ರಾಹ್ಮಮುಹೂರ್ತವು ಬರುವವರೆಗೂ, ಮನಸ್ಸನ್ನು ದೃಢವಾಗಿರಿಸಿಕೊಂಡು ಗಾಯತ್ರೀ ಮಂತ್ರವನ್ನು ಜಪಮಾಡುತ್ತಿರಬೇಕು.

೫೩. ಅನಂತರ ಸ್ನಾನವನ್ನು ಮಾಡಿ ಹಿಂದಿನಂತೆಯೇ ಆ ಅಗ್ನಿಯಲ್ಲಿ ಚರುವನ್ನು ಸಿದ್ಧಪಡಿಸಿಕೊಂಡು ಪುರುಷಸೂಕ್ತದಿಂದ ಪ್ರಾರಂಭಿಸಿ ವಿರಜಾಮಂತ್ರಗಳ ಕೊನೆಯವರೆಗೂ, ಪ್ರತಿಮಂತ್ರಪುರಸ್ಸರವಾಗಿ ಹೋಮವನ್ನು ಮಾಡಬೇಕು.

೫೪. ಈ ಪ್ರಕಾರದಿಂದ ಸಂನ್ಯಾಸವನ್ನು ತೆಗೆದುಕೊಳ್ಳುವುದರಲ್ಲಿ ವಾಮದೇವಮತ, ಶೌನಕಾದಿಮತ ಎಂದು ಎರಡು ಮತಗಳಿರುವುವು. ಇವೆರಡರಲ್ಲಿ ವಾಮದೇವ ಋಷಿಯು ಗರ್ಭದಿಂದಲೇ ಮುಕ್ತನಾಗಿರುವ ಕಾರಣ ವಾಮದೇವ ಋಷಿಯ ಮತವೇ ಮುಖ್ಯವಾಗಿರುವುದು.

೫೫. ಹಿಂದೆ ಹೇಳಿದ ಹೋಮವನ್ನು ಮಾಡಿದ ನಂತರ ಉಳಿದ ಹೋಮಗಳೆಲ್ಲವನ್ನೂ ಮಾಡಿ ಮುಗಿಸಿ ಬೆಳಗಿನ ಔಪಾಸನೆಯನ್ನು ಮಾಡಬೇಕು. ಅನಂತರ ಅಗ್ನಿಯನ್ನು ಆತ್ಮಸಮಾರೋಪಣೆ ಮಾಡಿಕೊಂಡು ಪ್ರಾತಸ್ಸಂಧ್ಯಾವಂದನೆಯನ್ನೂ ಮಾಡಬೇಕು.

೫೬-೫೭. ಸೂರ್ಯೋದಯವು ಆದನಂತರ ಕ್ರಮವಾಗಿ ಸಾವಿತ್ರೀಪ್ರವೇಶವನ್ನು ಮಾಡತಕ್ಕದ್ದು. ದಾರೇಷಣಾ, ವಿತ್ತೇಷಣಾ, ಪುತ್ರೇಷಣಾ ಎಂಬ ಮೂರು

ಶಿಖೋಪವೀತೇ ಸಂತ್ಯಜ್ಯ ಕಟಿಸೂತ್ರಾದಿಕಂ ತತಃ ।
ವಿಸೃಜ್ಯ ಪ್ರಾಙ್ಮುಖೋ ಗಚ್ಛೇದುತ್ತರಾಶಾಮುಖೋಽಪಿ ವಾ ॥ ೫೭ ॥

ಗೃಹ್ಣೀಯಾದ್ದಂಡಕೌಪೀನಾದ್ಯುಚಿತಂ ಲೋಕವರ್ತನೇ ।
ವಿರಕ್ತಶ್ಚೇನ್ನ ಗೃಹ್ಣೀಯಾಲ್ಲೋಕವೃತ್ತಿವಿಚಾರಣೇ ॥ ೫೮ ॥

ಗುರೋಸ್ಸಮೀಪಂ ಗತ್ವಾಥ ದಂಡವತ್ಪ್ರಣಮೇತ್ತ್ರಯಂ ।
ಸಮುತ್ಥಾಯ ತತಸ್ತಿಷ್ಠೇದ್ಗುರುಪಾದಸಮೀಪತಃ ॥ ೫೯ ॥

ತತೋ ಗುರುಃ ಸಮಾದಾಯ ವಿರಜಾನಲಜಂ ಸಿತಂ ।
ಭಸ್ಮ ತೇನೈವ ತಂ ಶಿಷ್ಯಂ ಸಮುದ್ಧೂಲ್ಯ ಯಥಾವಿಧಿ ॥ ೬೦ ॥

ಅಗ್ನಿರಿತ್ಯಾದಿಭಿರ್ಮಂತ್ರೈಸ್ತ್ರಿಪುಂಡ್ರಂ ಧಾರಯೇತ್ತತಃ ।
ಹೃತ್ಪಂಕಜೇ ಸಮಾಸೀನಂ ಮಾಂ ತ್ವಯಾ ಸಹ ಚಿಂತಯೇತ್ ॥ ೬೧ ॥

---

ವಿಧವಾದ ಇಷ್ಟಿಗಳನ್ನು ತ್ಯಾಗಮಾಡಿ ಕ್ರಮವಾಗಿ ಪ್ರೇಷಮಂತ್ರವನ್ನು ಉಚ್ಚರಿಸಿದ ನಂತರ, ಶಿಖಾ, ಯಜ್ಞೋಪವೀತಗಳನ್ನೂ, ಉಡಿದಾರ ಮುಂತಾದ್ದೆಲ್ಲವನ್ನೂ ತ್ಯಜಿಸಿ ಪೂರ್ವಾಭಿಮುಖವಾಗಿಯಾಗಲಿ, ಉತ್ತರಾಭಿಮುಖವಾಗಿಯಾಗಲಿ ಹೊರಟು ಹೋಗ ಬೇಕು.

೫೮. ಲೋಕರೀತಿಯನ್ನು ಅನುಸರಿಸುವುದಕ್ಕಾಗಿ ದಂಡ, ಕೌಪೀನ ಇವು ಗಳನ್ನು ಪರಿಗ್ರಹಿಸಬೇಕು. ಲೋಕರೀತಿಯನ್ನು ಅನುಸರಿಸುವುದರಲ್ಲಿಯೂ ವೈರಾ ಗ್ಯವುಳ್ಳವನಾಗಿದ್ದರೆ ದಂಡ ಕೌಪೀನಗಳನ್ನೂ ಪರಿಗ್ರಹಿಸಬೇಕಾಗಿಲ್ಲವು.

೫೯. ಅನಂತರ ಅವನು ಗುರುವಿನ ಹತ್ತಿರಕ್ಕೆ ಹೋಗಿ ದಂಡಾಕಾರವಾಗಿ ಮೂರು ನಮಸ್ಕಾರಗಳನ್ನು ಮಾಡಿ ಗುರುವಿನ ಪಾದಸಮೀಪದಲ್ಲಿ ಎದ್ದು ನಿಂತು ಕೊಳ್ಳಬೇಕು.

೬೦-೬೨. ಗುರುವು ಇವನನ್ನು ನೋಡಿ, ವಿರಜಾಗ್ನಿಯಿಂದುಂಟಾದ ಶುಭ್ರ ವಾದ ಭಸ್ಮವನ್ನು ತೆಗೆದುಕೊಂಡು ಶಾಸ್ತ್ರಕ್ಕನುಸಾರವಾಗಿ ಆ ಭಸ್ಮದಿಂದ ಶಿಷ್ಯನಾದ ಇವನಿಗೆ ಚೆನ್ನಾಗಿ ಉದ್ಧೂಳನೆಯನ್ನು ಮಾಡುವನು. ಅಗ್ನಿರಿತಿಭಸ್ಮ, ಜಲಮಿತಿ ಭಸ್ಮ ಇವೇ ಮೊದಲಾದ ಮಂತ್ರಗಳಿಂದ ಶಿಷ್ಯನಿಗೆ ತ್ರಿಪುಂಡ್ರಧಾರಣೆಯನ್ನು ಮಾಡಿಸಿ

ಹಸ್ತಂ ನಿಧಾಯ ಶಿರಸಿ ಶಿಷ್ಯಸ್ಯ ಪ್ರೀತಮಾನಸಃ ।
ಋಷ್ಯಾದಿಸಹಿತಂ ತಸ್ಯ ದಕ್ಷಕರ್ಣೇ ಸಮುಚ್ಚರೇತ್ ॥ ೬೨ ॥

ಪ್ರಣವಂ ತ್ರಿಪ್ರಕಾರಂ ತು ತತಸ್ತಸ್ಯಾರ್ಥಮಾದಿಶೇತ್ ।
ಷಡ್ವಿಧಾರ್ಥಂ ಪರಿಜ್ಞಾನಸಹಿತಂ ಗುರುಸತ್ತಮಃ ॥ ೬೩ ॥

ದ್ವಿಷಟ್ಪ್ರಕಾರಂ ಸ ಗುರುಂ ಪ್ರಣಮ್ಯ ಭುವಿ ದಂಡವತ್ ।
ತದಧೀನೋ ಭವೇನ್ನಿತ್ಯಂ ವೇದಾಂತಂ ಸಮ್ಯಗಭ್ಯಸೇತ್ ॥ ೬೪ ॥

ಮಾಮೇವ ಚಿಂತಯೇನ್ನಿತ್ಯಂ ಪರಮಾತ್ಮಾನಮಾತ್ಮನಿ ।
ವಿಶುದ್ಧೇ ನಿರ್ವಿಕಾರೇ ಷ್ವೈ ಬ್ರಹ್ಮಸಾಕ್ಷಿಣಮವ್ಯಯಂ ॥ ೬೫ ॥

---

ಹೃದಯಕಮಲದಲ್ಲಿ ದೇವಿಯಾದ ನಿನ್ನ ಸಂಗಡ ಇರುವ ನನ್ನನ್ನು ಧ್ಯಾನಮಾಡಿ ಸಂತೋಷದಿಂದ ಶಿಷ್ಯನ ತಲೆಯಮೇಲೆ ತನ್ನ ಕೈಯ್ಯನ್ನಿರಿಸಿ ಋಷಿದೇವತಾ ಛಂದಸ್ಸುಗಳಿಂದ ಸಹಿತವಾದ ಮಂತ್ರವನ್ನು ಅವನ ಬಲಗಡೆಯ ಕಿವಿಯಲ್ಲಿ ಉಪದೇಶವನ್ನು ಮಾಡಬೇಕು.

೬೩. ಮೂರು ವಿಧವಾಗಿರುವ ಪ್ರಣವಮಂತ್ರವನ್ನೂ ಅದರ ಆರು ವಿಧವಾದ ಅರ್ಥವನ್ನೂ ಅವನಿಗೆ ತಿಳಿಸಬೇಕು. ಗುರುಗಳಲ್ಲಿ ಉತ್ತಮನಾದ ಆ ಗುರುವು ಆ ಪ್ರಣವಮಂತ್ರದ ಜ್ಞಾನಭಾವನಾ ಸಹಿತವಾಗಿ ಅದರ ಅರ್ಥವೆಲ್ಲವನ್ನೂ ಆ ಶಿಷ್ಯನಿಗೆ ಉಪದೇಶ ಮಾಡಬೇಕು.

೬೪. ಗುರುವಿನಿಂದ ಈ ಪ್ರಕಾರವಾಗಿ ಉಪದೇಶವನ್ನು ಹೊಂದಿದ ಶಿಷ್ಯನು ಭೂಮಿಯಮೇಲೆ ದಂಡಾಕಾರವಾಗಿ ಹನ್ನೆರಡು ಸಾರಿ ಗುರುವಿಗೆ ನಮಸ್ಕರಿಸಿ ಆ ಗುರುವಿಗೆ ಅಧೀನವಾಗಿ ಯಾವಾಗಲೂ ಇದ್ದುಕೊಂಡು ವೇದಾಂತವನ್ನು ಚೆನ್ನಾಗಿ ಅಭ್ಯಾಸಮಾಡುತ್ತಿರಬೇಕು.

೬೫. ಈ ಪ್ರಕಾರದಿಂದ ಗುರುವಿನ ಉಪದೇಶವನ್ನು ಹೊಂದಿದವನು ಯಾವ ವಿಕಾರವೂ ಇಲ್ಲದೆ ಇರುವ, ಪರಿಶುದ್ಧವಾದ, ಪರಮಾತ್ಮನೂ, ಬ್ರಹ್ಮರೂಪದಿಂದ ಸರ್ವಸಾಕ್ಷಿಯೂ ಆಗಿರುವ, ಪರಿಪೂರ್ಣನಾದ ನನ್ನನ್ನೇ ತನ್ನ ಮನಸ್ಸಿನಲ್ಲಿ ಯಾವಾಗಲೂ ಧ್ಯಾನಮಾಡುತ್ತಿರಬೇಕು.

ಶಮಾದಿಧರ್ಮನಿರತೋ ವೇದಾನ್ತಜ್ಞಾನಸಾರಗಃ ।
ಅತ್ರಾಧಿಕಾರೀ ಸ ಪ್ರೋಕ್ತೋ ಯತಿರ್ವಿಗತಮತ್ಸರಃ ॥ ೬೬ ॥

ಹೃತ್ಪುಂಡರೀಕಂ ವಿರಜಂ ವಿಶೋಕಂ ವಿಶದಂ ಪರಂ ।
ಅಷ್ಟಪತ್ರಂ ಕೇಸರಾಢ್ಯಂ ಕರ್ಣಿಕೋಪರಿ ಶೋಭಿತಂ ॥ ೬೭ ॥

ಆಧಾರಶಕ್ತಿಮಾರಭ್ಯ ತ್ರಿತತ್ತ್ವಾನ್ತಮಯಂ ಪದಂ ।
ವಿಚಿಂತ್ಯ ಮಧ್ಯತಸ್ತಸ್ಯ ದಹರಂ ವ್ಯೋಮ ಭಾವಯೇತ್ ॥ ೬೮ ॥

ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಂ ತ್ವಯಾ ಸಹ ।
ಚಿಂತಯೇನ್ಮಧ್ಯತಸ್ತಸ್ಯ ನಿತ್ಯಮುದ್ಯುಕ್ತಮಾನಸಃ ॥ ೬೯ ॥

---

೬೬. ಶಮದಮಾದಿ ಗುಣಗಳಲ್ಲಿ ನಿರತನಾಗಿ ಯಾವಾಗಲೂ ಕಾಲವನ್ನು ಕಳೆಯಬೇಕು. ವೇದಾಂತಜ್ಞಾನಪಾರಂಗತನಾಗಲು ಯತ್ನಿಸಬೇಕು. ಈರೀತಿ (ಮಾತ್ಸರ್ಯ) ಕಾಮಕ್ರೋಧಾದಿಗಳಿಗೆ ಈಡಾಗದೆ ಇರುವವನೇ ಯತಿಯು. ಇಂತವನೇ ಸನ್ಯಾಸವನ್ನು ಸರಿಯಾಗಿ ಆಚರಿಸಬಲ್ಲವನೆಂದು ಹೇಳಿರುವರು.

೬೭-೬೮. ಹೃದಯದ ಕಮಲವೆಂಬುದು ರಜೋಗುಣ ಸಂಬಂಧವಿಲ್ಲದೆ ಬಹಳ ನಿರ್ಮಲವಾಗಿರುವುದು. ಅದಕ್ಕೆ ಎಂಟು ದಳಗಳಿರುವವು ಮತ್ತು ಕೇಸರ, ಕರ್ಣಿಕಾ ಇವುಗಳಿಂದ ಕೂಡಿರುವುದು. ಈ ಪ್ರಕಾರದಿಂದ ಇರುವ ಹೃದಯಕಮಲದ ಮಧ್ಯದಲ್ಲಿ ಆಧಾರಶಕ್ತಿಯನ್ನು ಆರಂಭಮಾಡಿಕೊಂಡು ಮೂರು ತತ್ತ್ವಗಳ ಕೊನೆಯನ್ನು ಹೊಂದಿರುವ ಉತ್ತಮಸ್ಥಾನವಾದ ದಹರಾಕಾಶವನ್ನು ಭಾವನೆ ಮಾಡಬೇಕು.

೬೯. ಅವನು ಯಾವಾಗಲೂ ಪ್ರಯತ್ನಪೂರ್ವಕವಾಗಿ ಮನಸ್ಸಿನಲ್ಲಿ ಏಕಾಕ್ಷರಾತ್ಮಕವಾದ ಓಂಕಾರರೂಪದಿಂದ ನಿನ್ನೊಡನೆ ಇರುವ ಬ್ರಹ್ಮರೂಪನಾದ ನನ್ನನ್ನು ದಹರಾಕಾಶಮಧ್ಯದಲ್ಲಿ ಧ್ಯಾನಮಾಡುತ್ತಾ ಓಂಕಾರಮಂತ್ರವನ್ನು ಉಚ್ಚರಿಸುತ್ತಿರಬೇಕು.

**ಏವಂವಿಧೋಪಾಸಕಸ್ಯ ಮಲ್ಲೋಕಗತಿರೇವ ಚ ।**
**ಮತ್ತೋ ವಿಜ್ಞಾನಮಾಸಾದ್ಯ ಮತ್ಸಾಯುಜ್ಯಫಲಂ ಪ್ರಿಯೇ ॥ ೨೦ ॥**

**॥ ಇತಿ ಶ್ರೀ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ ॥**
**॥ ಸನ್ಯಾಸಪದ್ಧತಿವರ್ಣನಂ ನಾಮ ತೃತೀಯೋಽಧ್ಯಾಯಃ ॥**



---

೨೦. ಎಲೈ ಪ್ರೀತಿಪಾತ್ರಳಾದ ಪಾರ್ವತಿಯೇ ಕೇಳು, ಈ ಪ್ರಕಾರದಿಂದ ಉಪಾಸನೆಯನ್ನು ಮಾಡುವ ಉಪಾಸಕನಿಗೆ ನನ್ನ ಲೋಕದಲ್ಲಿ ವಾಸವೂ, ನನ್ನಿಂದ ಜ್ಞಾನಪ್ರಾಪ್ತಿಯೂ ಉಂಟಾಗಿ, ನನ್ನಲ್ಲಿ ಸಾಯುಜ್ಯರೂಪವಾದ ಫಲವು ಲಭಿಸುವುದು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಸನ್ಯಾಸಪದ್ಧತಿ ವರ್ಣನವೆಂಬ ಮೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವಮಹಾಪುರಾಣೇ

## ಕೈಲಾಸಸಂಹಿತಾಯಾಂ

## ಚತುರ್ಥೋಽಧ್ಯಾಯಃ



|| ಈಶ್ವರ ಉವಾಚ ||

**ಅತಃ ಪರಂ ಪ್ರವಕ್ಷ್ಯಾಮಿ ಸಂನ್ಯಾಸಾಹ್ನಿಕಕರ್ಮ ಚ ।**
**ತವ ಸ್ನೇಹಾನ್ಮಹಾದೇವೀ ಸಂಪ್ರದಾಯಾನುರೋಧತಃ || ೧ ||**

**ಬ್ರಾಹ್ಮೇ ಮುಹೂರ್ತ ಉತ್ಥಾಯ ಶಿರಸಿ ಶ್ವೇತಪಂಕಜೇ ।**
**ಸಹಸ್ರಾರೇ ಸಮಾಸೀನಂ ಗುರುಂ ಸಂಚಿಂತಯೇದ್ಯತಿಃ || ೨ ||**

---

## ನಾಲ್ಕನೆಯಅಧ್ಯಾಯವು

೧. ಈಶ್ವರನು ಹೇಳಿದನು :—ಎಲೈ ಮಹಾದೇವಿಯೇ ಕೇಳು. ನಾನು ನಿನ್ನಲ್ಲಿರುವ ಸ್ನೇಹಭಾವದಿಂದ ಸನ್ಯಾಸಿಯಾದವರು ಮಾಡಬೇಕಾಗಿರುವ ಆಹ್ನಿಕ ಕರ್ಮಗಳನ್ನು ಆಯಾಯ ಸಂಪ್ರದಾಯಕ್ಕನುಸಾರವಾಗಿ ಇನ್ನು ಮುಂದೆ ವಿವರಿಸಿ ಹೇಳುವೆನು.

೨. ಯತಿಯಾದವನು ಬ್ರಾಹ್ಮ ಮುಹೂರ್ತದಲ್ಲಿ ಎದ್ದು ಕೂತುಕೊಂಡು ತನ್ನ ಶಿರಸ್ಸಿನಲ್ಲಿರುವ ಸಹಸ್ರದಳಗಳಿಂದ ಕೂಡಿರುವ ಬಿಳಿಯ ಕಮಲದಲ್ಲಿ ತನ್ನ ಗುರುವು ಕುಳಿತುಕೊಂಡಿರುವಂತೆ ಧ್ಯಾನಮಾಡಬೇಕು.

ಶುದ್ಧಸ್ಫಟಿಕಸಂಕಾಶಂ ದ್ವಿನೇತ್ರಂ ವರದಾಭಯೇ ।
ದಧಾನಂ ಶಿವಸದ್ಭಾವಮೇವಾತ್ಮನಿ ಮನೋಹರಂ || ೩ ||

ಭಾವೋಪನೀತೈಃ ಸಂಪೂಜ್ಯ ಗಂಧಾದಿಭಿರನುಕ್ರಮಾತ್ ।
ಬದ್ಧಾಂಜಲಿಪುಟೋ ಭೂತ್ವಾ ನಮಸ್ಕುರ್ಯಾದ್ಗುರುಂತತಃ || ೪ ||

ಪ್ರಾತಃಪ್ರಭೃತಿ ಸಾಯಾಂತ್ಯೇ ಸಾಯಾದಿಪ್ರಾತರಂತತಃ ।
ಯತ್ಕರೋಮಿ ಮಹಾದೇವ ತದಸ್ತು ತವ ಪೂಜನಂ || ೫ ||

ಪ್ರತಿವಿಜ್ಞಾಪ್ಯ ಗುರುವೇ ಲಬ್ಧಾನುಜ್ಞಸ್ತತೋ ಗುರೋಃ ।
ನಿರುದ್ಧಪ್ರಾಣ ಆಸೀನೋ ವಿಜಿತಾತ್ಮಾ ಜಿತೇಂದ್ರಿಯಃ || ೬ ||

ಮೂಲಾದಿಬ್ರಹ್ಮರಂಧ್ರಾಂತಂ ಷಟ್ಚಕ್ರಂ ಪರಿಚಿಂತಯೇತ್ ।
ವಿದ್ಯುತ್ಕೋಟಿಸಮಪ್ರಖ್ಯಂ ಸರ್ವತೇಜೋಮಯಂ ಪರಂ || ೭ ||

---

೩-೪. ಆ ಗುರುವು ಶುದ್ಧವಾದ ಸ್ಫಟಿಕದಂತೆ ಶರೀರಕಾಂತಿಯುಳ್ಳವನು. ಅವನಿಗೆ ಎರಡು ಕಣ್ಣುಗಳಿರುವವು. ತನ್ನ ಎರಡು ಕೈಗಳಲ್ಲಿ ವರದ, ಅಭಯ ಎಂಬ ಮುದ್ರೆಗಳನ್ನು ಧರಿಸಿರುವನು. ಶಿವಧ್ಯಾನದಲ್ಲಿ ಆಸಕ್ತನಾಗಿರುವನು. ಈರೀತಿ ತನ್ನ ಗುರುವು ಇರುವನೆಂದು ಅವನ ಮನೋಹರವಾದ ಮೂರ್ತಿಯನ್ನು ಧ್ಯಾನಿಸಿ ತನ್ನ ಭಾವನೆಯಿಂದ ಸಿದ್ಧವಾದ ಎಂದರೆ ಮನಸ್ಸಿನಲ್ಲಿಯೇ ಭಾವಿಸಿದ ಗಂಧವೇ ಮೊದಲಾದ ಪೂಜಾದ್ರವ್ಯಗಳಿಂದ ಕ್ರಮವಾಗಿ ಪೂಜಿಸಿ ಅಂಜಲಿಬದ್ಧನಾಗಿ ನಮಸ್ಕಾರ ವನ್ನು ಮಾಡಬೇಕು.

೫ ಎಲೈ ಮಹಾದೇವನೇ, ಪ್ರಾತಃಕಾಲ ಮೊದಲುಗೊಂಡು ಸಾಯಂಕಾಲದ ವರೆಗೂ, ಸಾಯಂಕಾಲ ಮೊದಲುಗೊಂಡು ಪ್ರಾತಃಕಾಲದವರೆಗೂ ನಾನು ಮಾಡು ವುದೆಲ್ಲವೂ ನಿನ್ನ ಸೇವೆಯಾಗಿರಲಿ.

೬-೯. ಹೀಗೆಂದು ಯತಿಯು ತನ್ನ ಗುರುವಿಗೆ ಪ್ರಾರ್ಥನೆಮಾಡಿ ಗುರುವಿನ ಆಜ್ಞೆಯನ್ನು ಪಡೆದನಂತರ ಇಂದ್ರಿಯಗಳನ್ನೂ, ಮನಸ್ಸನ್ನೂ ತನ್ನ ಹತೋಟಿಯಲ್ಲಿ ರಿಸಿಕೊಂಡು, ಮೂಲಾಧಾರವೊದಲುಗೊಂಡು ಬ್ರಹ್ಮರಂಧ್ರದವರೆಗೂ ಇರುವ ಆರು ಚಕ್ರಗಳನ್ನು ಧ್ಯಾನಮಾಡಬೇಕು. ಆ ಚಕ್ರಗಳಲ್ಲಿ ಈರೀತಿ ಧ್ಯಾನಮಾಡಬೇಕು. ಅನೇಕಕೋಟಿವಿದ್ಯುತ್ತಿಗೆ (ಮಿಂಚಿಗೆ) ಸಮನಾದ ಕಾಂತಿಯಿಂದ ಬೆಳಗುತ್ತಾ ಸರ್ವತ್ರ

ತನ್ಮಧ್ಯೇ ಚಿಂತಯೇನ್ಮಾಂ ಚ ಸಚ್ಚಿದಾನಂದವಿಗ್ರಹಂ ।
ನಿರ್ಗುಣಂ ಪರಮಂ ಬ್ರಹ್ಮ ಸದಾಶಿವಮನಾಮಯಂ ॥ ೮ ॥

ಸೋಽಹಮಸ್ಮೀತಿ ಮತಿಮಾನ್ಮದೈಕ್ಯಮನುಭೂಯ ಚ ।
ಬಹಿರ್ನಿರ್ಗತ್ಯ ಚ ತತೋ ದೂರಂ ಗಚ್ಛೇದ್ಯಥಾಸುಖಂ ॥ ೯ ॥

ವಸ್ತ್ರೇಣಾಚ್ಛಾದ್ಯ ಮತಿಮಾನ್ ಶಿರೋ ನಾಸಿಕಯಾ ಸಹ ।
ವಿಶೋಧ್ಯ ದೇಹಂ ವಿಧಿವತ್ತೃಣಮಾಧಾಯ ಭೂತಲೇ ॥ ೧೦ ॥

ಗೃಹೀತಶಿಶ್ನ ಉತ್ಥಾಯ ತತೋ ಗಚ್ಛೇಜ್ಜಲಾಶಯಂ ।
ಉದ್ಧೃತ್ಯ ವಾರ್ಯಥಾನ್ಯಾಯಂ ಶೌಚಂ ಕುರ್ಯಾದತಂದ್ರಿತಃ ॥ ೧೧ ॥

ಹಸ್ತೌ ಪಾದೌ ಚ ಸಂಶೋಧ್ಯ ದ್ವಿರಾಚಮ್ಯೋಮಿತಿ ಸ್ಮರನ್ ।
ಉತ್ತರಾಭಿಮುಖೋ ಮೌನೀ ದಂತಧಾವನಮಾಚರೇತ್ ॥ ೧೨ ॥

---

ವ್ಯಾಪಿಸಿರುವ ತೇಜೋರೂಪವಾದ ಪರಬ್ರಹ್ಮವು ಇರುವುದು. ಅದರ ಮಧ್ಯದಲ್ಲಿ ಸಚ್ಚಿದಾನಂದರೂಪನೂ, ನಿರ್ಗುಣನೂ, ಪರಬ್ರಹ್ಮಸ್ವರೂಪನೂ ಆದ ಸದಾಶಿವನು ವಿರಾಜಿಸುತ್ತಿರುವನು. ಇಂತಹ ಸದಾಶಿವನಲ್ಲಿ ತಾನು ಐಕ್ಯವನ್ನು ಭಾವಿಸಿ ಸೋಽಹಂಭಾವದಿಂದ ಧ್ಯಾನಮಾಡಬೇಕು. ಈರೀತಿ ಕೆಲವುಕಾಲ ಧ್ಯಾನದಲ್ಲಿ ಮಗ್ನನಾಗಿ ಪರಮಾನಂದಸುಖವನ್ನನುಭವಿಸಿ ಬಳಿಕ ಬಹಿರ್ಮುಖನಾಗಿ ಎಚ್ಚರಗೊಂಡು ತನ್ನ ಇಷ್ಟಬಂದೆಡೆಗೆ ದೂರವಾಗಿ ಬಹಿರ್ದೇಶಾದಿಗಳಿಗಾಗಿ ಹೋಗಬೇಕು.

೧೦–೧೧. ಬುದ್ಧಿವಂತನಾದ ಆ ಯತಿಯು ಆ ಪ್ರದೇಶದಲ್ಲಿ ತನ್ನ ಮೂಗು ಮುಚ್ಚಿಕೊಳ್ಳುವವರೆಗೂ, ತನ್ನ ತಲೆಯನ್ನು ಬಟ್ಟೆಯಿಂದ ಮುಚ್ಚಿಕೊಂಡು ಭೂಮಿಯಮೇಲೆ ಶಾಸ್ತ್ರದಲ್ಲಿ ಹೇಳಿದರೀತಿಯಿಂದ ತೃಣಾದಿಗಳನ್ನು ಹಾಸಿ ಅದರಮೇಲೆ ತನ್ನ ಮಲಮೂತ್ರಾದಿಗಳನ್ನು ವಿಸರ್ಜನೆ ಮಾಡಿದನಂತರ, ತನ್ನ ಗುಹ್ಯೇಂದ್ರಿಯವನ್ನು ಕೈಯಿಂದ ಹಿಡಿದುಕೊಂಡು ಎದ್ದು ನೀರು ಇರುವ ಪ್ರದೇಶಕ್ಕೆ ಹೋಗಬೇಕು. ಅಲ್ಲಿ ನೀರನ್ನು ತೆಗೆದುಕೊಂಡು ಚನ್ನಾಗಿ ಶೌಚವನ್ನು ಮಾಡಿಕೊಳ್ಳಬೇಕು.

೧೨. ಕೈಗಳನ್ನೂ, ಕಾಲುಗಳನ್ನೂ ತೊಳೆದುಕೊಂಡು ಎರಡುಬಾರಿ ಆಚಮನವನ್ನು ಮಾಡಿ ಓಂಕಾರವನ್ನು ಸ್ಮರಣೆ ಮಾಡುತ್ತಾ ಉತ್ತರ ಮುಖನಾಗಿ ನಿಂತುಕೊಂಡು ಯಾರ ಸಂಗಡಲೂ ಮಾತನಾಡದೆ ತನ್ನ ಹಲ್ಲುಗಳನ್ನು ಚೆನ್ನಾಗಿ ಉಜ್ಜಿಕೊಳ್ಳಬೇಕು.

**ತೃಣಪರ್ಣೈಃ ಸದಾ ಕುರ್ಯಾದಮಾಮೇಕಾದಶೀಂ ವಿನಾ ।**
**ಅಪಾಂ ದ್ವಾದಶಗಂಡೂಷೈರ್ಮುಖಂ ಸಂಶೋಧಯೇತ್ತತಃ ॥ ೧೩ ॥**

**ದ್ವಿರಾಚಮ್ಯ ಮೃದಾ ತೋಯೈಃ ಕಟಿಶೌಚಂ ವಿಧಾಯ ಚ ।**
**ಅರುಣೋದಯಕಾಲೇ ತು ಸ್ನಾನಂ ಕುರ್ಯಾನ್ಮೃದಾ ಸಹ ॥ ೧೪ ॥**

**ಗುರುಂ ಸಂಸ್ಮೃತ್ಯ ಮಾಂ ಚೈವ ಸ್ನಾನಸಂಧ್ಯಾದ್ಯಮಾಚರೇತ್ ।**
**ವಿಸ್ತಾರಭಯತೋ ನೋಕ್ತಮತ್ರ ದ್ರಷ್ಟವ್ಯಮನ್ಯತಃ ॥ ೧೫ ॥**

**ಆಬಧ್ಯ ಶಂಖಮುದ್ರಾಂ ಚ ಪ್ರಣವೇನಾಭಿಷೇಚಯೇತ್ ।**
**ಶಿರಸಿ ದ್ವಾದಶಾವೃತ್ತ್ಯಾ ತದರ್ಧಂ ವಾ ತದರ್ಧಕಂ ॥ ೧೬ ॥**

**ತೀರಮಾಗತ್ಯ ಕೌಪೀನಂ ಪ್ರಕ್ಷಾಳ್ಯಾಚಮ್ಯ ಚ ದ್ವಿಧಾ ।**
**ಪ್ರೋಕ್ಷಯೇತ್ಪ್ರಣವೇನೈವ ವಸ್ತ್ರಮಂಗೋಪಮಾರ್ಜನಂ ॥ ೧೭ ॥**

---

೧೩-೧೪. ಹುಲ್ಲುಕಡ್ಡಿ, ಎಲೆಗಳು ಇವುಗಳಿಂದ ಯಾವಾಗಲೂ ದಂತಧಾವನೆಯನ್ನು ಮಾಡಬೇಕು. ಅಮಾವಾಸ್ಯೆ, ಏಕಾದಶೀ, ಈ ದಿವಸಗಳಲ್ಲಿ ದಂತಧಾವನೆಯನ್ನು ಆಚರಿಸಬೇಕಾಗಿಲ್ಲ. ಹಲ್ಲುಗಳನ್ನು ಚೆನ್ನಾಗಿ ಉಜ್ಜಿದ ನಂತರ ಹನ್ನೆರಡು ಸಾರಿ ಬಾಯಿಮುಕ್ಕಳಿಸಿ ಉಗುಳಿ ಮುಖವನ್ನು ಚೆನ್ನಾಗಿ ಉಜ್ಜಿ ತೊಳೆದುಕೊಳ್ಳಬೇಕು. ಅನಂತರ ಎರಡುಸಾರಿ ಆಚಮನವನ್ನು ಮಾಡಿ ಮಣ್ಣಿನಿಂದಲೂ, ನೀರಿನಿಂದಲೂ ಮೃತ್ತಿಕಾಶೌಚವನ್ನು ಮಾಡಿಕೊಂಡು ಅರುಣೋದಯಕಾಲದಲ್ಲಿ ಮೃತ್ತಿಕೆಯನ್ನು ಸೇರಿಸಿಕೊಂಡು ನೀರಿನಿಂದ ಸ್ನಾನವನ್ನು ಮಾಡಬೇಕು.

೧೫. ಗುರುವನ್ನೂ, ನನ್ನನ್ನೂ ಸ್ಮರಿಸುತ್ತಾ ಸ್ನಾನ ಸಂಧ್ಯಾವಂದನೆಗಳನ್ನು ಆಚರಿಸಬೇಕು. ಇಲ್ಲಿ ಇವೆಲ್ಲವನ್ನೂ ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲವಾದುದರಿಂದ ಈ ವಿಚಾರವನ್ನು ಬೇರೆ ಗ್ರಂಥಗಳಿಂದ ತಿಳಿದುಕೊಳ್ಳಬೇಕು.

೧೬-೧೭. ಶಂಖಮುದ್ರೆಯನ್ನು ಧರಿಸಿ ಸ್ನಾನವನ್ನು ಮಾಡಬೇಕು. ಪ್ರಣವಮಂತ್ರದಿಂದ ಹನ್ನೆಡುಸಾರಿಯಾಗಲಿ, ಆರುಸಾರಿಯಾಗಲಿ ಮೂರುಸಾರಿಯಾಗಲಿ ನೀರನ್ನು ತನ್ನತಲೆಯಮೇಲೆ ಹುಯ್ದುಕೊಳ್ಳಬೇಕು. ದಡಕ್ಕೆ ಬಂದು ಕೌಪೀನವನ್ನು ಚೆನ್ನಾಗಿ ಕೊಳೆ ಹೋಗುವಂತೆ ಹಿಂಡಿ ಎರಡುಸಾರಿ ಶುದ್ಧಾಚಮನವನ್ನು ಮಾಡಿದ ನಂತರ ತಾನು ಧರಿಸಬೇಕಾದ ಮತ್ತು ಶರೀರವನ್ನು ಚೆನ್ನಾಗಿ ವರಿಸಿಕೊಳ್ಳುವ ಬಟ್ಟೆಗಳನ್ನು ಪ್ರಣವಮಂತ್ರದಿಂದ ಪ್ರೋಕ್ಷಿಸಬೇಕು.

ಮುಖಂ ಪ್ರಥಮತೋ ಮೃಜ್ಯ ಶಿರ ಆರಭ್ಯ ಸರ್ವತಃ ।
ತೇನೈವ ಮಾರ್ಜಯೇದ್ದೇಹಂ ಸ್ಥಿತ್ವಾ ಚ ಗುರುಸನ್ನಿಧೌ ॥ ೧೮ ॥

ಆಬದ್ಧ್ಯಾದ್ವಾಮತಃ ಶುದ್ಧಂ ಕೌಪೀನಂ ಚ ಸಡೋರಕಂ ।
ತತಃ ಸಂಧಾರಯೇದ್ಭಸ್ಮ ತದ್ವಿಧಿಃ ಪ್ರೋಚ್ಯತೇಽದ್ರಿಜೇ ॥ ೧೯ ॥

ದ್ವಿರಾಚಮ್ಯ ಸಮಾದಾಯ ಭಸ್ಮ ಸದ್ಯಾದಿಮಂತ್ರತಃ ।
ಅಗ್ನಿರಿತ್ಯಾದಿಭಿರ್ಮಂತ್ರೈರಭಿಮಂತ್ರ್ಯ ಸ್ಪೃಶೇತ್ತನುಂ ॥ ೨೦ ॥

ಆಪೋವೇತ್ಯಭಿಮಂತ್ರ್ಯಾಥ ಜಲಂ ತೇನೈವ ಸೇಚಯೇತ್ ।
ಓಮಾಪೋ ಜ್ಯೋತಿರಿತ್ಯುಕ್ತ್ವಾ ಮಾನಸ್ತೋಕೇತಿ ಮಂತ್ರತಃ ॥ ೨೧ ॥

ಸಂಮರ್ದ್ಯ ಕವಲದ್ವಂದ್ವಂ ಕುರ್ಯಾದೇಕಂ ತು ಪಂಚಧಾ ।
ಶಿರೋವದನಹೃದ್ಗುಹ್ಯಪಾದೇಷು ಪರಮೇಶ್ವರಿ ॥ ೨೨ ॥

---

೧೮-೧೯. ಮುಖವನ್ನು ಮೊದಲು ಬಟ್ಟೆಯಿಂದ ಒರಸಿಕೊಂಡು ನಂತರ ತಲೆಯೇ ಮೊದಲಾಗಿ ಶರೀರದ ಎಲ್ಲಾ ಭಾಗಗಳನ್ನೂ ಚೆನ್ನಾಗಿ ಒರಸಿಕೊಳ್ಳಬೇಕು. ಗುರುವಿನ ಹತ್ತಿರದಲ್ಲೇ ಇರಬೇಕು. ಎಡಪಾರ್ಶ್ವದಿಂದ ಕಟಿಸೂತ್ರವನ್ನು ಕಟ್ಟಿ ಕೊಂಡು ಶುದ್ಧವಾದ ಕೌಪೀನವನ್ನು ಧರಿಸಬೇಕು. ಎಲೈ ಪಾರ್ವತಿಯೇ ಕೇಳು. ಅನಂತರದಲ್ಲಿ ಭಸ್ಮವನ್ನು ಧರಿಸಬೇಕು. ಆ ಕ್ರಮವನ್ನು ನಾನು ಈಗ ಹೇಳುವೆನು.

೨೦-೨೨. ಎರಡುಬಾರಿ ಆಚಮನವನ್ನು ಮಾಡಿ ಸದ್ಯೋಜಾತಾದಿ ಪಂಚ ಬ್ರಹ್ಮ ಮಂತ್ರಗಳಿಂದ ಭಸ್ಮವನ್ನು ತೆಗೆದುಕೊಳ್ಳಬೇಕು. ಅಗ್ನಿರಿತಿಭಸ್ಮ ಇತ್ಯಾದಿ ಮಂತ್ರಗಳಿಂದ ಭಸ್ಮವನ್ನು ಅಭಿಮಂತ್ರಿಸಿದ ತರುವಾಯ ತನ್ನ ಶರೀರವನ್ನು ಸ್ಪರ್ಶ ಮಾಡಿಕೊಳ್ಳಬೇಕು. ಅನಂತರ ಆಪೋವಾ ಇವೇ ಮೊದಲಾದ ಮಂತ್ರಗಳಿಂದ ನೀರನ್ನು ತೆಗೆದುಕೊಂಡು ಭಸ್ಮವನ್ನು ಆ ನೀರಿನಿಂದ ನೆನಸಬೇಕು. ಓಮಾಪೋ ಜ್ಯೋತಿಃ ಎಂಬ ಮಂತ್ರವನ್ನು ಹೇಳಿ ಮಾನಸ್ತೋಕೇ ಎಂಬ ಮಂತ್ರದಿಂದ ಆ ಭಸ್ಮ ವನ್ನು ಕಲಸಿ ಎರಡು ಉಂಡೆಯನ್ನು ಮಾಡಬೇಕು. ಆಮೇಲೆ ಆ ಎರಡು ಉಂಡೆ ಗಳಲ್ಲಿ ಒಂದನ್ನು ಐದುಭಾಗಮಾಡಬೇಕು. ಈ ಐದು ಉಂಡೆಗಳಲ್ಲಿ ಕ್ರಮವಾಗಿ ತಲೆ, ಮುಖ, ಹೃದಯ, ಗುಹ್ಯಪ್ರದೇಶ, ಪಾದಗಳು, ಈ ಪ್ರದೇಶಗಳಿಗೆ ಈಶಾನ ಮಂತ್ರವೇ ಮೊದಲಾಗಿ ಸದ್ಯೋಜಾತಮಂತ್ರವೇ ಕೊನೆಯಾಗಿರುವ ಪಂಚಬ್ರಹ್ಮ

ಈಶಾನಾದಿ ಸಮಾರಭ್ಯ ಸದ್ಯಾಂತಂ ಪಂಚಭಿಃ ಕ್ರಮಾತ್ ।
ಉದ್ಧೂಲ್ಯ ಕೇವಲಂ ಪಶ್ಚಾತ್ಪ್ರಣವೇನಾಭಿಷೇಚಯೇತ್ ॥ ೨೩ ॥

ಸರ್ವಾಂಗಂ ಚ ತತೋ ಹಸ್ತೌ ಪ್ರಕ್ಷಾಲ್ಯಾನ್ಯತ್ಸಮಾಹರೇತ್ ।
ಸಮುಚ್ಯ ಪೂರ್ವವತ್ತತ್ತು ತ್ರಿಪುಂಡ್ರಾಂಸ್ತೇನ ಧಾರಯೇತ್ ॥ ೨೪ ॥

ತ್ರಿಯಾಯುಷೈಸ್ತ್ರ್ಯಮ್ಬಕೈಶ್ಚ ಪ್ರಣವೇನ ಶಿವೇನ ಚ ।
ಶಿರಸ್ಯಥ ಲಲಾಟೇ ಚ ವಕ್ಷಸಿ ಸ್ಕನ್ಧಏವ ಚ ॥ ೨೫ ॥

ನಾಭೌ ಬಾಹ್ವೋಃ ಸಂಧಿಷು ಚ ಪೃಷ್ಠೇ ಚೈವ ಯಥಾಕ್ರಮಂ ।
ಪ್ರಕ್ಷಾಲ್ಯ ಹಸ್ತೌ ಚ ತತೋ ದ್ವಿರಾಚಮ್ಯ ಯಥಾವಿಧಿ ॥ ೨೬ ॥

ಪಂಚೀಕರಣಮುಚ್ಚಾರ್ಯ ಭಾವಯೇತ್ಸ್ವಗುರುಂ ಬುಧಃ ।
ವಕ್ಷ್ಯಮಾಣಪ್ರಕಾರೇಣ ಪ್ರಾಣಾಯಾಮಾನ್ಷಡಾಚರೇತ್ ॥ ೨೭ ॥

---

ಮಂತ್ರಗಳಿಂದ ಕ್ರಮವಾಗಿ ಉದ್ಧೂಳನೆಯನ್ನು ಮಾಡಿಕೊಳ್ಳಬೇಕು. ಅನಂತರ ಉಳಿದಿರುವ ಇನ್ನೊಂದು ಭಸ್ಮದ ಉಂಡೆಯನ್ನು ತೆಗೆದುಕೊಂಡು ಅದಕ್ಕೆ ಪ್ರಣವ ಮಂತ್ರದಿಂದ ನೀರನ್ನು ಹುಯ್ಯಬೇಕು.

೨೪. ಆ ಭಸ್ಮದಿಂದ ತನ್ನ ಶರೀರವೆಲ್ಲವನ್ನೂ ಲೇಪಮಾಡಿಕೊಂಡು ಕೈಯ್ಯನ್ನು ತೊಳೆದುಕೊಳ್ಳಬೇಕು. ಅನಂತರ ಬೇರೆ ಉಂಡೆಯನ್ನು ತೆಗೆದುಕೊಂಡು ಹಿಂದಿನಂತೆಯೇ ಅದನ್ನು ಸಂಸ್ಕಾರಮಾಡಿ ಅದರಿಂದ ತ್ರಿಪುಂಡ್ರಧಾರಣೆಯನ್ನು ಮಾಡಬೇಕು.

೨೫-೨೬. ತ್ರಿಯಾಯುಷಮಂತ್ರದಿಂದಲೂ, ತ್ರ್ಯಂಬಕಮಂತ್ರಗಳಿಂದಲೂ, ಪ್ರಣವಮಂತ್ರದಿಂದಲೂ, ಶಿವನ ಸಂಬಂಧವಾದ ಮಂತ್ರಗಳಿಂದಲೂ, ತಲೆಯಮೇಲೆ, ಹಣೆಯಲ್ಲಿ, ಎದೆಯಲ್ಲಿ ಹೆಗಲುಗಳಲ್ಲಿ, ನಾಭಿಯಲ್ಲಿ ಎರಡುತೋಳುಗಳಲ್ಲಿ, ಸಂಧಿಪ್ರದೇಶಗಳಲ್ಲಿ, ಪೃಷ್ಠಪ್ರದೇಶಗಳಲ್ಲಿಯೂ ಕೂಡ ಕ್ರಮವಾಗಿ ತ್ರಿಪುಂಡ್ರಧಾರಣೆಯನ್ನು ಮಾಡಿ ಅನಂತರ ಕೈಯ್ಯನ್ನು ತೊಳೆದುಕೊಂಡು ಶಾಸ್ತ್ರಕ್ಕನುಸಾರವಾಗಿ ಎರಡುಸಾರಿ ಆಚಮನವನ್ನು ಮಾಡಬೇಕು.

೨೭. ಅನಂತರ ಪಂಚೀಕರಣಮಂತ್ರವನ್ನು ಉಚ್ಚರಿಸಿ ತನ್ನ ಗುರುವನ್ನು ಧ್ಯಾನಮಾಡಬೇಕು. ಮುಂದೆ ಹೇಳುವ ಪ್ರಕಾರದಿಂದ ಆರು ಪ್ರಣಾಯಾಮಗಳನ್ನು ಮಾಡಬೇಕು.

ದಕ್ಷಹಸ್ತೇನ ಸಂಗೃಹ್ಯ ಜಲಂ ವಾಮೇನ ಪಾಣಿನಾ ।
ಸಮಾಚ್ಛಾದ್ಯ ದ್ವಿಷಡ್ವಾರಂ ಪ್ರಣವೇನಾಭಿಮಂತ್ರಯೇತ್ ॥ ೨೮ ॥

ಏವಂ ತ್ರಿವಾರಂ ಸಂಪ್ರೋಕ್ಷ್ಯ ಶಿರಸಿ ತ್ರಿಃ ಪಿಬೇತ್ತತಃ ।
ಸಮಾಹಿತೇನ ಮನಸಾ ಧ್ಯಾಯನ್ನೋಂಕಾರಮೀಶ್ವರಂ ॥ ೨೯ ॥

ಸೌರಮಂಡಲಮಧ್ಯಸ್ಥಂ ಸರ್ವತೇಜೋಮಯಂ ಪರಂ ।
ಅಷ್ಟಬಾಹುಂ ಚತುರ್ವಕ್ತ್ರಮರ್ಧನಾರೀಕಮದ್ಭುತಮ್ ॥ ೩೦ ॥

ಸರ್ವಾಶ್ಚರ್ಯಗುಣೋಪೇತಂ ಸರ್ವಾಲಂಕಾರಶೋಭಿತಂ ।
ಏವಂ ಧ್ಯಾತ್ವಾಥ ವಿಧಿವದ್ದದ್ಯಾದರ್ಘ್ಯತ್ರಯಂ ತತಃ ॥ ೩೧ ॥

ಅಷ್ಟೋತ್ತರಶತಂ ಜಪ್ತ್ವಾ ದ್ವಿಷಡ್ವಾರಂ ತು ತರ್ಪಯೇತ್ ।
ಪುನರಾಚಮ್ಯ ವಿಧಿವತ್ಪ್ರಾಣಾಯಾಮತ್ರಯಂ ಚರೇತ್ ॥ ೩೨ ॥

---

೨೮.೨೯. ಬಲಗೈಯಿಂದ ನೀರನ್ನು ತೆಗೆದುಕೊಂಡು ಎಡಗೈಯಿಂದ ಮುಚ್ಚಿ ಹಿಡಿದುಕೊಂಡು ಹನ್ನೆರಡುಸಾರಿ ಪ್ರಣವಮಂತ್ರವನ್ನು ಹೇಳಿ ಅಭಿಮಂತ್ರಿಸಬೇಕು. ಹೀಗೆಯೇ ಮೂರಾವರ್ತಿಮಾಡಿ ಆ ನೀರಿನಿಂದ ತನ್ನ ತಲೆಗೆ ಪ್ರೋಕ್ಷಿಸಿಕ್ಕೊಂಡು ಅನಂತರ ಮೂರಾವರ್ತಿ ಸಮಾಧಾನವಾದ ಮನಸ್ಸಿನಿಂದ ಓಂಕಾರರೂಪದಿಂದಿರುವ ಈಶ್ವರನನ್ನು ಧ್ಯಾನಮಾಡುತ್ತಾ ಆ ನೀರನ್ನು ಪಾನಮಾಡಬೇಕು.

೩೦-೩೧. ನಂತರ ಸೂರ್ಯಮಂಡಲದ ಮಧ್ಯದಲ್ಲಿರುವ ತೇಜೋರೂಪದಿಂದಿರುವ ಪರಶಿವನನ್ನು ಧ್ಯಾನಮಾಡಬೇಕು. ಆ ಶಿವನು ಸರ್ವಶ್ರೇಷ್ಠನು. ಅವನಿಗೆ ಎಂಟುಕೈಗಳಿರುವವು. ನಾಲ್ಕು ಮುಖಗಳಿರುವವು. ಅತ್ಯಾಶ್ಚರ್ಯಗುಣಾನ್ವಿತನಾಗಿ ಅರ್ಧನಾರೀರೂಪದಿಂದ ಶೋಭಿಸುತ್ತಿರುವ ಶಿವನ ದಿವ್ಯರೂಪವನ್ನು ಧ್ಯಾನಮಾಡುತ್ತಾ ಮೂರು ಅರ್ಘ್ಯಗಳನ್ನು ಕೊಡಬೇಕು,

೩೨. ಒಂದುನೂರೆಂಟು ಸಂಖ್ಯೆಯುಳ್ಳ ಜಪವನ್ನು ಮಾಡಿ ಹನ್ನೆರಡು ಸಾರಿ ತರ್ಪಣವನ್ನೂ ಕೊಡಬೇಕು. ಪುನಃ ಆಚಮನವನ್ನು ಮಾಡಿ ಮೂರು ಪ್ರಾಣಾಯಾಮಗಳನ್ನು ಮಾಡಬೇಕು.

ಪೂಜಾಸದನಮಾಗಚ್ಛೇನ್ಮನಸಾ ಸಂಸ್ಮರನ್ ಶಿವಂ ।
ದ್ವಾರಮಾಸಾದ್ಯ ಪ್ರಕ್ಷಾಳ್ಯ ಪಾದೌ ಮೌನೀ ದ್ವಿರಾಚಮೇತ್ ॥ ೩೩ ॥

ಪ್ರವಿಶೇದ್ವಿಧಿನಾ ತತ್ರ ದಕ್ಷಪಾದಪುರಸ್ಸರಂ ।
ಮಣ್ಡಪಾನ್ತಸ್ಸುಧೀಸ್ತತ್ರ ಮಣ್ಡಲಂ ರಚಯೇತ್ಕ್ರಮಾತ್ ॥ ೩೪ ॥

॥ ಇತಿ ಶ್ರೀ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ ॥
॥ ಸಂನ್ಯಾಸಾಚಾರವರ್ಣನಂ ನಾಮ ॥
॥ ಚತುರ್ಥೋऽಧ್ಯಾಯಃ ॥



---

೩೩. ಅನಂತರ ಮನಸ್ಸಿನಲ್ಲಿ ಶಿವನನ್ನು ಧ್ಯಾನಮಾಡುತ್ತಾ ದೇವರಮನೆಯ ಬಾಗಿಲಹತ್ತಿರಕ್ಕೆ ಹೋಗಿ ಅಲ್ಲಿ ತನ್ನ ಕೈಕಾಲುಗಳನ್ನು ತೊಳೆದುಕೊಂಡು ಯಾರ ಸಂಗಡಲೂ ಮಾತನಾಡದೆ ಎರಡು ಆಚಮನವನ್ನು ಮಾಡಬೇಕು.

೩೪. ಬಲಗಾಲನ್ನು ಮುಂದಿಟ್ಟುಕೊಂಡು ಒಳಗಡೆ ಪ್ರವೇಶಿಸಬೇಕು. ಒಳಗಡೆ ಹೋಗಿ ಕ್ರಮವಾಗಿ ಮಂಡಲಗಳನ್ನು ಬರೆಯಬೇಕು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸ ಸಂಹಿತೆಯಲ್ಲಿ ಸನ್ಯಾಸಾಚಾರ ವರ್ಣನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



ಶ್ರೀಃ

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೈಲಾಸಸಂಹಿತಾಯಾಂ

## ಪಂಚಮೋಽಧ್ಯಾಯಃ



॥ ಈಶ್ವರ ಉವಾಚ ॥

**ಪರೀಕ್ಷ್ಯ ವಿಧಿವದ್ಭೂಮಿಂ ಗಂಧವರ್ಣರಸಾದಿಭಿಃ ।**
**ಮನೋಽಭಿಲಷಿತೇ ತತ್ರ ವಿತಾನವಿತತಾಂಬರೇ ॥ ೧ ॥**

**ಸುಪ್ರಲಿಪ್ತೇ ಮಹೀಪೃಷ್ಠೇ ದರ್ಪಣೋದರಸನ್ನಿಭೇ ।**
**ಅರತ್ನಿಯುಗ್ಮಮಾನೇನ ಚತುರಸ್ರಂ ಪ್ರಕಲ್ಪಯೇತ್ ॥ ೨ ॥**

---

## ಐದನೆಯ ಅಧ್ಯಾಯವು

೧. ಈಶ್ವರನಿಂತೆಂದನು :—ಮೊದಲು ವಾಸನೆ, ಬಣ್ಣ, ನೀರು ಇವುಗಳಿಂದ ಶಾಸ್ತ್ರಕ್ರಮದಲ್ಲಿ ಹೇಳಿರುವಂತೆ ಭೂಮಿಯನ್ನು ಪರೀಕ್ಷಿಸಬೇಕು. ತನ್ನ ಮನಸ್ಸಿಗೆ ಹಿತವಾದ ಆ ಪ್ರದೇಶದಲ್ಲಿ ಮೇಲುಗಡೆಯಿಂದ ಯಾವ ಪದಾರ್ಥವೂ ಕೆಳಗೆ ಬೀಳದ ಹಾಗೆ ಮೇಲುಕಟ್ಟನ್ನು ಕಟ್ಟಬೇಕು.

೨-೩. ಕನ್ನಡಿಗೆ ಸಮಾನವಾಗಿರುವಂತೆ ಚೆನ್ನಾಗಿ ತೊಳೆದು ನಿರ್ಮಲವಾಗಿರುವ ಆ ಪ್ರದೇಶದಲ್ಲಿ ಎರಡು ಮೊಳದ ಅಳತೆಯಿಂದ ಚೌಕವಾದ ಮಂಡಲ

**ತಾಲಪತ್ರಂ ಸಮಾದಾಯ ತತ್ಸಮಾಯಾಮವಿಸ್ತರಂ ।**
**ತಸ್ಮಿನ್ಭಾಗಾನ್ಪ್ರಕುರ್ವೀತ ತ್ರಯೋದಶಸಮಾಂ ಕಲಾಂ ॥ ೩ ॥**

**ತತ್ಪತ್ರಂ ತತ್ರ ನಿಕ್ಷಿಪ್ಯ ಪಶ್ಚಿಮಾಭಿಮುಖಃ ಸ್ಥಿತಃ ।**
**ತತ್ಪೂರ್ವಭಾಗೇ ಸುದೃಢಂ ಸೂತ್ರಮಾದಾಯ ರಂಜಿತಂ ॥ ೪ ॥**

**ಪ್ರಾಕ್ಪ್ರತ್ಯಗ್ದಕ್ಷಿಣೋದಕ್ಷು ಚತುರ್ದಿಶಿ ನಿಪಾತಯೇತ್ ।**
**ಸೂತ್ರಾಣಿ ದೇವದೇವೇಶಿ ನವಷಷ್ಟ್ಯುತ್ತರಂ ಶತಂ ॥ ೫ ॥**

**ಕೋಷ್ಠಾನಿ ಸ್ಯುಸ್ತತಸ್ತಸ್ಯ ಮಧ್ಯಕೋಷ್ಠಂ ತು ಕರ್ಣಿಕಾ ।**
**ಕೋಷ್ಠಾಷ್ಟಕಂ ಬಹಿಸ್ತಸ್ಯ ದಲಾಷ್ಟಕಮಿಹೋಚ್ಯತೇ ॥ ೬ ॥**

**ದಳಾನಿ ಶ್ವೇತವರ್ಣಾನಿ ಸಮಗ್ರಾಣಿ ಪ್ರಕಲ್ಪಯೇತ್ ।**
**ಪೀತರೂಪಾಂ ಕರ್ಣಿಕಾಂ ಚ ಕೃತ್ವಾ ರಕ್ತಂ ಚ ವೃತ್ತಕಂ ॥ ೭ ॥**

---

ವನ್ನು ಮಾಡಬೇಕು. ತಾಳಪತ್ರವನ್ನು ಆ ಜಾಗಕ್ಕೆ ಸಮನಾದ ವಿಸ್ತಾರವುಳ್ಳಂತೆ ಅಳತೆಮಾಡಿ ಅದರಲ್ಲಿ ಸಮನಾದ ಹದಿಮೂರುಭಾಗಗಳನ್ನು ಮಾಡಬೇಕು.

೪-೬. ಆ ತಾಳಪತ್ರವನ್ನು ಆ ಪ್ರದೇಶದಲ್ಲಿರಿಸಿ ತಾನು ಪಶ್ಚಿಮಮುಖನಾಗಿ ನಿಂತುಕೊಂಡು ಆ ತಾಳಪತ್ರದ ಪೂರ್ವಭಾಗದಲ್ಲಿ ಗಟ್ಟಿಯಾಗಿರುವ ಬಣ್ಣದಿಂದ ಕೂಡಿದ ಸೂತ್ರವನ್ನು ತೆಗೆದುಕೊಂಡು ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರವೆಂಬ ನಾಲ್ಕು ದಿಕ್ಕುಗಳಲ್ಲಿಯೂ, ಕ್ರಮವಾಗಿ ಭಾಗಗಳನ್ನು ಮಾಡಬೇಕು. ಎಲೈ ದೇವ ದೇವೇಶಿಯೇ ಕೇಳು. ಈ ಪ್ರಕಾರವಾಗಿ ಭಾಗಗಳನ್ನು ಮಾಡಲು ದಾರವನ್ನು ಹಿಡಿದರೆ ಒಂದನೂರ ಅರವತ್ತು ಒಂಭತ್ತು ಮನೆಗಳು ಆಗುವವು. ಈ ಕೋಷ್ಠಗಳ ಮಧ್ಯಭಾಗದ ಮನೆಯನ್ನು ಕರ್ಣಿಕಾ ಎಂದು ಕರೆಯುವರು. ಅದರ ಸುತ್ತಲೂ ಇರುವ ಎಂಟು ಮನೆಗಳು ಎಂಟು ದಳಗಳೆಂದೆನಿಸಿಕೊಳ್ಳುವವು.

೭. ಎಲ್ಲಾ ದಳಗಳಿಗೂ ಬಿಳಿಯಬಣ್ಣವನ್ನು ಹಾಕಬೇಕು. ಕರ್ಣಿಕೆಯನ್ನು ಹಳದಿಯ ಬಣ್ಣವುಳ್ಳದ್ದನ್ನಾಗಿ ಮಾಡಬೇಕು. ಅದರ ಸುತ್ತಲೂ ಕೆಂಪು ಬಣ್ಣದ ಗೆರೆಯನ್ನು ದುಂಡಾಗಿರುವಂತೆ ಹಾಕಬೇಕು.

ವನಭಿದ್ದಲದಕ್ಷಂ ತು ಸಮಾರಭ್ಯ ಸುರೇಶ್ವರಿ ।
ರಕ್ತಕೃಷ್ಣಾಃ ಕ್ರಮೇಣೈವ ದಳಸಂಧೀನ್ವಿಚಿತ್ರಯೇತ್ ॥ ೮ ॥

ಕರ್ಣಿಕಾಯಾಂ ಲಿಖೇದ್ಯಂತ್ರಂ ಪ್ರಣವಾರ್ಥಪ್ರಕಾಶಕಂ ।
ಅಧಃ ಪೀಠಂ ಸಮಾಲಿಖ್ಯ ಶ್ರೀಕಂಠಂ ಚ ತದೂರ್ಧ್ವತಃ ॥ ೯ ॥

ತದುಪರ್ಯಮರೇಶಂ ಚ ಮಹಾಕಾಲಂ ಚ ಮಧ್ಯತಃ ।
ತನ್ಮಸ್ತಕಸ್ಥಂ ದಂಡಂ ಚ ತತ ಈಶ್ವರಮಾಲಿಖೇತ್ ॥ ೧೦ ॥

ಶ್ಯಾಮೇನ ಪೀಠಂ ಪೀತೇನ ಶ್ರೀಕಂಠಂ ಚ ವಿಚಿತ್ರಯೇತ್ ।
ಅಮರೇಶಂ ಮಹಾಕಾಲಂ ರಕ್ತಂ ಕೃಷ್ಣಂ ಚ ತೌ ಕ್ರಮಾತ್ ॥ ೧೧ ॥

ಕುರ್ಯಾತ್ಸುಧೂಮ್ರಂ ದಂಡಂ ಚ ಧವಲಂ ಚೇಶ್ವರಂ ಬುಧಃ ।
ಏವಂ ಯಂತ್ರಂ ಸಮಾಲಿಖ್ಯ ರಕ್ತಂ ಸದ್ಯೇನ ವೇಷ್ಟಯೇತ್ ॥ ೧೨ ॥

---

೮. ಎಲೈ ದೇವೇಶ್ವರಿಯೇ ಕೇಳು, ಈ ಎಂಟು ದಳಗಳನ್ನೂ ಪ್ರಾರಂಭಿಸಿಕೊಂಡು ಕ್ರಮವಾಗಿ ದಳಸಂಧಿಗಳಿಗೆ ಕೆಂಪು ಮತ್ತು ಕಪ್ಪುಬಣ್ಣಗಳನ್ನು ಹಾಕಬೇಕು.

೯–೧೦. ಕರ್ಣಿಕಾಪ್ರದೇಶದಲ್ಲಿ ಪ್ರಣವದ ಅರ್ಥವನ್ನು ಪ್ರಕಾಶಪಡಿಸುವ ಯಂತ್ರವನ್ನು ಬರೆಯಬೇಕು. ಕೆಳಭಾಗದಲ್ಲಿ ಪೀಠವನ್ನು ಬರೆದು ಅದರ ಮೇಲೆ ಶ್ರೀಕಂಠನನ್ನು ಬರೆಯಬೇಕು. ಆದರಮೇಲೆ ಅಮರೇಶನನ್ನೂ ಮಧ್ಯದಲ್ಲಿ ಮಹಾಕಾಳನನ್ನೂ ಬರೆದು ಅಮರೇಶ, ಮಹಾಕಾಲ, ಇವರಿಬ್ಬರ ಮೇಲುಭಾಗದಲ್ಲಿ ದಂಡವನ್ನೂ ಅನಂತರ ಈಶ್ವರನನ್ನೂ ಬರೆಯಬೇಕು.

೧೧. ಕಪ್ಪುಬಣ್ಣದಿಂದ ಪೀಠವನ್ನು ಬರೆದು, ಹಳದೀ ಬಣ್ಣದಿಂದ ಶ್ರೀಕಂಠನನ್ನು ಬರೆಯತಕ್ಕದ್ದು. ಅಮರೇಶ, ಮಹಾಕಾಲ ಇವರಿಬ್ಬರಿಗೂ ಕ್ರಮವಾಗಿ ಕೆಂಪು, ಕಪ್ಪುಬಣ್ಣಗಳನ್ನು ಕೊಡಬೇಕು.

೧೨. ದಂಡಕ್ಕೆ ಧೂಮ್ರವರ್ಣವನ್ನೂ ಈಶ್ವರನಿಗೆ ಬಿಳಿಯಬಣ್ಣವನ್ನೂ ಸಹ ಕೊಡತಕ್ಕದ್ದು. ಹೀಗೆಯೇ ಪತ್ರವನ್ನು ಬರೆದು ವೃತ್ತವನ್ನು ಕೆಂಪು ಬಣ್ಣದಿಂದ ಬರೆಯತಕ್ಕದ್ದು.

ತದುತ್ಥೇನೈವ ನಾದೇನ ವಿದ್ಯಾದೀಶಾನಮೀಶ್ವರಿ ।
ಶದ್ವಾಸಪಂಕ್ತೇರ್ಗೃಹ್ಣೀಯಾದಾಗ್ನೇಯಾದಿಕ್ರಮೇಣ ವೈ ॥ ೧೩ ॥

ಕೋಷ್ಠಾನಿ ಕೋಣಭಾಗೇಷು ಚತ್ವಾರ್ಯೇತಾನಿ ಸುಂದರಿ ।
ಶುಕ್ಲೇನಾಪೂರ್ಯ ವರ್ಣಾದಿ ಚತುಷ್ಕಂ ರಕ್ತಧಾತುಭಿಃ ॥ ೧೪ ॥

ಆಪೂರ್ಯ ತಾನಿ ಚತ್ವಾರಿ ದ್ವಾರಾಣಿ ಪರಿಕಲ್ಪಯೇತ್ ।
ತತಸ್ತತ್ಪಾರ್ಶ್ವಯೋರ್ದ್ವಂದ್ವಂ ಪೀತೇನೈವ ಪ್ರಪೂರಯೇತ್ ॥ ೧೫ ॥

ಆಗ್ನೇಯಕೋಷ್ಠಮಧ್ಯೇ ತು ಪೀತಾಭೇ ಚತುರಸ್ರಕೇ ।
ಅಷ್ಟಪತ್ರಂ ಲಿಖೇತ್ಪದ್ಮಂ ರಕ್ತಾಭಂ ಪೀತಕರ್ಣಿಕಂ ॥ ೧೬ ॥

ಹಕಾರಂ ವಿಲಿಖೇನ್ಮಧ್ಯೇ ಬಿಂದುಯುಕ್ತಂ ಸಮಾಹಿತಃ ।
ಪದ್ಮಸ್ಯ ನೈರ್ಋತೇ ಕೋಷ್ಠೇ ಚತುರಸ್ರಂ ತದಾ ಲಿಖೇತ್ ॥ ೧೭ ॥

---

೧೩-೧೫. ಆ ಯಂತ್ರದಿಂದ ಉಂಟಾದ ನಾದದಿಂದ ಈಶಾನನನ್ನು ತಿಳಿಯಬೇಕು. ಹೀಗೆ ಬರೆದಿರುವ ಯಂತ್ರದ ಸಾಲಿಗೆ ಅನುಸಾರವಾಗಿ ಆಗ್ನೇಯದಿಕ್ಕಿನಲ್ಲಿರುವ ನಾಲ್ಕು ಕೋಷ್ಠಗಳಿಗೂ ಬಿಳಿಯ ಬಣ್ಣವೇ ಮೊದಲಾದ ನಾಲ್ಕು ಬಣ್ಣಗಳನ್ನು ಹಾಕಿ, ಆ ನಾಲ್ಕು ಕೋಷ್ಠಗಳನ್ನೂ ನಾಲ್ಕು ದ್ವಾರಗಳನ್ನಾಗಿ ಮಾಡಬೇಕು. ಆ ಭಾಗಗಳ ಎರಡು ಪಕ್ಕಗಳಿಗೂ ಹಳದಿಯ ಬಣ್ಣವನ್ನು ಹಾಕಬೇಕು.

೧೬. ಆಗ್ನೇಯದಿಕ್ಕಿನ ಕೋಷ್ಠದ ಮಧ್ಯದಲ್ಲಿ ಹಳದಿಯ ಬಣ್ಣದಿಂದ ಕೂಡಿರುವ ಚಚ್ಚೌಕವಾದ ಕೋಷ್ಠದಲ್ಲಿ ಕೆಂಪುಬಣ್ಣದಿಂದ ಕೂಡಿ ಹಳದಿಯ ಕರ್ಣಿಕೆಯುಳ್ಳ ಎಂಟುದಳಪದ್ಮವನ್ನು ಬರೆಯಬೇಕು.

೧೭-೧೯. ಆ ಪದ್ಮದ ಮಧ್ಯದಲ್ಲಿ ಹಕಾರಕ್ಕೆ ಬಿಂದುವನ್ನು ಸೇರಿಸಿ ಹಂ ಎಂದು ಬರೆಯಬೇಕು. ಈ ಪದ್ಮದ ನೈಋತ್ಯಭಾಗದಲ್ಲಿರುವ ಚತುರಸ್ರವಾದ ಕೋಷ್ಠದಲ್ಲಿ ಕೆಂಪುಬಣ್ಣದಿಂದ ಕೂಡಿ ಹಳದಿಯ ಕರ್ಣಿಕೆಯುಳ್ಳ ಎಂಟುದಳದ ಪದ್ಮವನ್ನು ಹಿಂದಿನಂತೆ ಬರೆದು ಅದರ ಕರ್ಣಿಕಾಸ್ಥಾನದ ಮಧ್ಯದಲ್ಲಿ ಹದಿನಾಲ್ಕು ಸ್ವರಗಳಿಗೂ ಬಿಂದು ನಾದಗಳನ್ನು ಸೇರಿಸಿ ಎಂದರೆ ಅಂ, ಆಂ ಇಂ ಇತ್ಯಾದಿ ಶವರ್ಗದ ಮೂರನೆಯ ವರ್ಣಕ್ಕೆ ಆರನೆಯ ಸ್ವರವನ್ನೂ ಬಿಂದುನಾದವನ್ನೂ ಸೇರಿಸಿ ಎಂದರೆ

ಪದ್ಮಮಷ್ಟದಲಂ ರಕ್ತಂ ಪೀತಕಿಂಜಲ್ಕಕರ್ಣಿಕಂ ।
ಶವರ್ಗಸ್ಯ ತೃತೀಯಂ ತು ಷಷ್ಠಸ್ವರಸಮನ್ವಿತಂ ॥ ೧೮ ॥

ಚತುರ್ದಶಸ್ವರೋಪೇತಂ ಬಿಂದುನಾದವಿಭೂಷಿತಂ ।
ಏತದ್ಬೀಜವರಂ ಭದ್ರೇ ಪದ್ಮಮಧ್ಯೇ ಸಮಾಲಿಖೇತ್ ॥ ೧೯ ॥

ಪದ್ಮಸ್ಯೇಶಾನಕೋಷ್ಠೇ ತು ತಥಾ ಪದ್ಮಂ ಸಮಾಲಿಖೇತ್ ।
ಕವರ್ಗಸ್ಯ ತೃತೀಯಂ ತು ಪಂಚಮಸ್ವರಸಂಯುತಂ ॥ ೨೦ ॥

ವಿಲಿಖೇನ್ಮಧ್ಯತಸ್ತಸ್ಯ ಬಿಂದುಕಂಠೇ ಸ್ವಲಂಕೃತಂ ।
ತದ್ಬಾಹ್ಯಪಂಕ್ತಿತ್ರಿತಯೇ ಪೂರ್ವಾದಿಪರಿತಃ ಕ್ರಮಾತ್ ॥ ೨೧ ॥

ಕೋಷ್ಠಾನಿ ಪಂಚ ಗೃಹ್ಣೀಯಾದ್ಗಿರಿರಾಜಸುತೇ ಶಿವೇ ।
ಮಧ್ಯೇ ತು ಕರ್ಣಿಕಾಂ ಕುರ್ಯಾತ್ಪೀತಾಂ ರಕ್ತಂ ಚ ವೃತ್ತಕಂ ॥ ೨೨ ॥

ದಲಾನಿ ರಕ್ತವರ್ಣಾನಿ ಕಲ್ಪಯೇತ್ಕಲ್ಪವಿತ್ತಮಃ ।
ದಲಬಾಹ್ಯೇ ತು ಕೃಷ್ಣೇನ ರಂಧ್ರಾಣಿ ಪರಿಪೂರಯೇತ್ ॥ ೨೩ ॥

---

ಸೂಂ ಎಂದು ಬರಿಯಬೇಕು. ಎಲೈ ಮಂಗಳಕರಳಾದ ಪಾರ್ವತಿಯೇ ಕೇಳು, ಈ ಬೀಜಾಕ್ಷರವನ್ನು ಮೇಲೆ ಹೇಳಿದ ಪದ್ಮದ ಮಧ್ಯದಲ್ಲಿ ಬರೆಯಬೇಕು.

೨೦. ಪದ್ಮದ ಈಶಾನ್ಯಭಾಗದ ಕೋಷ್ಠದಲ್ಲಿ ಹಿಂದಿನಂತೆಯೇ ಪದ್ಮವನ್ನು ಬರೆದು ಅದರ ಮಧ್ಯದ ಕರ್ಣಿಕಾಸ್ಥಾನದಲ್ಲಿ ನಾದಬಿಂದುವಿನೊಡನೆ ಇರುವ ಐದನೆಯ ಸ್ವರವನ್ನು ಸೇರಿಸಿ ಕವರ್ಗದ ಮೂರನೆಯ ವರ್ಣವನ್ನು ಎಂದರೆ ಗುಂ ಎಂದು ಬರೆಯತಕ್ಕದ್ದು.

೨೧-೨೩. ಎಲೈ ಗಿರಿಜರಾಜನ ಪುತ್ರಿಯಾದ ಮಂಗಳಕರಳಾದ ಪಾರ್ವತಿಯೇ ಕೇಳು, ಅದರ ಹೊರಗಡೆ ಯಲ್ಲಿರುವ ಮೂರು ಸಾಲಿನಲ್ಲಿಯೂ ಪೂರ್ವದಿಕ್ಕನ್ನು ಮೊದಲುಮಾಡಿಕೊಂಡು ಸುತ್ತಲೂ ಐದು ಕೋಷ್ಠಗಳನ್ನು ತೆಗೆದುಕೊಳ್ಳಬೇಕು. ಅದರ ಮಧ್ಯದಲ್ಲಿ ಹಳದಿಯ ಬಣ್ಣದಿಂದ ಕರ್ಣಿಕೆಯನ್ನು ಬರೆದು ಕೆಂಪು ಬಣ್ಣದಿಂದ ವೃತ್ತವನ್ನು ಬರೆಯಬೇಕು. ಪ್ರಣವಯಂತ್ರದ ಕಲ್ಪವನ್ನು ತಿಳಿದವನು, ದಳಗಳಿಗೆ ಕೆಂಪುಬಣ್ಣವನ್ನು ಹಾಕಬೇಕು. ದಳಗಳ ಹೊರಗಡೆಯ ಭಾಗಕ್ಕೆ ಕಪ್ಪುಬಣ್ಣವನ್ನು ತುಂಬಬೇಕು.

ಆಗ್ನೇಯಾದೀನಿ ಚತ್ವಾರಿ ಶುಕ್ಲೇನೈವ ಪ್ರಪೂರಯೇತ್ ।
ಪೂರ್ವೇ ಷಡ್ಬಿಂದುಸಹಿತಂ ಷಟ್ಕೋಣಂ ಕೃಷ್ಣಮಾಲಿಖೇತ್ ॥ ೨೪ ॥

ರಕ್ತವರ್ಣಂ ದಕ್ಷಿಣತಸ್ತ್ರಿಕೋಣಂ ಚೋತ್ತರೇ ತತಃ ।
ಶ್ವೇತಾಭಮರ್ಧಚಂದ್ರಂ ಚ ಪೀತವರ್ಣಂ ಚ ಪಶ್ಚಿಮೇ ॥ ೨೫ ॥

ಚತುರಸ್ರಂ ಕ್ರಮಾತ್ತೇಷು ಲಿಖೇದ್ಬೀಜಚತುಷ್ಟಯಂ ।
ಪೂರ್ವೇ ಬಿಂದುಂ ಸಮಾಲಿಖ್ಯ ಶುಭ್ರಂ ಕೃಷ್ಣಂ ತು ದಕ್ಷಿಣೇ ॥ ೨೬ ॥

ಉಕಾರಮುತ್ತರೇ ರಕ್ತಂ ಮಕಾರಂ ಪಶ್ಚಿಮೇ ತತಃ ।
ಅಕಾರಂ ಪೀತಮೇವಂ ತು ಕೃತ್ವಾ ವರ್ಣಚತುಷ್ಟಯಂ ॥ ೨೭ ॥

ಸರ್ವೋರ್ಧ್ವಪಂಕ್ತ್ಯಧಃ ಪಂಕ್ತೌ ಸಮಾರಭ್ಯ ಚ ಸುಂದರೀ ।
ಪೀತಂ ಶ್ವೇತಂ ಚ ರಕ್ತಂ ಚ ಕೃಷ್ಣಂ ಚೇತಿ ಚತುಷ್ಟಯಂ ॥ ೨೮ ॥

---

೨೪-೨೭. ಆಗ್ನೇಯವೇ ಮೊದಲಾದ ನಾಲ್ಕು ದಿಕ್ಕುಗಳನ್ನೂ ಬಿಳಿಯ ಬಣ್ಣದಿಂದಲೇ ತುಂಬಬೇಕು. ಪೂರ್ವದಿಕ್ಕಿನಲ್ಲಿ ಆರು ಬಿಂದುಗಳಿಂದ ಕೂಡಿದ ಕಪ್ಪು ಬಣ್ಣದ ಷಟ್ಕೋಣವನ್ನು ಬರೆಯಬೇಕು. ದಕ್ಷಿಣದಲ್ಲಿ ತ್ರಿಕೋಣವನ್ನೂ ಅದರ ಉತ್ತರಕ್ಕೆ ಬಿಳಿಯಬಣ್ಣದಿಂದ ಅರ್ಧಚಂದ್ರವನ್ನೂ, ಪಶ್ಚಿಮದಲ್ಲಿ ಹಳದಿಯಬಣ್ಣದ ಚಚ್ಚೌಕವನ್ನೂ ಕ್ರಮವಾಗಿ ಬರೆದು ಅದರಲ್ಲಿ ಕ್ರಮವಾಗಿ ನಾಲ್ಕು ಬೀಜಾಕ್ಷರಗಳನ್ನು ಬರೆಯಬೇಕು. ಪೂರ್ವದಿಕ್ಕಿನಲ್ಲಿ ಬಿಳಿಯ ಬಣ್ಣದಿಂದ ಬಿಂದುವನ್ನು ಬರೆದು ದಕ್ಷಿಣದಿಕ್ಕಿನಲ್ಲಿ ಕಪ್ಪುಬಣ್ಣದಿಂದ ಉಕಾರವನ್ನೂ, ಉತ್ತರದಿಕ್ಕಿನಲ್ಲಿ ಕೆಂಪು ಬಣ್ಣದಿಂದ ಮಕಾರವನ್ನೂ, ಅನಂತರ ಪಶ್ಚಿಮದಿಕ್ಕಿನಲ್ಲಿ ಹಳದಿಯ ಬಣ್ಣದಿಂದ ಅಕಾರವನ್ನೂ ಹೀಗೆಯೇ ನಾಲ್ಕು ಅಕ್ಷರಗಳನ್ನೂ ಬರೆಯಬೇಕು.

೨೮-೩೦. ಎಲೈ ಸುಂದರಿಯಾದ ಪಾರ್ವತಿಯೇ ಕೇಳು, ಎಲ್ಲಕ್ಕಿಂತಲೂ ಮೇಲುಗಡೆಯಲ್ಲಿರುವ ಸಾಲಿಗಿಂತಲೂ, ಕೆಳಗಿನ ಸಾಲಿನಲ್ಲಿ ಪ್ರಾರಂಭಮಾಡಿಕೊಂಡು ಹಳದಿ, ಬಿಳಿಯದು, ಕೆಂಪು, ಕಪ್ಪು, ಎಂಬ ನಾಲ್ಕು ಬಣ್ಣವನ್ನೂ, ಅದಕ್ಕಿಂತ ಕೆಳಗಿನ ಸಾಲಿನಲ್ಲಿ ಬಿಳುಪು, ಕಪ್ಪು, ಹಳದಿ, ಕೆಂಪು ಎಂಬ ನಾಲ್ಕು ಬಣ್ಣಗಳನ್ನೂ ಅದಕ್ಕಿಂತಲೂ, ಕೆಳಗಡೆ ಇರುವ ತ್ರಿಕೋಣದಲ್ಲಿ ಕೆಂಪು, ಬಿಳುಪು, ಹಳದಿ ಎಂಬ ಬಣ್ಣಗಳನ್ನೂ

ತದಧೋ ಧವಲಂ ಶ್ಯಾಮಂ ಪೀತಂ ರಕ್ತಂ ಚತುಷ್ಟಯಂ ।
ಅಧಸ್ತ್ರಿಕೋಣಕೇ ರಕ್ತಂ ಶುಕ್ಲಂ ಪೀತಂ ವರಾನನೇ ॥ ೨೯ ॥

ಏವಂ ದಕ್ಷಿಣಮಾರಭ್ಯ ಕುರ್ಯಾತ್ಸೋಮಾಂತಮೀಶ್ವರಿ ।
ತದ್ಬಾಹ್ಯಪಂಕ್ತೌ ಪೂರ್ವಾದಿಮಧ್ಯಮಾಂತಂ ವಿಚಿತ್ರಯೇತ್ ॥ ೩೦ ॥

ಪೀತಂ ರಕ್ತಂ ಚ ಕೃಷ್ಣಂ ಚ ಶ್ಯಾಮಂ ಶ್ವೇತಂ ಚ ಪೀತಕಂ ।
ಆಗ್ನೇಯ್ಯಾದಿ ಸಮಾರಭ್ಯ ರಕ್ತಂ ಶ್ಯಾಮಂ ಸಿತಂ ಪ್ರಿಯೇ ॥ ೩೧ ॥

ರಕ್ತಂ ಕೃಷ್ಣಂ ಚ ರಕ್ತಂ ಚ ಷಟ್ಕಮೇವಂ ಪ್ರಕೀರ್ತಿತಂ ।
ದಕ್ಷಿಣಾದ್ಯಂ ಮಹೇಶಾನಿ ಪೂರ್ವಾವಧಿ ಸಮೀರಿತಂ ॥ ೩೨ ॥

ನೈರ್ಋತಾದ್ಯಂ ತು ವಿಜ್ಞೇಯಮಾಗ್ನೇಯಾವಧಿ ಚೇಶ್ವರಿ ।
ವಾರುಣಂ ತು ಸಮಾರಭ್ಯ ದಕ್ಷಿಣಾವಧಿ ಚೇರಿತಂ ॥ ೩೩ ॥

ವಾಯವ್ಯಾದ್ಯಂ ಮಹಾದೇವಿ ನೈರ್ಋತಾವಧಿ ಚೇರಿತಂ ।
ಸೋಮಾದ್ಯಂ ಪರಮೇಶಾನಿ ವಾರುಣಾವಧಿ ಚೇರಿತಂ ॥ ೩೪ ॥

---

ಹೀಗೆಯೇ ದಕ್ಷಿಣದಿಕ್ಕನ್ನು ಪ್ರಾರಂಭಿಸಿ ಉತ್ತರದಿಕ್ಕಿನ ಕೊನೆಯುವರಿಗೂ, ಬರೆಯು ಬೇಕು. ಅದರ ಹೊರಗಡೆಯು ಸಾಲಿನಲ್ಲಿ ಪೂರ್ವದಿಕ್ಕನ್ನು ಮೊದಲು ಮಾಡಿ ಕ್ಕೊಂಡು ಮಧ್ಯದ ಸಾಲಿನ ಕೊನೆಯುವರಿಗೂ ಹಳದಿ ಕೆಂಪು, ಕಪ್ಪು ಇದರ ನಂತರ ಕಪ್ಪು, ಬಿಳುಪು, ಹಳದಿ ಈ ಬಣ್ಣಗಳಿಂದ ಮಧ್ಯದಸಾಲಿನ ಕೊನೆಯುವರಿಗೆ ಬಣ್ಣವನ್ನು ಹಾಕಬೇಕು.

೩೧-೩೩. ಎಲೈ ಪ್ರಿಯಳೇ ಕೇಳು, ಆಗ್ನೇಯದಿಕ್ಕನ್ನು ಪ್ರಾರಂಭಿಸಿ ಕೊಂಡು ಕೆಂಪು, ಕಪ್ಪು, ಬಿಳುಪು ಅನಂತರ ಕೆಂಪು, ಕಪ್ಪು ಅನಂತರ ಬರಿಯ ಕೆಂಪು ಬಣ್ಣ ಎಂದು ಆರು ಬಣ್ಣಗಳನ್ನು ಹಾಕಬೇಕು. ದಕ್ಷಿಣದಿಕ್ಕನ್ನು ಪ್ರಾರಂಭಿಸಿ ಪೂರ್ವದಿಕ್ಕಿಗೆ ಮುಗಿಸಬೇಕು. ಎಲೈ ಮಹೇಶ್ವರಿಯೇ ಕೇಳು. ನೈಋತ್ಯದಿಕ್ಕನ್ನು ಪ್ರಾರಂಭಿಸಿ ಆಗ್ನೇಯದಿಕ್ಕಿಗೆ ಮುಗಿಸಬೇಕು. ಪಶ್ಚಿಮದಿಕ್ಕನ್ನು ಪ್ರಾರಂಭಿಸಿ ಕ್ಕೊಂಡು ದಕ್ಷಿಣದಿಕ್ಕಿಗೆ ಕೊನೆಯಾಗುವಂತೆ ಬರೆಯತಕ್ಕದ್ದು.

೩೪-೩೫. ಎಲೈ ಮಹಾದೇವಿಯೇ ಕೇಳು, ವಾಯುವ್ಯದಿಕ್ಕಿನಲ್ಲಿ ಪ್ರಾರಂಭಿ ಸಿಕೊಂಡು ನೈರುತ್ಯದಿಕ್ಕಿಗೆ ಮುಗಿಸಬೇಕು. ಉತ್ತರದಿಕ್ಕನ್ನು ಪ್ರಾರಂಭಿಸಿ ಪಶ್ಚಿಮ

ಈಶಾನಾದ್ಯಂ ತು ವಿಜ್ಞೇಯಂ ವಾಯವ್ಯಾವಧಿ ಚಾಮ್ಬಿಕೇ ।
ಇತ್ಯುಕ್ತೋ ಮಂಡಲವಿಧಿರ್ಮಯಾ ತುಭ್ಯಂ ಚ ಪಾರ್ವತಿ ॥ ೩೫ ॥

ಏವಂ ಮಂಡಲಮಾಲಿಖ್ಯ ನಿಯತಾತ್ಮಾ ಯತಿಃ ಸ್ವತಃ ।
ಸೌರಪೂಜಾಂ ಪ್ರಕುರ್ವೀತ ಸ ಹಿತದ್ವಸ್ತುತತ್ಪರಃ ॥ ೩೬ ॥

॥ ಇತಿ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ ॥
॥ ಸಂನ್ಯಾಸಮಂಡಲವಿಧಿವರ್ಣನಂ ನಾಮ ಪಂಚಮೋಽಧ್ಯಾಯಃ ॥



---

ದಿಕ್ಕಿಗೆ ಕೊನೆಯಾಗುವಂತೆಯೂ, ಈಶಾನ್ಯದಿಕ್ಕಿನಲ್ಲಿ ಪ್ರಾರಂಭಿಸಿದಲ್ಲಿ ವಾಯವ್ಯ ದಿಕ್ಕಿಗೆ ಮುಗಿಯುವಂತೆಯೂ ಬರೆಯಬೇಕು. ಪ್ರಣವಯಂತ್ರದಲ್ಲಿನ ಮಂಡಲದ ಕ್ರಮವನ್ನೂ ಅದಕ್ಕೆ ಬಣ್ಣಗಳನ್ನು ತುಂಬುವ ಕ್ರಮವನ್ನೂ ನಾನು ನಿನಗೆ ಈ ಪ್ರಕಾರವಾಗಿ ಹೇಳಿರುವೆನು.

೩೬. ಎಲೈ ಪಾರ್ವತಿಯೇ ಕೇಳು, ಮನಸ್ಸನ್ನು ಸರಿಯಾಗಿರಿಸಿಕೊಂಡಿರುವ ಯತಿಯು ಈ ಪ್ರಕಾರದಿಂದ ಮಂಡಲವನ್ನು ಬರೆದು ತಾನು ಸೂರ್ಯಮಂಡಲಾನ್ತರ್ಗತವಾದ ತೇಜಸ್ಸನ್ನು ಧ್ಯಾನಮಾಡುವವನಾದ ಕಾರಣ ಸೂರ್ಯನ ಸಂಬಂಧವಾದ ಉಪಾಸನೆಯನ್ನು ಮಾಡಲು ಪ್ರಾರಂಭಮಾಡಬೇಕು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಸಂನ್ಯಾಸಮಂಡಲ ವಿಧಿವರ್ಣವೆಂಬ ಐದನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೈಲಾಸಸಂಹಿತಾಯಾಂ

## ಷಷ್ಠೋಽಧ್ಯಾಯಃ



॥ ಈಶ್ವರ ಉವಾಚ ॥

**ದಕ್ಷಿಣೇ ಮಂಡಲಸ್ಯಾಥ ವೈಯಾಘ್ರಂ ಚರ್ಮ ಶೋಭನಂ ।**
**ಆಸ್ತೀರ್ಯ ಶುದ್ಧತೋಯೇನ ಪ್ರೋಕ್ಷಯೇದಸ್ತ್ರಮಂತ್ರತಃ ॥ ೧ ॥**

**ಪ್ರಣವಂ ಪೂರ್ವಮುದ್ಧೃತ್ಯ ಪಶ್ಚಾದಾಧಾರಮುದ್ಧರೇತ್ ।**
**ತತ್ಪಶ್ಚಾಚ್ಛಕ್ತಿಕಮಲಂ ಚತುರ್ಥ್ಯಂತಂ ನಮೋಂತಕಂ ॥ ೨ ॥**

---

## ಆರನೆಯ ಅಧ್ಯಾಯವು

೧. ಈಶ್ವರನಿಂತೆಂದನು :—ಅನಂತರ ಮಂಡಲದ ದಕ್ಷಿಣಭಾಗದಲ್ಲಿ ಉತ್ತಮವಾದ ವ್ಯಾಘ್ರಚರ್ಮವನ್ನು ಹಾಸಿಕೊಂಡು ಪರಿಶುದ್ಧವಾದ ನೀರಿನಿಂದ ಅದನ್ನು ಅಸ್ತ್ರಮಂತ್ರದಿಂದ ಪ್ರೋಕ್ಷಿಸಬೇಕು.

೨-೩. ಪ್ರಣವವನ್ನು ಮೊದಲು ಉದ್ಧಾರಮಾಡಿಕೊಂಡು ಅನಂತರ ಆಧಾರವನ್ನೂ, ಅದರ ಅನಂತರ ಶಕ್ತಿಕಮಲವನ್ನೂ, ಚತುರ್ಥೀವಿಭಕ್ತಿಯೇ ಕೊನೆಯಾಗಿರುವಂತೆ ನಮೋ ಎಂಬುದು ಕೊನೆಗೆ ಬರುವಂತೆ ಮಂತ್ರವನ್ನು ಉಚ್ಚರಿಸಿದ

ಮನುಮೇವ ಸಮುಚ್ಚಾರ್ಯ ಸ್ಥಿತ್ವಾ ತಸ್ಮಿನ್ನುದಙ್ಮುಖಃ ।
ಪ್ರಾಣಾಯಾಮಂ ವಿಧಿವತ್ಪ್ರಣವೋಚ್ಚಾರಪೂರ್ವಕಂ ॥ ೩ ॥

ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮ ಸಂಧಾರಯೇತ್ತತಃ ।
ಶಿರಸಿ ಶ್ರೀ ಗುರುಂ ನತ್ವಾ ಮಂಡಲಂ ರಚಯೇತ್ಪುನಃ ॥ ೪ ॥

ತ್ರಿಕೋಣವೃತ್ತಂ ಬಾಹ್ಯೇ ತು ಚತುರಸ್ರಾತ್ಮಕಂ ಕ್ರಮಾತ್ ।
ಅಭ್ಯರ್ಚ್ಯೇಮಿತಿ ಸಾಧಾರಂ ಸ್ಥಾಪ್ಯ ಶಂಖಂ ಸಮರ್ಚಯೇತ್ ॥ ೫ ॥

ಆಪೂರ್ಯ ಶುದ್ಧತೋಯೇನ ಪ್ರಣವೇನ ಸುಗಂಧಿನಾ ।
ಅಭ್ಯರ್ಚ್ಯ ಗಂಧಪುಷ್ಪಾದ್ಯೈಃ ಪ್ರಣವೇನ ಚ ಸಪ್ತಧಾ ॥ ೬ ॥

ಅಭಿಮಂತ್ರ್ಯ ತತಸ್ತಸ್ಮಿನ್ಧೇನುಮುದ್ರಾಂ ಪ್ರದರ್ಶಯೇತ್ ।
ಶಂಖಮುದ್ರಾಂ ಚ ತೇನೈವ ಪ್ರೋಕ್ಷಯೇದಸ್ತ್ರಮಂತ್ರತಃ ॥ ೭ ॥

---

ನಂತರ ಎಂದರೆ ಓಂ ಆಧಾರಶಕ್ತ್ಯೆಯೇ ನಮಃ ಎಂದು ಹೇಳಿ ಆ ವ್ಯಾಘ್ರಾಸನದಲ್ಲಿ ಉತ್ತರಮುಖನಾಗಿ ಕುಳಿತುಕೊಳ್ಳಬೇಕು. ಅನಂತರ ಪ್ರಣವಪೂರ್ವಕವಾಗಿ ಎಂದರೆ ಓಂಕಾರಪೂರ್ವಕವಾಗಿ ಶಾಸ್ತ್ರಕ್ರಮದಿಂದ ಪ್ರಾಣಾಯಾಮವನ್ನು ಮಾಡ ಬೇಕು.

೪. ಅನಂತರದಲ್ಲಿ ಅಗ್ನಿರಿತಿ ಭಸ್ಮ ಎಂಬ ಇವೇ ಮೊದಲಾದ ಮಂತ್ರಗಳಿಂದ ಭಸ್ಮವನ್ನು ಧರಿಸಬೇಕು. ತಾನು ತನ್ನ ಶಿರಸ್ಸಿನಿಂದ ಶ್ರೀಗುರುವಿಗೆ ನಮಸ್ಕಾರವನ್ನು ಮಾಡಿ ಪುನಃ ಮಂಡಲವನ್ನು ಬರೆಯಬೇಕು.

೫. ಆ ಮಂಡಲದ ಮಧ್ಯದಲ್ಲಿ ತ್ರಿಕೋಣವೂ, ಅದರ ಸುತ್ತಲೂ ವೃತ್ತವೂ, ಅದರ ಹೊರಗಡೆಯಲ್ಲಿ ಕ್ರಮವಾಗಿ ಚತುರಸ್ರವೂ, ಇರಬೇಕು. ಈ ಮಂಡಲದಲ್ಲಿ ಓಂಕಾರವನ್ನು ಉಚ್ಚರಿಸುತ್ತಾ ಪೀಠದೊಡನೆ ಶಂಖವನ್ನೂ ಸ್ಥಾಪಿಸಿ ಅದನ್ನು ಪೂಜಿಸಬೇಕು.

೬-೮. ಒಳ್ಳೆಯವಾಸನೆಯಿಂದ ಕೂಡಿದ ಪರಿಶುದ್ಧವಾದ ನೀರಿನಿಂದ ಶಂಖ ವನ್ನು ತುಂಬಿ ಪ್ರಣವದಿಂದ ಪೂಜಿಸಿ, ಗಂಧ, ಹೂವು ಇವುಗಳೇ ಮೊದಲಾದುವು ಗಳಿಂದ ಏಳಾವರ್ತಿ ಪ್ರಣವದಿಂದ ಅಭಿಮಂತ್ರಿಸಿದನಂತರ ಅದರಲ್ಲಿ ಧೇನುಮುದ್ರೆ

ಆತ್ಮಾನಂ ಗಂಧಪುಷ್ಪಾದಿಪೂಜೋಪಕರಣಾನಿ ಚ ।
ಪ್ರಾಣಾಯಾಮತ್ರಯಂ ಕೃತ್ವಾ ಋಷ್ಯಾದಿಕಮಥಾಚರೇತ್ ॥ ೮ ॥

ಅಸ್ಯ ಶ್ರೀಸೌರಮಂತ್ರಸ್ಯ ದೇವಭಾಗ ಋಷಿಸ್ತತಃ ।
ಛಂದೋ ಗಾಯತ್ರಮಿತ್ಯುಕ್ತಂ ದೇವಸ್ಸೂರ್ಯೋ ಮಹೇಶ್ವರಃ ॥ ೯ ॥

ದೇವತಾ ಸ್ಯಾತ್ಷಡಂಗಾನಿ ಹ್ರಾಮಿತ್ಯಾದೀನಿ ವಿನ್ಯಸೇತ್ ।
ತತಸ್ಸಂಪ್ರೋಕ್ಷಯೇತ್ಪದ್ಮಮಸ್ತ್ರೇಣಾಗ್ನೇರಗೋಚರಂ ॥ ೧೦ ॥

ತಸ್ಮಿನ್ನಸಮರ್ಚಯೇದ್ವಿದ್ವಾನ್ಪ್ರಭೂತಾಂ ವಿಮಲಾಮಪಿ ।
ಸಾರಾಂ ಚಾಥ ಸಮಾರಾಧ್ಯ ಪೂರ್ವಾದಿಪರತಃ ಕ್ರಮಾತ್ ॥ ೧೧ ॥

ಅಥ ಕಾಲಾಗ್ನಿರುದ್ರಂ ಚ ಶಕ್ತಿಮಾಧಾರಸಂಜ್ಞಿತಾಂ ।
ಅನಂತಂ ಪೃಥಿವೀಂ ಚೈವ ರತ್ನದ್ವೀಪಂ ತಥೈವ ಚ ॥ ೧೨ ॥

---

ಯನ್ನೂ, ಶಂಖಮುದ್ರೆಯನ್ನೂ ತೋರಿಸಿ ಆ ಶಂಖದ ನೀರನ್ನು ತೆಗೆದುಕೊಂಡು ಅಸ್ತ್ರಮಂತ್ರದಿಂದ ತನ್ನನ್ನೂ ಹೂವು, ಗಂಧ ಇವೇ ಮೊದಲಾದ ಪೂಜಾಸಾಮಗ್ರಿಗಳನ್ನು ಪ್ರೋಕ್ಷಿಸಬೇಕು. ಅನಂತರ ಮೂರು ಪ್ರಾಣಾಯಾಮಗಳನ್ನು ಮಾಡಿ ಋಷಿದೇವತಾಛಂದಸ್ಸನ್ನು ಉಚ್ಚರಿಸಬೇಕು.

೯-೧೦. ಈ ಸೌರಮಂತ್ರಕ್ಕೆ ದೇವಭಾಗ ಋಷಿಯು. ಗಾಯತ್ರೀ ಛಂದಸ್ಸು. ಸೂರ್ಯರೂಪದಿಂದಿರುವ ಮಹೇಶ್ವರನೇ ದೇವತೆಯು. ಹ್ರಾಂ ಎಂಬುವುದೇ ಮೊದಲಾದವುಗಳು ಆರು ಬೀಜಾಕ್ಷರಗಳೂ ಆರು ಅಂಗಗಳಾಗಿರುವುವು. ಈ ಹ್ರಾಂ ಎಂಬುದೇ ಮೊದಲಾದ ಆರು ಮಂತ್ರಗಳಿಂದ ಆರು ಅಂಗಗಳನ್ನೂ ಎಂದರೆ ಹ್ರಾಂ ಅಂಗುಷ್ಠಾಭ್ಯಾಂನಮಃ ಎಂದು ಮುಂತಾಗಿ ನ್ಯಾಸಮಾಡಿಕೊಳ್ಳಬೇಕು. ಅನಂತರ ಸೂಕ್ಷ್ಮವಾದ ಪದ್ಮವನ್ನು ಅಗ್ನಿಯಸಂಬಂಧವಾದ ಅಸ್ತ್ರಮಂತ್ರದಿಂದ ಪ್ರೋಕ್ಷಿಸಬೇಕು.

೧೧-೧೩. ಆ ಪದ್ಮದಲ್ಲಿ ಪೂರ್ವವೇ ಮೊದಲಾದ ದಿಕ್ಕನ್ನನುಸರಿಸಿ ಕ್ರಮವಾಗಿ ಪ್ರಭೂತಾ, ವಿಮಲಾ, ಸಾರಾ ಎಂಬ ಶಕ್ತಿದೇವತೆಗಳನ್ನು ಪೂಜಿಸಬೇಕು.

ಸಂಕಲ್ಪವೃಕ್ಷೋದ್ಯಾನಂ ಚ ಗೃಹಂ ಮಣಿಮಯಂ ತತಃ ।
ರತ್ನಪೀಠಂ ಚ ಸಂಪೂಜ್ಯ ಪಾದೇಷು ಪ್ರಾಗುಪಕ್ರಮಾತ್ ॥ ೧೩ ॥

ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚ ಚತುಷ್ಟಯಂ ।
ಅಧರ್ಮಾದ್ಯಗ್ನಿಕೋಣಾದಿಕೋಣೇಷು ಚ ಸಮರ್ಚಯೇತ್ ॥ ೧೪ ॥

ಮಾಯಾಧಶ್ಛದನಂ ಪಶ್ಚಾದ್ವಿದ್ಯೋರ್ಧ್ವಚ್ಛದನಂ ತತಃ ।
ಸತ್ತ್ವಂ ರಜಸ್ತಮಶ್ಚೈವ ಸಮಭ್ಯರ್ಚ್ಯ ಯಥಾಕ್ರಮಂ ॥ ೧೫ ॥

ಪೂರ್ವಾದಿದಿಕ್ಷು ಮಧ್ಯೇ ಚ ದೀಪ್ತಾಂ ಸೂಕ್ಷ್ಮಾಂ ಜಯಾಮಪಿ ।
ಭದ್ರಾಂ ವಿಭೂತಿಂ ವಿಮಲಾಮಮೋಘಾಂ ವೈದ್ಯುತಾಮಪಿ ॥ ೧೬ ॥

ಸರ್ವತೋಮುಖಸಂಜ್ಞಾಂ ಚ ಕಂದನಾಲಂ ತಥೈವ ಚ ।
ಸುಷಿರಂ ಚ ತತಸ್ತಂತುಕಂಟಕಾಂಸ್ತದನಂತರಂ ॥ ೧೭ ॥

---

ಅನಂತರ ಆಧಾರಶಕ್ತಿಯನ್ನೂ, ಕಾಲಾಗ್ನಿರುದ್ರನನ್ನೂ, ಅನಂತ, ಪೃಥ್ವಿ ರತ್ನದ್ವೀಪ, ಸಂಕಲ್ಪವೃಕ್ಷ, ಉದ್ಯಾನ, ಮಣಿಮಯಗೃಹ, ರತ್ನಪೀಠ, ಇವುಗಳನ್ನೂ ಪೂಜೆ ಮಾಡಬೇಕು.

೧೪. ಅನಂತರ ಪಾದಗಳಲ್ಲಿ ಪೂರ್ವದಿಕ್ಕನ್ನು ಪ್ರಾರಂಭಿಸಿ ಕ್ರಮವಾಗಿ ಧರ್ಮ, ಜ್ಞಾನ ವೈರಾಗ್ಯ, ಐಶ್ವರ್ಯ ಎಂಬ ನಾಲ್ಕನ್ನೂ ಆಗ್ನೇಯಾದಿಕೋಣಗಳಲ್ಲಿ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಇವುಗಳನ್ನೂ ಪೂಜಿಸಬೇಕು.

೧೫-೧೯. ಅನಂತರ ಕೆಳಭಾಗದಲ್ಲಿರುವ ಮಾಯಾಛದನವನ್ನೂ, ಅದರ ಮೇಲಿರುವ ವಿದ್ಯಾಛದನವನ್ನೂ, ಸತ್ತ್ವ, ರಜಸ್ಸು, ತಮಸ್ಸೆಂಬ ಮೂರುಗುಣಗಳನ್ನೂ ಕ್ರಮವಾಗಿ ಪೂಜಿಸಬೇಕು. ಪೂರ್ವವೇ ದೂದಲಾದ ದಿಕ್ಕುಗಳಲ್ಲಿಯೂ ಮಧ್ಯ ದಲ್ಲಿಯೂ ಕೂಡ, ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಮೋಘಾ, ವೈದ್ಯುತಾ, ಸರ್ವತೋಮುಖ ಎಂಬ ಹೆಸರುಳ್ಳ ಕಲೆಗಳನ್ನು ಪೂಜಿಸ ಬೇಕು. ಪದ್ಮದ ಕಂದನಾಲವನ್ನೂ. ಅದರ ರಂಧ್ರವನ್ನೂ, ಅದರ ಕಂಟಕಗಳನ್ನೂ, ಮೂಲದ ಗೆಡ್ಡೆಯನ್ನೂ, ಕರ್ಣಿಕೆಯ ಕಿಂಜಲ್ಕ ಕೇಸರಗಳನ್ನೂ, ಪ್ರಕಾಶವೇ ಮೊದ ಲಾದ ಎಲ್ಲಾ ರೂಪದಿಂದ ಇರುವ ಐದು ಗ್ರಂಥಿಯುಳ್ಳ ಪದ್ಮದ ಕರ್ಣಿಕೆಯನ್ನೂ,

ಮೂಲಚ್ಛದನಕಿಂಜಲ್ಕಪ್ರಕಾಶಸಕಲಾತ್ಮನಃ ।
ಪಂಚಗ್ರಂಥಿಕರ್ಣಿಕಾಂ ಚ ದಲಾನಿ ತದನಂತರಂ ॥ ೧೮ ॥

ಕೇಶರಾನ್ಬ್ರಹ್ಮವಿಷ್ಣೂ ಚ ರುದ್ರಮಾತ್ಮಾನಮೇವ ಚ ।
ಅಂತರಾತ್ಮಾನಮಪಿ ಚ ಜ್ಞಾನಾತ್ಮಪರಮಾತ್ಮನಿ ॥ ೧೯ ॥

ಸಂಪೂಜ್ಯ ಪಶ್ಚಾತ್ಸೌರಾಖ್ಯಂ ಯೋಗಪೀಠಂ ಸಮರ್ಚಯೇತ್ ।
ಪೀಠೋಪರಿ ಸಮಾಕಲ್ಪ್ಯ ಮೂರ್ತಿಂ ಮೂಲೇನ ಮೂಲವಿತ್ ॥ ೨೦ ॥

ನಿರುದ್ಧಪ್ರಾಣ ಆಸೀನೋ ಮೂಲೇನೈವ ಸ್ವಮೂಲತಃ ।
ಶಕ್ತಿಮುತ್ಥಾಪ್ಯ ತತ್ತೇಜಃ ಪ್ರಭಾವಾತ್ಪಿಂಗಲಾಧ್ವನಾ ॥ ೨೧ ॥

ಪುಷ್ಪಾಂಜಲೌ ನಿರ್ಗಮಯ್ಯ ಮಂಡಲಸ್ಥಸ್ಯ ಭಾಸ್ವತಃ ।
ಸಿಂದೂರಾರುಣದೇಹಸ್ಯ ವಾಮಾರ್ಧದಯಿತಸ್ಯ ಚ ॥ ೨೨ ॥

---

ಪದ್ಮದ ದಳಗಳನ್ನೂ, ಕೇಸರಗಳನ್ನೂ, ಬ್ರಹ್ಮ, ವಿಷ್ಣು, ರುದ್ರ, ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ ಇವರುಗಳನ್ನೂ ಪೂಜಿಸಿದನಂತರ ಸೌರವೆಂದು ಹೆಸರುಳ್ಳ ಯೋಗಪೀಠವನ್ನು ಪೂಜಿಸಬೇಕು.

೨೦–೨೧. ಯೋಗಪೀಠದ ಮೇಲಭಾಗದಲ್ಲಿ ಮೂಲಮಂತ್ರವನ್ನು ತಿಳಿದವನು ಮೂಲಮಂತ್ರದಿಂದ ಮೂರ್ತಿಯನ್ನು ಭಾವನೆ ಮಾಡಬೇಕು. ತನ್ನ ಆಧಾರ ಚಕ್ರದಲ್ಲಿರುವ ಶಕ್ತಿರೂಪದಿಂದಿರುವ ತೇಜಸ್ಸನ್ನು ಮೂಲಮಂತ್ರದಿಂದ ಯೋಗ ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಪ್ರಾಣವಾಯುವನ್ನು ನಿರೋಧಮಾಡಿ ಪಿಂಗಲ ಮಾರ್ಗದಿಂದ ಮೇಲಕ್ಕೆಬ್ಬಿಸಬೇಕು.

೨೨-೨೩. ಮಂಡಲದಲ್ಲಿರುವ, ಪ್ರಕಾಶಮಾನವಾದ, ಸಿಂದೂರದಂತೆ ಕೆಂಪಾದ ಶರೀರವುಳ್ಳ ಅರ್ಧನಾರೀಶ್ವರಮೂರ್ತಿಯನ್ನು ಮಂಡಲದಲ್ಲಿ ಭಾವಿಸಬೇಕು. ಆ ಮೂರ್ತಿಯು ಎಡಭಾಗವು ಸ್ತ್ರೀಯಿಂದ ಕೂಡಿರುವುದು. ಜಪಸರ, ಪಾಶ, ಖಟ್ವಾಂಗ, ಕಪಾಲ, ಅಂಕುಶ, ಕಮಲ, ಶಂಖ, ಚಕ್ರ ಇವುಗಳನ್ನು ಧರಿಸಿ ನಾಲ್ಕು ಮುಖಗಳಿಂದಲೂ, ಹನ್ನೆರಡು ಕಣ್ಣುಗಳಿಂದಲೂ, ಒಪ್ಪುತ್ತಿರುವುದು. ಹೃದಯ

ಅಕ್ಷಸ್ರಕ್ಪಾಶಖಟ್ವಾಂಗಕಪಾಲಾಂಕುಶಪಂಕಜಂ ।
ಶಂಖಂ ಚಕ್ರಂ ದಧಾನಸ್ಯ ಚತುರ್ವಕ್ತ್ರಸ್ಯ ಲೋಚನೈಃ　|| ೨೩ ||

ರಾಜಿತಸ್ಯ ದ್ವಾದಶಭಿಸ್ತಸ್ಯ ಹೃತ್ಪಂಕಜೋದರೇ ।
ಪ್ರಣವಂ ಪೂರ್ವಮುದ್ಧೃತ್ಯ ಹ್ರಾಂಹ್ರೀಂಸಸ್ತದನಂತರಂ　|| ೨೪ ||

ಪ್ರಕಾಶಶಕ್ತಿಸಹಿತಂ ಮಾರ್ತಂಡಂ ಚ ತತಃ ಪರಂ ।
ಆವಾಹಯಾಮಿ ನಮ ಇತ್ಯಾವಾಹ್ಯಾವಾಹನಾಖ್ಯಯಾ　|| ೨೫ ||

ಮುದ್ರಯಾ ಸ್ಥಾಪನಾದ್ಯಾಶ್ಚ ಮುದ್ರಾಸ್ಸಂದರ್ಶಯೇತ್ತತಃ ।
ವಿನ್ಯಸ್ಯಾಂಗಾನಿ ಹ್ರಾಂಹ್ರೀಂಹ್ರೂಂಮತೇನ ಮನುನಾ ತತಃ　|| ೨೬ ||

ಪಂಚೋಪಚಾರಾನ್ಸಂಕಲ್ಪ್ಯ ಮೂಲೇನಾಭ್ಯರ್ಚಯೇತ್ತ್ರಿಧಾ ।
ಕೇಸರೇಷು ಚ ಪದ್ಮಸ್ಯ ಷಡಂಗಾನಿ ಮಹೇಶ್ವರಿ　|| ೨೭

ವನ್ಹೀಶರಕ್ಷೋವಾಯೂನಾಂ ಪರಿತಃ ಕ್ರಮತಃ ಸುಧೀಃ ।
ದ್ವಿತೀಯಾವರಣೇ ಪೂಜ್ಯಾಶ್ಚತಸ್ರೋ ಮೂರ್ತಯಃ ಕ್ರಮಾತ್　|| ೨೮ ||

---

ಕಮಲದಲ್ಲಿ ಪ್ರಕಾಶಿಸುತ್ತಿರುವ ಇಂತಹ ಅರ್ಧನಾರೀಶ್ವರಮೂರ್ತಿಗೆ ತಾನು ಯೋಗ ಮಾರ್ಗದಿಂದ ಎಬ್ಬಿಸಿರುವ ತೇಜಸ್ಸನ್ನು ಸೇರಿಸಿ ಪುಷ್ಪಾಂಜಲಿಯನ್ನು ಹಾಕಬೇಕು.

೨೪-೨೬. ಮೊದಲು ಪ್ರಣವವನ್ನು ಹೇಳಿದನಂತರ ಹಾಂ ಹ್ರೀಂ ಸಃ ಎಂಬ ಮಂತ್ರವನ್ನು ಹೇಳಬೇಕು. ಅನಂತರ ಪ್ರಕಾಶಶಕ್ತಿಯಿಂದ ಕೂಡಿಕೊಂಡಿರುವ ಮಾರ್ತಂಡದೇವತೆಯನ್ನು ಆವಾಹಯಾಮಿ ನಮಃ ಎಂಬ ಆವಾಹನೆಯ ಮಂತ್ರದಿಂದ ಆವಾಹನೆಯನ್ನು ಮಾಡಿ ಸ್ಥಾಪನಾದಿಮುದ್ರೆಗಳನ್ನು ತೋರಿಸಿ ಹ್ರಾಂ, ಹ್ರೀಂ, ಹ್ರೂಂ ಎಂಬುವುಗಳೇ ಕೊನೆಯಾಗಿರುವ ಮಂತ್ರಗಳಿಂದ ಅಂಗನ್ಯಾಸವನ್ನು ಮಾಡಿ ಕೊಂಡು ಮೂಲಮಂತ್ರದಿಂದ ಪಂಚೋಪಚಾರ ಪೂಜೆಯನ್ನು ಮಾಡಬೇಕು.

೨೭-೨೮. ಇಲ್ಲಿ ಮೂರು ಆವರಣಗಳಿರುವುವು. ಪದ್ಮದ ಕೇಸರದಲ್ಲಿ ಆರು ಅಂಗಗಳನ್ನೂ, ಆಗ್ನೇಯ, ಈಶಾನ್ಯ, ನೈಋತ್ಯ, ವಾಯುವ್ಯ ಎಂಬ ದಿಕ್ಕುಗಳಲ್ಲಿ ಆ ಆರು ಅಂಗದೇವತೆಗಳನ್ನೂ ಪೂಜಿಸಬೇಕು. ಎರಡನೆಯ ಆವರಣದಲ್ಲಿ ಪದ್ಮದ

ಪೂರ್ವಾದ್ಯುತ್ತರಪರ್ಯಂತಂ ದಲಮೂಲೇಷು ಪಾರ್ವತಿ ।
ಆದಿತ್ಯೋ ಭಾಸ್ಕರೋ ಭಾನೂ ರವಿಶ್ಚೇತ್ಯನುಪೂರ್ವಶಃ ॥ ೨೯ ॥

ಅರ್ಕೋ ಬ್ರಹ್ಮಾ ತಥಾ ರುದ್ರೋ ವಿಷ್ಣುಶ್ಚೇತಿ ಪುನಃ ಪ್ರಿಯೇ ।
ಈಶಾನಾದಿಷು ಸಂಪೂಜ್ಯಾಸ್ತೃತೀಯಾವರಣೇ ಪುನಃ ॥ ೩೦ ॥

ಸೋಮಂ ಕುಜಂ ಬುಧಂ ಜೀವಂ ಕವಿಂ ಮಂದಂ ತಮುಸ್ತಮಃ ।
ಸಮಂತತೋ ಯಜೇದೇತಾನ್ಪೂರ್ವಾದಿದಲಮಧ್ಯತಃ ॥ ೩೧ ॥

ಅಥವಾ ದ್ವಾದಶಾದಿತ್ಯಾನ್ದ್ವಿತೀಯಾವರಣೇ ಯಜೇತ್ ।
ತೃತೀಯಾವರಣೇ ಚೈವ ರಾಶೀನ್ದ್ವಾದಶ ಪೂಜಯೇತ್ ॥ ೩೨ ॥

ಸಪ್ತಸಾಗರಗಂಗಾಶ್ಚ ಬಹಿರಸ್ಯ ಸಮಂತತಃ ।
ಋಷೀನ್ದೇವಾಂಶ್ಚ ಗಂಧರ್ವಾನ್ಪನ್ನಗಾನಪ್ಸರೋಗಣಾನ್ ॥ ೩೩ ॥

ಗ್ರಾಮಣ್ಯಶ್ಚ ತಥಾ ಯಕ್ಷಾನ್ಯಾತುಧಾನಾಂಸ್ತಥಾ ಹಯಾನ್ ।
ಸಪ್ತಚ್ಛಂದೋಮಯಾಂಶ್ಚೈವ ವಾಲಖಿಲ್ಯಾಂಶ್ಚ ಪೂಜಯೇತ್ ॥ ೩೪ ॥

---

ದಳಗಳ ಮೂಲಭಾಗದಲ್ಲಿ ಪೂರ್ವನೇ ಮೊದಲಾಗಿ ಉತ್ತರದ ಕೊನೆಯವರಿಗೂ ಆದಿತ್ಯ ಭಾಸ್ಕರ, ಭಾನು, ರವಿ ಎಂಬ ನಾಲ್ಕು ದೇವತೆಗಳನ್ನು ಕ್ರಮವಾಗಿ ಪೂಜಿಸಬೇಕು.

೩೦-೩೧. ಎಲೈ ಪ್ರಿಯಳೇ ಕೇಳು, ಮೂರನೆಯ ಆವರಣದಲ್ಲಿ ಈಶಾನಾದಿವಿದಿಕ್ಕುಗಳಲ್ಲಿ ದಳಗಳ ಮಧ್ಯಪ್ರದೇಶದಲ್ಲಿ ಸುತ್ತಲೂ ಕ್ರಮವಾಗಿ ಅರ್ಕ, ಬ್ರಹ್ಮ, ರುದ್ರ, ವಿಷ್ಣು; ಇವರನ್ನು ಪೂಜಿಸಬೇಕು. ಪೂರ್ವಾದಿ ದಳಮಧ್ಯದಲ್ಲಿ ಸೋಮ, ಕುಜ, ಬುಧ, ಜೀವ, ಕವಿ, ಶನಿ, ರಾಹು, ಕೇತು ಇವರುಗಳನ್ನು ಪೂಜಿಸಬೇಕು.

೩೨-೩೪. ಅಥವಾ ಎರಡನೆಯ ಆವರಣದಲ್ಲಿ ಹನ್ನೆರಡುಜನ ಆದಿತ್ಯರನ್ನೂ ಪೂಜಿಸಿ ಮೂರನೆಯ ಆವರಣದಲ್ಲಿ ಹನ್ನೆರಡು ರಾಶಿಗಳನ್ನು ಪೂಜಿಸಬೇಕು. ಈ ಆವರಣಗಳ ಹೊರಗಡೆಯಲ್ಲಿ ಸಪ್ತಸಾಗರಗಳೂ, ಗಂಗೆ, ಋಷಿಗಳು, ದೇವತೆಗಳು, ಗಂಧರ್ವರು, ಪನ್ನಗರು, ಅಪ್ಸರಸ್ತ್ರೀಯರುಗಳು, ಗ್ರಾಮಣಿಗಳು, ಯಕ್ಷರು, ರಾಕ್ಷಸರು, ಸಪ್ತಛಂದೋಮಯವಾಗಿರುವ ಸೂರ್ಯನ ಏಳು ಕುದುರೆಗಳು, ವಾಲಖಿಲ್ಯರು ಇವರುಗಳನ್ನು ಪೂಜೆಮಾಡಬೇಕು.

ಏವಂ ತ್ರ್ಯಾವರಣಂ ದೇವಂ ಸಮಭ್ಯರ್ಚ್ಯ ದಿವಾಕರಂ ।
ವಿರಚ್ಯ ಮಂಡಲಂ ಪಶ್ಚಾಚ್ಚತುರಸ್ರಂ ಸಮಾಹಿತಃ ॥ ೩೫ ॥

ಸ್ಥಾಪ್ಯ ಸಾಧಾರಕಂ ತಾಮ್ರಪಾತ್ರಂ ಪ್ರಸ್ಥೋದವಿಸ್ತೃತಂ ।
ಪೂರಯಿತ್ವಾ ಜಲೈಶ್ಶುದ್ಧೈರ್ವಾಸಿತೈಃ ಕುಸುಮಾದಿಭಿಃ ॥ ೩೬ ॥

ಅಭ್ಯರ್ಚ್ಯ ಗಂಧಪುಷ್ಪಾದ್ಯೈರ್ಜಾನುಭ್ಯಾಮವನೀಂ ಗತಃ ।
ಅರ್ಘ್ಯಪಾತ್ರಂ ಸಮಾದಾಯ ಭ್ರೂಮಧ್ಯಾಂತಂ ಸಮುದ್ಧರೇತ್ ॥ ೩೭ ॥

ತತೋ ಬ್ರೂಯಾದಿಮಂ ಮಂತ್ರಂ ಸಾವಿತ್ರಂ ಸರ್ವಸಿದ್ಧಿದಂ ।
ಶೃಣು ತಚ್ಚ ಮಹಾದೇವಿ ಭುಕ್ತಿಮುಕ್ತಿಪ್ರದಂ ಸದಾ ॥ ೩೮ ॥

ಸಿಂಧೂರವರ್ಣಾಯ ಸುಮಂಡಲಾಯ ।
ನಮೋಽಸ್ತು ವಜ್ರಾಭರಣಾಯ ತುಭ್ಯಂ ।

---

೩೫-೩೭. ಮೂರು ಆವರಣದಿಂದ ಕೂಡಿರುವ ಸೂರ್ಯದೇವನನ್ನು ಈ ಪ್ರಕಾರವಾಗಿ ಪೂಜಿಸಿ, ಅನಂತರ ಸಮಾಧಾನವಾದ ಮನಸ್ಸಿನಿಂದ ಚೌಕವಾಗಿರುವ ಮಂಡಲವನ್ನು ನಿರ್ಮಿಸಿ ಅದರಲ್ಲಿ ಒಂದು ಬಳ್ಳ ನೀರು ಹಿಡಿಯುವ ತಾಮ್ರದ ಪಾತ್ರೆಯಲ್ಲಿ ನೀರನ್ನು ತುಂಬಿ ಅದನ್ನು ಸರಿಯಾದ ಪೀಠದಮೇಲಿರಿಸಿ ಆ ಪಾತ್ರೆಗೆ ಪರಿಶುದ್ಧವಾದ ಹೂವು ಮೊದಲಾದುವುಗಳನ್ನು ಹಾಕಿ, ಗಂಧ ಹೂವು ಇವುಗಳಿಂದ ಪೂಜಿಸಿದನಂತರ ತಾನು ಮಂಡಿಯನ್ನು ನೆಲದಮೇಲೆ ಊರಿಕೊಂಡು ಆ ಅರ್ಘ್ಯ ಪಾತ್ರೆಯನ್ನು ತನ್ನ ಹುಬ್ಬಿನವರೆಗೂ ಎತ್ತಿ ಹಿಡಿದುಕೊಳ್ಳಬೇಕು.

೩೮. ಎಲೈ ಮಹಾದೇವಿಯೇ ಕೇಳು, ಅನಂತರದಲ್ಲಿ ಸೂರ್ಯದೇವತಾಕವಾದ ಈ ಮುಂದೆ ಹೇಳುವ ಮಂತ್ರವನ್ನು ಹೇಳಬೇಕು. ಅದು ಸರ್ವಸಿದ್ಧಿಯನ್ನು ಉಂಟುಮಾಡುವುದು. ಭುಕ್ತಿ ಮುಕ್ತಿಗಳನ್ನು ಕೊಡುವುದು.

೩೯. ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಸೂರ್ಯನೇ, ನೀನು ಸಿಂದೂರ ವರ್ಣವುಳ್ಳವನಾಗಿಯೂ, ಒಳ್ಳೆಯ ಮಂಡಲದಿಂದ ಕೂಡಿದವನಾಗಿಯೂ, ವಜ್ರದ ಆಭರಣವುಳ್ಳವನಾಗಿಯೂ, ಪದ್ಮದಂತೆ ಇರುವ ಕಣ್ಣುಗಳುಳ್ಳವನಾಗಿಯೂ, ಉತ್ತಮ

ಪದ್ಮಾಭನೇತ್ರಾಯ ಸುಪಂಕಜಾಯ
ಬ್ರಹ್ಮೇಂದ್ರನಾರಾಯಣಕಾರಣಾಯ ॥ ೩೯ ॥

ಸುರಕ್ತಚೂರ್ಣಂ ಸಸುವರ್ಣತೋಯಂ
ಸ್ರಕ್ಕುಂಕುಮಾಢ್ಯಂ ಸಕುಶಂ ಸಪುಷ್ಪಂ ।
ಪ್ರದತ್ತಮಾದಾಯ ಸಹೇಮಪಾತ್ರಂ
ಪ್ರಶಸ್ತಮರ್ಘ್ಯಂ ಭಗವನ್ಪ್ರಸೀದ ॥ ೪೦ ॥

ಏವಮುಕ್ತ್ವಾ ತತೋ ದತ್ವಾ ತದರ್ಘ್ಯಂ ಸೂರ್ಯಮೂರ್ತಯೇ ।
ನಮಸ್ಕುರ್ಯಾದಿಮಂ ಮಂತ್ರಂ ಪಠಿತ್ವಾ ಸುಸಮಾಹಿತಃ ॥ ೪೧ ॥

ನಮಶ್ಶಿವಾಯ ಸಾಂಬಾಯ ಸಗಣಾಯಾದಿಹೇತವೇ ।
ರುದ್ರಾಯ ವಿಷ್ಣವೇ ತುಭ್ಯಂ ಬ್ರಹ್ಮಣೇ ಚ ತ್ರಿಮೂರ್ತಯೇ ॥ ೪೨ ॥

---

ವಾದ ಕಮಲವನ್ನು ಹಿಡಿದಿರುವವನಾಗಿಯೂ, ಬ್ರಹ್ಮ, ಇಂದ್ರ, ನಾರಾಯಣ, ಇವರುಗಳಿಗೆ ಕಾರಣನಾಗಿಯೂ ಇರುವೆ. ಇಂತಹ ನಿನಗೆ ನಮಸ್ಕಾರವನ್ನು ಮಾಡುವೆನು.

೪೦. ಚೆನ್ನಾಗಿರುವ ಕೆಂಪುಚೂರ್ಣದಿಂದ ಕೂಡಿರುವ, ಹೂವಿನಿಂದಲೂ, ಕುಂಕುಮಕೇಸರದಿಂದಲೂ, ದರ್ಭೆಯಿಂದಲೂ, ಹೂವಿನಹಾರದಿಂದಲೂ, ಕೂಡಿ ಚಿನ್ನದ ಪಾತ್ರೆಯಲ್ಲಿ ನಾನು ನಿನಗೆ ಅರ್ಪಿಸುವ ಉತ್ತಮವಾದ ಈ ಅರ್ಘ್ಯವನ್ನು ಸ್ವೀಕರಿಸಿ ನನ್ನ ವಿಷಯದಲ್ಲಿ ಪ್ರಸನ್ನನಾಗು.

೪೧. ಹೀಗೆಂದು ಮಂತ್ರವನ್ನು ಹೇಳಿದನಂತರ ಸೂರ್ಯದೇವನಿಗೆ ಅರ್ಘ್ಯವನ್ನು ಕೊಟ್ಟು ಸುಪ್ರಸನ್ನ ಮನಸ್ಸಿನಿಂದ ಮುಂದೆ ಹೇಳುವ ಮಂತ್ರವನ್ನು ಹೇಳಿ ನಮಸ್ಕಾರವನ್ನು ಮಾಡಬೇಕು.

೪೨. ಜಗನ್ಮಾತೆಯಿಂದ ಕೂಡಿಕೊಂಡು, ಗಣಗಳಿಂದ ಸಹಿತನಾಗಿ ಎಲ್ಲಕ್ಕೂ ಕಾರಣನಾಗಿಯೂ, ರುದ್ರನಾಗಿಯೂ ವಿಷ್ಣುವಾಗಿಯೂ, ಬ್ರಹ್ಮನಾಗಿಯೂ ತ್ರಿಮೂರ್ತ್ಯಾತ್ಮಕನಾಗಿ ಪ್ರಕಾಶಿಸುತ್ತಾ ಶಿವರೂಪದಿಂದ ಇರುವ ನಿನಗೆ ನಮಸ್ಕಾರವು.

ಏವಮುಕ್ತ್ವಾ ನಮಸ್ಕೃತ್ಯ ಸ್ವಾಸನೇ ಸಮುವಸ್ಥಿತಃ ।
ಋಷ್ಯಾದಿಕಂ ಪುನಃಕೃತ್ವಾ ಕರಂ ಸಂಶೋಧ್ಯ ವಾರಿಣಾ ॥ ೪೩ ॥

ಪುನಶ್ಚ ಭಸ್ಮ ಸಂಧಾರ್ಯ ಪೂರ್ವೋಕ್ತೇನೈವ ವರ್ತ್ಮನಾ ।
ನ್ಯಾಸಜಾತಂ ಪ್ರಕುರ್ವೀತ ಶಿವಭಾವವಿವೃದ್ಧಯೇ ॥ ೪೪ ॥

ಪಂಚೋಪಚಾರೈಸ್ಸಂಪೂಜ್ಯ ಶಿರಸಾ ಶ್ರೀಗುರುಂ ಬುಧಃ ।
ಪ್ರಣವಂ ಶ್ರೀಚತುರ್ಥ್ಯಂತಂ ನಮೋಂತಂ ಪ್ರಣಮೇತ್ತತಃ ॥ ೪೫ ॥

ಪಂಚಾತ್ಮಕಂ ಬಿಂದುಯುತಂ ಪಂಚಮಸ್ವರಸಂಯುತಂ ।
ತದೇವ ಬಿಂದುಸಹಿತಂ ಪಂಚಮಸ್ವರವರ್ಜಿತಂ ॥ ೪೬ ॥

ಪಂಚಮಸ್ವರಸಂಯುಕ್ತಂ ಮಂತ್ರೀಶಂ ಚ ಸಬಿಂದುಕಂ ।
ಉದ್ಧೃತ್ಯ ಬಿಂದುಸಹಿತಂ ಸಂವರ್ತಕಮಥೋದ್ಧರೇತ್ ॥ ೪೭ ॥

---

೪೩. ಹೀಗೆಂದು ಹೇಳಿ ನಮಸ್ಕಾರವನ್ನು ಮಾಡಿ ತನ್ನ ಆಸನದಲ್ಲಿ ಕುಳಿತುಕೊಂಡು ಮತ್ತೆ ಋಷ್ಯಾದಿನ್ಯಾಸಗಳನ್ನು ಪಠಿಸಿ ನೀರಿನಿಂದ ಕೈಯ್ಯನ್ನು ಚೆನ್ನಾಗಿ ತೊಳೆದುಕೊಳ್ಳಬೇಕು.

೪೪. ಅನಂತರದಲ್ಲಿ ಹಿಂದೆ ಹೇಳಿದಂತೆಯೇ ಭಸ್ಮವನ್ನು ಚೆನ್ನಾಗಿ ಧರಿಸಿಕೊಂಡು ತನ್ನ ಶಿವಭಾವವು ವೃದ್ಧಿಯಾಗುವುದಕ್ಕಾಗಿ ತನ್ನ ಶರೀರದಲ್ಲಿ ನ್ಯಾಸವೇ ಮೊದಲಾದ ಕರ್ಮವನ್ನು ಆಚರಿಸಬೇಕು.

೪೫. ಬುದ್ಧಿವಂತನಾದ ಯತಿಯು ತನ್ನ ಗುರುವನ್ನು ಪಂಚೋಪಚಾರಗಳಿಂದ ಪೂಜೆಯನ್ನು ಮಾಡಿ ಪ್ರಣವಮಂತ್ರವನ್ನೂ ಅನಂತರ ಶ್ರೀಪದವನ್ನೂ ಅದರ ಮುಂದೆ ಚತುರ್ಥೀವಿಭಕ್ತ್ಯಂತದ ಗುರುಪದವನ್ನೂ ಅದರ ಮುಂದೆ ನಮಃ ಎಂಬ ಪದವನ್ನೂ ಸೇರಿಸಿ ಹೇಳಿ ಎಂದರೆ ಓಂ ಶ್ರೀಗುರುಭ್ಯೋನಮಃ ಎಂದು ತಲೆಬಾಗಿ ಗುರುವನ್ನು ನಮಸ್ಕರಿಸಬೇಕು.

೪೬-೪೭. ಪಂಚಾತ್ಮಕವಾದ ವರ್ಣಕ್ಕೆ ಬಿಂದುವನ್ನು ಸೇರಿಸಿ ಐದನೆಯ ಸ್ವರವನ್ನು ಕೂಡಿಸಿ, ಅದಕ್ಕೆ ಬಿಂದುವನ್ನು ಸೇರಿಸಿ, ಐದನೆಯ ಸ್ವರವನ್ನು ತ್ಯಜಿಸಿ ಮಂತ್ರೀಶನೆಂಬ ವರ್ಣಕ್ಕೆ ಐದನೆಯ ಸ್ವರವನ್ನೂ ಬಿಂದುವನ್ನೂ ಸೇರಿಸಿ ಅನಂತರ ಸಂವರ್ತಕವೆಂಬ ವರ್ಣಕ್ಕೆ ಬಿಂದುವನ್ನು ಸೇರಿಸಿ ಮಂತ್ರವನ್ನು ಉದ್ಧಾರಮಾಡಿಕೊಳ್ಳಬೇಕು. ಎಂದರೆ ಗುಂ, ಗಂ, ದುಂ, ಕ್ಷಂ, ಎಂಬ ಬೀಜಾಕ್ಷರಗಳಾಗುವವು.

ಏತೈರೇವಂ ಕ್ರಮಾದ್ಬೀಜೈರುದ್ಧೃತೈಃ ಪ್ರಣವೋದ್ಭವೈಃ ।
ಭುಜಯೋರೂರುಯುಗ್ಮೇ ಚ ಗುರುಂ ಗಣಪತಿಂ ತಥಾ ॥ ೪೮ ॥

ದುರ್ಗಾಂ ಚ ಕ್ಷೇತ್ರಪಾಲಂ ಚ ಬದ್ಧಾಂಜಲಿಪುಟಸ್ಸ್ಥಿತಃ ।
ಓಮಸ್ತ್ರಾಯ ಫಡಿತ್ಯುಕ್ತ್ವಾ ಕರೌ ಸಂಶೋಧ್ಯ ಷಟ್ಕ್ರಮಾತ್ ॥ ೪೯ ॥

ಅಪಸರ್ಪನ್ತ್ವಿತಿ ಪ್ರೋಚ್ಯ ಪ್ರಣವಂ ತದನಂತರಂ ।
ಅಸ್ತ್ರಾಯ ಫಡಿತಿ ಪ್ರೋಚ್ಯ ಪಾರ್ಷ್ಣಿಘಾತತ್ರಯೇಣ ತು ॥ ೫೦ ॥

ಉದ್ಧೃತ್ಯ ವಿಘ್ನಾನ್ಭೂಮಿಷ್ಠಾನ್ಕರತಾಲತ್ರಯೇಣ ತು ।
ಅಂತರಿಕ್ಷಗತಾನ್ದೃಷ್ಟ್ವಾ ವಿಲೋಕ್ಯ ದಿವಿ ಸಂಸ್ಥಿತಾನ್ ॥ ೫೧ ॥

ನಿರುದ್ಧಪ್ರಾಣ ಆಸೀನೋ ಹಂಸಮಂತ್ರಮನುಸ್ಮರನ್ ।
ಹೃದಿಸ್ಥಂ ಜೀವಚೈತನ್ಯಂ ಬ್ರಹ್ಮನಾಡ್ಯಾ ಸಮಾನಯೇತ್ ॥ ೫೨ ॥

---

೪೮-೪೯. ಕ್ರಮವಾಗಿ ಈ ಬೀಜಮಂತ್ರಗಳಿಂದ ಎರಡು ಭುಜಗಳಲ್ಲಿಯೂ ಎರಡು ತೊಡೆಗಳಲ್ಲಿಯೂ, ಗುರು, ಗಣಪತಿ, ದುರ್ಗಾ, ಕ್ಷೇತ್ರಪಾಲ, ಎಂಬ ಈ ದೇವತೆಗಳನ್ನೂ ನ್ಯಾಸಮಾಡಿಕೊಂಡು ಬದ್ಧಾಂಜಲಿಯಾಗಿ ನಿಂತುಕೊಂಡು ಓಂ ಅಸ್ತ್ರಾಯಫಟ್ ಎಂದು ಹೇಳಿ ಅಂಗನ್ಯಾಸ ಕರನ್ಯಾಸಗಳನ್ನು ಕ್ರಮವಾಗಿ ಮಾಡಬೇಕು.

೫೦-೫೨. ಅನಂತರ ಅಪಸರ್ಪಂತು ಎಂಬ ಮಂತ್ರವನ್ನು ಹೇಳಿ ಪ್ರಣವ ಮಂತ್ರವನ್ನು ಉಚ್ಚರಿಸಿ "ಅಸ್ತ್ರಾಯಫಟ್" ಎಂದು ಹೇಳಿ ತನ್ನ ಎರಡು ಪಾರ್ಶ್ವಗಳಲ್ಲಿ ಮೂರುಸಾರಿ ಚಪ್ಪಾಳೆ ಹೊಡೆಯುವುದರಿಂದ ಸಮಸ್ತ ವಿಘ್ನಗಳನ್ನು ಓಡಿಸಿ ಅವುಗಳು ಅಂತರಿಕ್ಷಕ್ಕೆ ಹೋಗಿ ಅಲ್ಲಿ ನಿಂತಿರುವುದನ್ನು ನೋಡಿ ತನ್ನ ಪ್ರಾಣವಾಯುವನ್ನು ಹಿಡಿದು ನಿಲ್ಲಿಸಿಕೊಂಡು ಕುಳಿತು ಹಂಸಮಂತ್ರವನ್ನು ಸ್ಮರಿಸುತ್ತಾ ಬ್ರಹ್ಮನಾಡಿಯಿಂದ ಜೀವಚೈತನ್ಯವನ್ನು ಮೇಲಕ್ಕೆ ತರಬೇಕು.

ದ್ವಾದಶಾಂತಸ್ಸ್ಥವಿಶದೇ ಸಹಸ್ರಾರಮಹಾಂಬುಜೇ ।
ಚಿಚ್ಚಂದ್ರಮಂಡಲಾಂತಸ್ಥಂ ಚಿದ್ರೂಪಂ ಪರಮೇಶ್ವರಂ ॥ ೫೩ ॥

ಶೋಷದಾಹಪ್ಲವಾನ್ಕುರ್ಯಾದ್ರೇಚಕಾದಿಕ್ರಮೇಣ ತು ।
ಷೋಡಶಚತುಷ್ಷಷ್ಟಿದ್ವಾತ್ರಿಂಶದ್ಗಣನಾಯುತೈಃ ॥ ೫೪ ॥

ವಾಯ್ವಗ್ನಿಸಲಿಲಾದ್ಯೈಸ್ತೈಸ್ಸ್ವವೇದಾದ್ಯೈರನುಕ್ರಮಾತ್ ।
ಪ್ರಾಣಾನಾಯಮ್ಯ ಮೂಲಸ್ಥಾಂ ಕುಂಡಲೀಂ ಬ್ರಹ್ಮರಂಧ್ರಗಾಂ ॥ ೫೫ ॥

ಆನೀಯ ದ್ವಾದಶಾಂತಸ್ಥಸಹಸ್ರಾರಾಂಬುಜೋದರೇ ।
ಚಿಚ್ಚಂದ್ರಮಂಡಲೋದ್ಭೂತಪರಮಾಮೃತಧಾರಯಾ ॥ ೫೬ ॥

---

೫೩. ಈ ಜೀವಚೈತನ್ಯವು ಹನ್ನೆರಡು ಅಂಗುಲದ ಎತ್ತರದಲ್ಲಿರುವ ಆಕಾಶದಲ್ಲಿ ಸಾವಿರದಳವುಳ್ಳ ಕಮಲದಲ್ಲಿ ಚಿತ್ ಎಂಬ ಚಂದ್ರಮಂಡಲದ ಒಳಗಡೆಯಲ್ಲಿ ಎಂದರೆ ಶಿರಸ್ಸಿನಲ್ಲಿರುವ ಸಹಸ್ರಾರಕಮಲದಲ್ಲಿ ಚಿದ್ರೂಪನಾದ ಪರಮೇಶ್ವರನ ರೂಪದಿಂದ ಇರುವುದು. ಇದನ್ನು ಮೇಲಕ್ಕೆ ತಂದನಂತರ ಶೋಷ, ದಾಹ, ಪ್ಲವ ಎಂಬ ಭೂತಶುದ್ಧಿ ಕರ್ಮಗಳನ್ನು ಕ್ರಮವಾಗಿ, ರೇಚಕಪೂರಕಕುಂಭಕಗಳಿಂದ ಮಾಡಬೇಕು.

೫೪-೫೫. ತನ್ನ ಶಾಖಾನುಸಾರವಾಗಿ ಕ್ರಮವಾಗಿ ಹದಿನಾರು, ಅರವತ್ತು ನಾಲ್ಕು, ಮೂವತ್ತೆರಡು ಮಾತ್ರೆಗಳ ಪ್ರಮಾಣದಿಂದ ಇರುವ ಪ್ರಾಣಾಯಾಮಗಳಿಂದ, ವಾಯು, ಅಗ್ನಿ, ಜಲವೆಂಬ ತತ್ತ್ವಗಳಿಂದ ಮೂಲಾಧಾರದಲ್ಲಿರವ ಕುಂಡಲಿನೀ ಶಕ್ತಿಯನ್ನು, ತನ್ನ ನೆತ್ತಿಯಮೇಲೆ ಹನ್ನೆರಡು ಅಂಗುಲದ ಮೇಲುಗಡೆಯಲ್ಲಿ ಅಂತರಾಳದಲ್ಲಿರು ಸಾವಿರದಳಗಳುಳ್ಳ ಸಹಸ್ರಾರ ಕಮಲದ ಮಧ್ಯದಲ್ಲಿರುವ ಬ್ರಹ್ಮರಂಧ್ರದ ಮಧ್ಯಕ್ಕೆ ತಂದು, ಚಿದ್ರೂಪವಾದ, ಚಂದ್ರಮಂಡಲದಿಂದ ಹುಟ್ಟಿದ ಉತ್ತಮವಾದ ಅಮೃತಧಾರೆಯಿಂದ ತನ್ನ ಶರೀರವೆಲ್ಲವನ್ನೂ ನೆನಸಬೇಕು.

೫೬–೫೮. ಅನಂತರದಲ್ಲಿ ಪರಿಶುದ್ಧವಾದ ಶರೀರವೂ, ಸರಿಯಾದ ಭಾವನೆಯೂ ಉಳ್ಳವನಾಗಿ ಸೋಽಹಂ ಎಂದು ತನ್ನ ಹೃದಯದಲ್ಲಿ ಧ್ಯಾನಮಾಡುತ್ತಾ

ಸಂಸಿಕ್ತಾಯಾಂ ತನೌ ಭೂಯುಶ್ಶುದ್ಧದೇಹಸ್ಸುಭಾವನಃ ।
ಸೋಽಹಮಿತ್ಯವತೀರ್ಯಾಥ ಸ್ವಾತ್ಮಾನಂ ಹೃದಯಾಂಬುಜೇ ॥ ೫೭ ॥

ಆತ್ಮನ್ಯಾವೇಶ್ಯ ಚಾತ್ಮಾನಮಮೃತಂ ಸ್ಮತಿಧಾರಯಾ ।
ಪ್ರಾಣಪ್ರತಿಷ್ಠಾಂ ವಿಧಿವತ್ಕುರ್ಯಾದತ್ರ ಸಮಾಹಿತಃ ॥ ೫೮ ॥

ಏಕಾಗ್ರಮಾನಸೋ ಯೋಗೀ ವಿಮೃಶ್ಯಾತ್ತಾಂ ಚ ಮಾತೃಕಾಂ ।
ಪುಟಿತಾಂ ಪ್ರಣವೇನಾಥ ನ್ಯಸೇದ್ಬಾಹ್ಯೇ ಚ ಮಾತೃಕಾಂ ॥ ೫೯ ॥

ಪುನಶ್ಚ ಸಂಯುತಪ್ರಾಣಃ ಕುರ್ಯಾದ್ದ್ರುಷ್ಟ್ಯಾದಿಕಂ ಬುಧಃ ।
ಶಂಕರಂ ಸಂಸ್ಮರಂಶ್ಚಿತ್ತೇ ಸಂನ್ಯಸೇಚ್ಚ ವಿಮತ್ಸರಃ ॥ ೬೦ ॥

ಪ್ರಣವಸ್ಯ ಋಷಿರ್ಬ್ರಹ್ಮಾ ದೇವಿ ಗಾಯತ್ರಮೀರಿತಂ ।
ಛಂದೋಽತ್ರ ದೇವತಾಹಂ ವೈ ಪರಮಾತ್ಮಾ ಸದಾಶಿವಃ ॥ ೬೧ ॥

---

ಕೆಳಕ್ಕೆ ಇಳಿದು ತನ್ನ ಮನಸ್ಸನ್ನು ಪರಮಾತ್ಮನಲ್ಲಿ ಇರಿಸಿದ ನಂತರ ಒಂದೇ ಸಮನಾದ ಸ್ಮೃತಿಯಿಂದ ಹಿಂದೆ ಹೇಳಿದ ಯಂತ್ರದಲ್ಲಿ ಶಾಸ್ತ್ರಕ್ಕನುಸಾರವಾಗಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು.

೫೯. ಪ್ರಾಣಪ್ರತಿಷ್ಠೆಯನ್ನು ಮಾಡಿದನಂತರ ಆ ಯೋಗಿಯು ಏಕಾಗ್ರಮನಸ್ಸಿನಿಂದ ಮಾತೃಕಾವರ್ಣಗಳನ್ನು ವಿಮರ್ಶೆಮಾಡಿಕೊಳ್ಳಬೇಕು. ಅನಂತರ ಮಾತೃಕಾವರ್ಣಗಳಿಗೆ ಪ್ರಣವವನ್ನು ಸೇರಿಸಿ ಎಂದರೆ ಓಂಕಾರಪೂರ್ವಕವಾಗಿ ಹೊರಗಡೆಯಲ್ಲಿ ಎಂದರೆ ಬಹಿರ್ಮಾತೃಕಾನ್ಯಾಸವನ್ನೂ ನ್ಯಾಸಮಾಡಬೇಕು.

೬೦. ಆ ಯೋಗಿಯು ಮತ್ತೆ ಪ್ರಾಣವಾಯುವನ್ನೂ ದೃಷ್ಟಿಯನ್ನೂ ಸರಿಯಾಗಿ ತಡೆದು ನಿಲ್ಲಿಸಿಕೊಂಡು ಶಂಕರನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಯಾವವಿಧವಾದ ಕಾಮಕ್ರೋಧಗಳಿಗೂ ಈಡಾಗದೇ ಹಿಂದಿನಂತೆಯೇ ಅಮೃತಧಾರೆಯು ಉಂಟಾಗುವಂತೆ ನ್ಯಾಸಮಾಡಬೇಕು.

೬೧-೬೨. ಪ್ರಣವಮಂತ್ರಕ್ಕೆ ಬ್ರಹ್ಮನೇ ಋಷಿಯು. ದೇವೀಗಾಯತ್ರಿಯು ಛಂದಸ್ಸು. ಪರಮಾತ್ಮನಾದ ಸದಾಶಿವನಾದ ನಾನೇ ದೇವತೆಯು. ಅಕಾರವೇಬೀಜವು.

ಅಕಾರೋ ಬೀಜಮಾಖ್ಯಾತಮುಕಾರಃ ಶಕ್ತಿರುಚ್ಯತೇ ।
ಮಕಾರಃ ಕೀಲಕಂ ಪ್ರೋಕ್ತಂ ಮೋಕ್ಷಾರ್ಥೇ ವಿನಿಯುಜ್ಯತೇ ॥ ೬೨ ॥

ಅಂಗುಷ್ಠದ್ವಯಮಾರಭ್ಯ ತಲಾಂತಂ ಪರಿಮಾರ್ಜಯೇತ್ ।
ಓಮಿತ್ಯುಕ್ತ್ವಾಥ ದೇವೇಶಿ ಕರನ್ಯಾಸಂ ಸಮಾರಭೇತ್ ॥ ೬೩ ॥

ದಕ್ಷಹಸ್ತಸ್ಥಿತಾಂಗುಷ್ಠಂ ಸಮಾರಭ್ಯ ಯಥಾಕ್ರಮಂ ।
ವಾಮಹಸ್ತಕನಿಷ್ಠಾಂತಂ ವಿನ್ಯಸೇತ್ಪೂರ್ವವತ್ಕ್ರಮಾತ್ ॥ ೬೪ ॥

ಅಕಾರಮುಪ್ಯುಕಾರಂ ಚ ಮಕಾರಂ ಬಿಂದುಸಂಯುತಂ ।
ನಮೋಂತಂ ಪ್ರೋಚ್ಯ ಸರ್ವತ್ರ ಹೃದಯಾದೌ ನ್ಯಸೇದಥ ॥ ೬೫ ॥

ಅಕಾರಂ ಪೂರ್ವಮುದ್ಧೃತ್ಯ ಬ್ರಹ್ಮಾತ್ಮಾನಮಥಾಚರೇತ್ ।
ಚೇಂತಂ ನಮೋಂತಂ ಹೃದಯೇ ವಿನಿಯುಜ್ಯಾತ್ತಥಾ ಪುನಃ ॥ ೬೬ ॥

---

ಉಕಾರವೇ ಶಕ್ತಿಯು. ಮಕಾರವು ಕೀಲಕವು. ಮೋಕ್ಷವನ್ನು ಪಡೆವುದೇ ಇದರ ಪ್ರಯೋಜನವು.

೬೩-೬೪. ಎರಡು ಅಂಗುಷ್ಠಗಳನ್ನೂ ಪ್ರಾರಂಭಿಸಿ ಎರಡು ಅಂಗಯ್ಯಿನ ಪ್ರದೇಶದ ಕೊನೆಯುವರಿಗೂ, ಮಾರ್ಜನೆಯನ್ನು ಮಾಡತಕ್ಕದ್ದು. ಎಲೈ ದೇವೇಶಿಯೇ ಕೇಳು, ಓಂಕಾರಪೂರ್ವಕವಾಗಿ ಕರನ್ಯಾಸವನ್ನು ಪ್ರಾರಂಭಿಸಬೇಕು. ಬಲಗಡೆಯ ಕೈಯ್ಯಿನ ಹೆಬ್ಬೆಟ್ಟನ್ನು ಪ್ರಾರಂಭಿಸಿಕೊಂಡು ಕ್ರಮವಾಗಿ ಎಡಗಡೆಯ ಕೈಯ್ಯಿನ ಕನಿಷ್ಠಿಕಾ ಬೆರಳಿನ ಪರ್ಯಂತವಾಗಿಯೂ ಕ್ರಮವಾಗಿ ಹಿಂದಿನಂತೆಯೇ ನ್ಯಾಸವನ್ನು ಆಚರಿಸಬೇಕು.

೬೫. ಅನಂತರದಲ್ಲಿ ಅಕಾರವನ್ನೂ, ಉಕಾರವನ್ನೂ, ಮಕಾರವನ್ನೂ ಬಿಂದುವಿನೊಡನೆ ನಮಃ ಎಂಬುದು ಕೊನೆಗೆ ಬರುವಂತೆ ಹೇಳುತ್ತಾ ಹೃದಯವೇ ಮೊದಲಾದ ಎಲ್ಲಾ ಕಡೆಗಳಲ್ಲಿಯೂ, ನ್ಯಾಸವನ್ನು ಮಾಡಬೇಕು. ಎಂದರೆ ಓಂ, ಅಂ ಅಂಗುಷ್ಠಾಭ್ಯಾಂ ನಮಃ। ಓಂ, ಉಂ ತರ್ಜನೀಭ್ಯಾಂ ನಮಃ। ಓಂ, ಮಂ ಮಧ್ಯಮಾಭ್ಯಾಂ ನಮಃ ಇತ್ಯಾದಿ.

೬೬-೬೭. ಅಕಾರವನ್ನು ಮೊದಲು ಹೇಳಿ ಬ್ರಹ್ಮಾತ್ಮಾನಂ ಎಂಬುದನ್ನು ಹೇಳಿ ಚತುರ್ಥ್ಯಂತವಾಗಿ ನಮಃ ಎಂಬುದು ಕೊನೆಗೆ ಬರುವಂತೆ ಹೃದಯದಲ್ಲಿ ನ್ಯಾಸ

ಉಕಾರಂ ವಿಷ್ಣುಸಹಿತಂ ಶಿರೋದೇಶೇ ಪ್ರವಿನ್ಯಸೇತ್ ।
ಮಕಾರಂ ರುದ್ರಸಹಿತಂ ಶಿಖಾಯಾಂ ತು ಪ್ರವಿನ್ಯಸೇತ್ ॥ ೬೭ ॥

ಏವಮುಕ್ತ್ವಾ ಮುನಿರ್ಮಂತ್ರೀ ಕವಚಂ ನೇತ್ರಮಸ್ತಕೇ ।
ವಿನ್ಯಸೇದ್ದೇವದೇವೇಶಿ ಸಾವಧಾನೇನ ಚೇತಸಾ ॥ ೬೮ ॥

ಅಂಗವಕ್ತ್ರಕಲಾಭೇದಾತ್ಪಂಚ ಬ್ರಹ್ಮಾಣಿ ವಿನ್ಯಸೇತ್ ।
ಶಿರೋವದನಹೃದ್ಗುಹ್ಯಪಾದೇಷ್ವೇತಾನಿ ವಿನ್ಯಸೇತ್ ॥ ೬೯ ॥

ಈಶಾನಸ್ಯ ಕಲಾಃ ಪಂಚ ಪಂಚಸ್ವೇತೇಷು ಚ ಕ್ರಮಾತ್ ।
ತತಶ್ಚತುರ್ಷು ವಕ್ತ್ರೇಷು ಪುರುಷಸ್ಯ ಕಲಾ ಅಪಿ ॥ ೭೦ ॥

---

ಮಾಡಿ ವಿನಿಯೋಗವನ್ನು ಮಾಡಬೇಕು. ವಿಷ್ಣುಪದವನ್ನು ಚತುರ್ಥ್ಯಂತವಾಗಿ ನಮಃ ಎಂಬುದು ಕೊನೆಗೆ ಬರುವಂತೆ ಉಕಾರವನ್ನು ಬಿಂದುಸಹಿತವಾಗಿ ಉಚ್ಚರಿಸಿ ತಲೆಯಪ್ರದೇಶದಲ್ಲಿ ನ್ಯಾಸವನ್ನು ಮಾಡಬೇಕು. ರುದ್ರನಿಂದ ಕೂಡಿರುವ ಮಕಾರವನ್ನು ಶಿಖಾಪ್ರದೇಶದಲ್ಲಿ ನ್ಯಾಸಮಾಡಬೇಕು. ಎಂದರೆ ಓಂ, ಅಂ ಬ್ರಹ್ಮಾತ್ಮನೇ ಹೃದಯಾಯ ನಮಃ । ಓಂ, ಉಂ ವಿಷ್ಣ್ವಾತ್ಮನೇ ಶಿರಸೇ ಸ್ವಾಹಾ । ಓಂ, ಮಂ ರುದ್ರಾತ್ಮನೇ ಶಿಖಾಯೈವಷಟ್ ಇತ್ಯಾದಿ.

೬೮. ಎಲೈ ದೇವೇಶಿಯೇ ಕೇಳು ;—ಮಂತ್ರವನ್ನು ಸಾಧನೆಮಾಡುವ ಉಪಾಸಕನು ತನ್ನ ಕಣ್ಣು, ತಲೆ ಇವುಗಳಲ್ಲಿ ಕವಚಮಂತ್ರವನ್ನು ಹೇಳುತ್ತಾ ಬಹಳ ಜಾಗರೂಕವಾದ ಮನಸ್ಸಿನಿಂದ ನ್ಯಾಸಮಾಡಿಕೊಳ್ಳಬೇಕು.

೬೯. ಆ ಉಪಾಸಕನು, ಅಂಗ, ಮುಖ, ಕಲಾ ಇವುಗಳ ಭೇದದಿಂದ ತಲೆ, ಮುಖ, ಹೃದಯ, ಗುಹ್ಯ, ಪಾದ ಇವುಗಳಲ್ಲಿ ಪಂಚಬ್ರಹ್ಮ ಮೂರ್ತಿಗಳ ಬೀಜಾಕ್ಷರಗಳನ್ನೂ ನ್ಯಾಸಮಾಡಿಕೊಳ್ಳಬೇಕು.

೭೦. ಈಶಾನಮೂರ್ತಿಯ ಐದು ಕಲೆಗಳನ್ನೂ ಈ ಐದು ಪ್ರದೇಶಗಳಲ್ಲಿ ಕ್ರಮವಾಗಿ ನ್ಯಾಸಮಾಡಿಕೊಳ್ಳಬೇಕು. ಅನಂತರ ಪೂರ್ವವೇ ಮೊದಲಾಗಿ ದಿಕ್ಕುಗಳ ಕ್ರಮವನ್ನು ಅನುಸರಿಸಿ ತತ್ಪುರುಷಮೂರ್ತಿಯ ನಾಲ್ಕು ಕಲೆಗಳನ್ನೂ ನ್ಯಾಸಮಾಡಿಕೊಳ್ಳಬೇಕು.

ಚತಸ್ರಃ ಪ್ರಣಿಧಾತವ್ಯಾಃ ಪೂರ್ವಾದಿಕ್ರಮಯೋಗತಃ ।
ಹೃತ್ಕಂಠಾಂಸೇಷು ನಾಭೌ ಚ ಕುಕ್ಷೌ ಪೃಷ್ಠೇ ಚ ವಕ್ಷಸಿ ॥ ೩೧ ॥

ಅಘೋರಸ್ಯ ಕಲಾಶ್ಚಾಷ್ಟೌ ಪೂಜನೀಯಾ ಯಥಾಕ್ರಮಂ ।
ಪಶ್ಚಾತ್ತ್ರಯೋದಶಕಲಾಃ ಪಾಯುಮೇಢ್ರೋರುಜಾನುಷು ॥ ೩೨ ॥

ಜಂಘಾಸ್ಫಿಕ್ಕಟಿಪಾರ್ಶ್ವೇಷು ವಾಮದೇವಸ್ಯ ಭಾವಯೇತ್ ।
ಸದ್ಯಸ್ಯಾಪಿ ಕಲಾಚಾಷ್ಟೌ ನೇತ್ರೇಷು ಚ ಯಥಾಕ್ರಮಂ ॥ ೩೩ ॥

ಕೀರ್ತಿತಾಸ್ತಾಃ ಕಲಾಶ್ಚೈವಂ ಪಾದಯೋರಪಿ ಹಸ್ತಯೋಃ ।
ಪ್ರಾಣೇ ಶಿರಸಿ ಬಾಹ್ವೋಶ್ಚ ಕಲ್ಪಯೇತ್ಕಲ್ಪವಿತ್ತಮಃ ॥ ೩೪ ॥

ಅಷ್ಟತ್ರಿಂಶತ್ಕಲಾನ್ಯಾಸಮೇವಂ ಕೃತ್ವಾ ತು ಸರ್ವಶಃ ।
ಪಶ್ಚಾತ್ಪ್ರಣವವಿದ್ಧೀಮಾನ್ಪ್ರಣವನ್ಯಾಸಮಾಚರೇತ್ ॥ ೩೫ ॥

---

೩೧-೩೩. ಅಘೋರಮೂರ್ತಿಯ ಎಂಟು ಕಲೆಗಳನ್ನು, ಹೃದಯ, ಕಂಠ, ಎರಡು ಹೆಗಲು ನಾಭಿ, ಹೊಟ್ಟೆ, ಬೆನ್ನು, ಎದೆ ಇವುಗಳಲ್ಲಿ ನ್ಯಾಸಮಾಡಿಕೊಂಡು ಅನಂತರ ವಾಮದೇವಮೂರ್ತಿಯ ಹದಿಮೂರು ಕಲೆಗಳನ್ನು, ಪಾಯು, ಮೇಢ್ರ, ಎರಡು ಊರುಗಳು, ಎರಡು ಜಾನುಗಳು, ಎರಡು ಜಂಘಗಳು, ಎರಡು ಸ್ಫಿಕ್ಪ್ರದೇಶಗಳು ಕಟಿ ಎರಡು ಪಾರ್ಶ್ವಗಳು ಇವುಗಳಲ್ಲಿ ನ್ಯಾಸಮಾಡಿಕೊಂಡು ವಾಮದೇವಮೂರ್ತಿಯ ಭಾವನೆಯನ್ನೂ ಮಾಡಬೇಕು. ಸದ್ಯೋಜಾತಮೂರ್ತಿಯ ಎಂಟು ಕಲೆಗಳನ್ನೂ ಕಣ್ಣುಗಳು, ಪಾದಗಳು, ಕೈಯ್ಯಿಗಳು, ಪ್ರಾಣ, ತಲೆ, ಬಾಹುಗಳು ಇವುಗಳಲ್ಲಿ ಕ್ರಮವಾಗಿ ನ್ಯಾಸ ಮಾಡಿಕೊಂಡು ಮೂರ್ತಿಭಾವನೆಯನ್ನು ಮಾಡಬೇಕು.

೩೪-೩೫. ಪಂಚಬ್ರಹ್ಮಮೂರ್ತಿಗಳ ಕಲೆಗಳನ್ನೆಲ್ಲವನ್ನೂ ಹೇಳಿರುವೆನು ಮಂತ್ರದ ಕಲ್ಪವನ್ನು ಚೆನ್ನಾಗಿ ತಿಳಿದವನು ಈ ಮೂವತ್ತೆಂಟು ಕಲೆಗಳನ್ನೂ ಸರಿಯಾಗಿ ಈ ಪ್ರಕಾರದಿಂದ ನ್ಯಾಸಮಾಡಿಕೊಂಡು ಅನಂತರ ಪ್ರಣವಮಂತ್ರದ ನ್ಯಾಸವನ್ನು ಮಾಡಿಕೊಳ್ಳಲು ಪ್ರಾರಂಭಿಸಬೇಕು.

**ಬಾಹುದ್ವಯೇ ಕೂರ್ಪರಯೋಸ್ತಥಾ ಚ ಮಣಿಬಂಧಯೋಃ ।**
**ಪಾರ್ಶ್ವತೋದರಜಂಘೇಷು ಪಾದಯೋಃ ಪೃಷ್ಠತಸ್ತಥಾ ॥ ೭೬ ॥**

**ಇತ್ಥಂ ಪ್ರಣವವಿನ್ಯಾಸಂ ಕೃತ್ವಾ ನ್ಯಾಸವಿಚಕ್ಷಣಃ ।**
**ಹಂಸನ್ಯಾಸಂ ಪ್ರಕುರ್ವೀತ ಪರಮಾತ್ಮವಿಬೋಧಿನಿ ॥ ೭೭ ॥**

**ಇತಿ ಶ್ರೀ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ ಸಂನ್ಯಾಸಪದ್ಧತೌ ನ್ಯಾಸವರ್ಣನಂ ನಾಮ ಷಷ್ಠೋಽಧ್ಯಾಯಃ**



೭೬. ಎರಡು ತೋಳು, ಮುಂಡಿಗಳೆರಡು, ಮಣಿಬಂಧಪ್ರದೇಶ, ಪಾರ್ಶ್ವಗಳು, ಹೊಟ್ಟೆ, ಜಂಘೆಗಳು, ಪಾದಗಳು, ಬೆನ್ನಿನಪ್ರದೇಶ ಈ ಪ್ರದೇಶಗಳಲ್ಲಿ ಪ್ರಣವ ಮಂತ್ರವನ್ನು ನ್ಯಾಸಮಾಡಿಕೊಳ್ಳಬೇಕು.

೭೭. ನ್ಯಾಸವನ್ನು ಮಾಡಿಕೊಳ್ಳುವುದರಲ್ಲಿ ಬುದ್ಧಿವಂತನಾದವನು ಈ ಪ್ರಕಾರವಾಗಿ ಪ್ರಣವಮಂತ್ರದ ನ್ಯಾಸವನ್ನು ಮಾಡಿಕೊಂಡು ಪರಮಾತ್ಮನ ಸಂಬಂಧವಾದ ಅತಿಶಯವಾದ ಭಾವನೆಯು ಉಂಟಾಗುವುದಕ್ಕಾಗಿ ಹಂಸಮಂತ್ರದ ನ್ಯಾಸವನ್ನು ಮಾಡಿಕೊಳ್ಳಬೇಕು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸ ಸಂಹಿತೆಯಲ್ಲಿ ನ್ಯಾಸವರ್ಣನವೆಂಬ ಆರನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೈಲಾಸಸಂಹಿತಾಯಾಂ

## ಸಪ್ತಮೋಽಧ್ಯಾಯಃ



॥ ಈಶ್ವರ ಉವಾಚ ॥

ಸ್ವವಾಮೇ ಚತುರಸ್ರಂ ತು ಮಂಡಲಂ ಪರಿಕಲ್ಪಯೇತ್ ।
ಓಮಿತ್ಯಭ್ಯರ್ಚ್ಯ ತಸ್ಮಿಂಸ್ತು ಶಂಖಮಸ್ತ್ರೋಪಶೋಭಿತಂ ॥ ೧ ॥

ಸ್ಥಾಪ್ಯ ಸಾಧಾರಕಂ ತಂ ತು ಪ್ರಣವೇನಾರ್ಚಯೇತ್ತತಃ ।
ಆಪೂರ್ಯ ಶುದ್ಧತೋಯೇನ ಚಂದನಾದಿಸುಗಂಧಿನಾ ॥ ೨ ॥

---

## ಏಳನೆಯ ಅಧ್ಯಾಯವು

೧–೪. ಈಶ್ವರನು ಹೇಳಿದನು:—ಸಾಧಕನು ತನ್ನ ಎಡಗಡೆಯಲ್ಲಿ ಚೌಕನಾಗಿರುವ ಮಂಡಲವನ್ನು ಮಾಡಿ ಅದರಲ್ಲಿ ಶಂಖವನ್ನು ಅಸ್ತ್ರಮಂತ್ರದಿಂದಿರುವ ಓಂಕಾರದಿಂದ ಪೂಜಿಸಿ, ಅದರಪೀಠದೊಡನೆ ಅದನ್ನು ಅಲ್ಲಿರಿಸಿ, ಪ್ರಣವಮಂತ್ರದಿಂದ ಗಂಧವೇ ಮೊದಲಾದ ಸುವಾಸನೆಯುಳ್ಳ ನೀರಿನಿಂದ ಅದನ್ನು ತುಂಬಬೇಕು. ಗಂಧ, ಹೂವು ಮೊದಲಾದುವುಗಳಿಂದ ಏಳುಸಾರಿ ಪ್ರಣವಮಂತ್ರದಿಂದ ಅಭಿಮಂತ್ರಿಸಿ

ಅಭ್ಯರ್ಚ್ಯ ಗಂಧಪುಷ್ಪಾದ್ಯೈಃ ಪ್ರಣವೇನ ಚ ಸಪ್ತಧಾ ।
ಅಭಿಮಂತ್ರ್ಯ ತತಸ್ತಸ್ಮಿನ್ಧೇನುಮುದ್ರಾಂ ಪ್ರದರ್ಶಯೇತ್ ॥ ೩ ॥

ಶಂಖಮುದ್ರಾಂ ಚ ಪುರತಶ್ಚತುರಸ್ರಂ ಪ್ರಕಲ್ಪಯೇತ್ ।
ತದಂತರೇಽರ್ಧಚಂದ್ರಂ ಚ ತ್ರಿಕೋಣಂ ಚ ತದಂತರೇ ॥ ೪ ॥

ಷಟ್ಕೋಣಂ ವೃತ್ತಮೇವೇದಂ ಮಂಡಲಂ ಪರಿಕಲ್ಪಯೇತ್ ।
ಅಭ್ಯರ್ಚ್ಯ ಗಂಧಪುಷ್ಪಾದ್ಯೈಃ ಪ್ರಣವೇನಾಥ ಮಧ್ಯತಃ ॥ ೫ ॥

ಸಾಧಾರಮರ್ಘ್ಯಪಾತ್ರಂ ಚ ಸ್ಥಾಪ್ಯ ಗಂಧಾದಿನಾರ್ಚಯೇತ್ ।
ಆಪೂರ್ಯ ಶುದ್ಧತೋಯೇನ ತಸ್ಮಿನ್ಪಾತ್ರೇ ವಿನಿಃಕ್ಷಿಪೇತ್ ॥ ೬ ॥

ಕುಶಾಗ್ರಾಣ್ಯಕ್ಷತಾಂಶ್ಚೈವ ಯವವ್ರೀಹಿತಿಲಾನಪಿ ।
ಆಜ್ಯಸಿದ್ಧಾರ್ಥಪುಷ್ಪಾಣಿ ಭಸಿತಂ ಚ ವರಾನನೇ ॥ ೭ ॥

ಸದ್ಯೋಜಾತಾದಿಭಿರ್ಮಂತ್ರೈಃ ಷಡಂಗೈಃ ಪ್ರಣವೇನ ಚ ।
ಅಭ್ಯರ್ಚ್ಯ ಗಂಧಪುಷ್ಪಾದ್ಯೈರಭಿಮಂತ್ರ್ಯ ಚ ವರ್ಮಣಾ ॥ ೮ ॥

---

ದನಂತರ ಅದರಲ್ಲಿ ಧೇನುಮುದ್ರೆಯನ್ನೂ ಮತ್ತೂ ಶಂಖಮುದ್ರೆಯನ್ನೂ ತೋರಿಸ ಬೇಕು. ಅನಂತರ ಅದರ ಮುಂದುಗಡೆಯಲ್ಲಿ, ಚೌಕವನ್ನೂ, ಅದರ ಮಧ್ಯದಲ್ಲಿ ಅರ್ಧಚಂದ್ರಮಂಡಲವನ್ನೂ ಅದರಮಧ್ಯದಲ್ಲಿ ತ್ರಿಕೋಣವನ್ನೂ, ಆಮೇಲೆ ಷಟ್ಕೋಣವನ್ನೂ ವೃತ್ತವನ್ನೂ ಒಳಗೊಂಡಿರುವ ಮಂಡಲವನ್ನೂ ಮಾಡಬೇಕು.

೫-೭. ಈ ಮಂಡಲದ ಮಧ್ಯದಲ್ಲಿ ಗಂಧ. ಹೂವು ಇವುಗಳಿಂದ ಪ್ರಣವ ಮಂತ್ರದಿಂದ ಪೂಜೆಯನ್ನು ಮಾಡಿ ಅದರ ಮಧ್ಯದಲ್ಲಿ ಪೀಠದೊಡನೆ ಇರುವ ಅರ್ಘ್ಯ ಪಾತ್ರೆಯನ್ನಿರಿಸಿ ಗಂಧಾದಿಗಳಿಂದ ಪೂಜಿಸಿ ಪರಿಶುದ್ಧವಾದ ನೀರನ್ನು ಆ ಪಾತ್ರೆಯಲ್ಲಿ ಹಾಕಿದನಂತರ ಆ ಪಾತ್ರೆಯಲ್ಲಿ ದರ್ಭೆಯ ತುದಿಯ ಚೂರುಗಳು, ಮಂತ್ರಾಕ್ಷತೆ, ಯವಧಾನ್ಯ, ಭತ್ತ, ಎಳ್ಳು, ತುಪ್ಪ, ಪರಿಶುದ್ಧವಾದ ಹೂವುಗಳು ಭಸ್ಮ ಇವುಗಳನ್ನು ಹಾಕಬೇಕು.

೮-೯. ಸದ್ಯೋಜಾತವೇ ಮೊದಲಾದ ಮಂತ್ರಗಳಿಂದಲೂ, ಆರು ಅಂಗಮಂತ್ರಗಳಿಂದಲೂ, ಪ್ರಣವಮಂತ್ರದಿಂದಲೂ, ಅಭಿಮಂತ್ರಿಸಿ ಗಂಧಪುಷ್ಪಾದಿಗಳಿಂದ

ಅವಗುಂಠ್ಯಾಸ್ತ್ರಮಂತ್ರೇಣ ಸಂರಕ್ಷಾರ್ಥಂ ಪ್ರದರ್ಶಯೇತ್ ।
ಧೇನುಮುದ್ರಾಂ ಚ ತೇನೈವ ಪ್ರೋಕ್ಷಯೇದಸ್ತ್ರಮಂತ್ರತಃ ॥ ೯ ॥

ಸ್ವಾತ್ಮಾನಂ ಗಂಧಪುಷ್ಪಾದಿಪೂಜೋಪಕರಣಾನ್ಯಪಿ ।
ಪದ್ಮಸ್ಯೇಶಾನದಿಕ್ಪದ್ಮಂ ಪ್ರಣವೋಚ್ಚಾರಪೂರ್ವಕಂ ॥ ೧೦ ॥

ಗುರ್ವಾಸನಾಯ ನಮ ಇತ್ಯಾಸನಂ ಪರಿಕಲ್ಪಯೇತ್ ।
ಗುರೋರ್ಮೂರ್ತಿಂ ಚ ತತ್ರೈವ ಕಲ್ಪಯೇದುಪದೇಶತಃ ॥ ೧೧ ॥

ಪ್ರಣವಂ ಗುಂ ಗುರುಭ್ಯೋಂತೇ ನಮಃ ಪ್ರೋಚ್ಯಾಪಿ ದೇಶಿಕಂ ।
ಸಮಾವಾಹ್ಯ ತತೋ ಧ್ಯಾಯೇದ್ದಕ್ಷಿಣಾಭಿಮುಖಂ ಸ್ಥಿತಂ ॥ ೧೨ ॥

ಸುಪ್ರಸನ್ನಮುಖಂ ಸೌಮ್ಯಂ ಶುದ್ಧಸ್ಫಟಿಕನಿರ್ಮಲಂ ।
ವರದಾಭಯಹಸ್ತಂ ಚ ದ್ವಿನೇತ್ರಂ ಶಿವವಿಗ್ರಹಂ ॥ ೧೩ ॥

---

ಪೂಜಿಸಬೇಕು. ಬಳಿಕ ಕವಚಮಂತ್ರದಿಂದ ಅವಗುಂಠನೆಯನ್ನೂ, ಅಸ್ತ್ರಮಂತ್ರದಿಂದ ಸಂರಕ್ಷಣೆಯನ್ನೂ ಮಾಡಿ, ಧೇನು ಮುದ್ರೆಯನ್ನು ತೋರಿಸಿ, ಅಸ್ತ್ರಮಂತ್ರದಿಂದ ಪ್ರೋಕ್ಷಣೆಯನ್ನು ಮಾಡಬೇಕು.

೧೦-೧೧. ಇದೇ ರೀತಿಯಾಗಿ ತನ್ನನ್ನೂ ಗಂಧಪುಷ್ಪಾದಿ ಪೂಜಾದ್ರವ್ಯಗಳನ್ನೂ ಪ್ರೋಕ್ಷಿಸಬೇಕು. ಪದ್ಮದ ಈಶಾನ್ಯದಿಕ್ಕಿನ ಪದ್ಮವನ್ನುಪ್ರಣವಮಂತ್ರವನ್ನು ಉಚ್ಚಾರಣೆಮಾಡುತ್ತಾ ಗುರ್ವಾಸನಯನಮಃ ಎಂದು ಹೇಳಿ ಆಸನವನ್ನು ಗುರುವಿಗಾಗಿ ಸಿದ್ಧಪಡಿಸಿ ಅದರಲ್ಲಿ ಉಪದೇಶಕ್ರಮಾನುಸಾರವಾಗಿ ಗುರುಮೂರ್ತಿಯನ್ನು ಸ್ಥಾಪಿಸಬೇಕು.

೧೨-೧೩. ಪ್ರಣವಪೂರ್ವಕವಾಗಿ ಗುಂ ಗುರುಭ್ಯೋನಮಃ ಎಂದು, ಮಂತ್ರವನ್ನು ಹೇಳಿ ಗುರುವನ್ನು ಆವಾಹನೆ ಮಾಡಿದನಂತರ ದಕ್ಷಿಣಾಭಿಮುಖದಿಂದಿರುವ ಶಿವನ ಆಕಾರವನ್ನು ಧ್ಯಾನಮಾಡಬೇಕು. ಆ ಶಿವನು ಪ್ರಸನ್ನಮುಖವುಳ್ಳವನಾಗಿಯೂ ಮೃದುವಾದ ಸ್ವಭಾವವುಳ್ಳವನಾಗಿಯೂ, ಶುದ್ಧಸ್ಫಟಿಕದಂತೆ ನಿರ್ಮಲನಾಗಿಯೂ, ವರದ, ಅಭಯ, ಹಸ್ತಗಳನ್ನು ಧರಿಸಿರುವಂತೆ ಶಿವನ ಆಕಾರವನ್ನು ಧ್ಯಾನಮಾಡಿ ಹೂವೇ ಮೊದಲಾದುವುಗಳಿಂದ ಕ್ರಮವಾಗಿ ಪೂಜೆಯನ್ನು ಮಾಡಬೇಕು.

ಏವಂ ಧ್ಯಾತ್ವಾ ಯಜೇದ್ಗಂಧಪುಷ್ಪಾದಿಭಿರನುಕ್ರಮಾತ್ |
ಪದ್ಮಸ್ಯ ನೈರ್ಋತೇ ಪದ್ಮೇ ಗಣಪತ್ಯಾಸನೋಪರಿ ॥ ೧೪ ॥

ಮೂರ್ತಿಂ ಪ್ರಕಲ್ಪ್ಯ ತತ್ರೈವ ಗಣಾನಾಂ ತ್ವೇತಿ ಮಂತ್ರತಃ |
ಸಮಾವಾಹ್ಯ ತತೋ ದೇವಂ ಧ್ಯಾಯೇದೇಕಾಗ್ರಮಾನಸಃ ॥ ೧೫ ॥

ರಕ್ತವರ್ಣಂ ಮಹಾಕಾಯಂ ಸರ್ವಾಭರಣಭೂಷಿತಂ |
ಪಾಶಾಂಕುಶೇಷ್ಟದಶನಾನ್ದಧಾನಂ ಕರಪಂಕಜೈಃ ॥ ೧೬ ॥

ಗಜಾನನಂ ಪ್ರಭುಂ ಸರ್ವವಿಘ್ನೌಘಘ್ನಮುಪಾಸಿತುಃ |
ಏವಂ ಧ್ಯಾತ್ವಾ ಯಜೇದ್ಗಂಧಪುಷ್ಪಾದ್ಯೈರುಪಚಾರಕೈಃ ॥ ೧೭ ॥

ಕದಳೀನಾರಿಕೇಳಾಮ್ರಫಲಲಡ್ಡುಕಪೂರ್ವಕಂ |
ನೈವೇದ್ಯಂ ಚ ಸಮರ್ಪ್ಯಾಥ ನಮಸ್ಕುರ್ಯಾದ್ಗಜಾನನಂ ॥ ೧೮ ॥

ಪದ್ಮಸ್ಯ ವಾಯುದಿಕ್ಪದ್ಮೇ ಸಂಕಲ್ಪ್ಯ ಸ್ಕಾನ್ದಮಾನಸಂ |
ಸ್ಕಂದಮೂರ್ತಿಂ ಪ್ರಕಲ್ಪ್ಯಾಥ ಸ್ಕಂದಮಾವಾಹಯೇದ್ಬುಧಃ ॥ ೧೯ ॥

---

೧೪-೧೫. ಪದ್ಮದ ನೈರುತ್ಯಪ್ರದೇಶದಲ್ಲಿ ಗಣಪತಿಯ ಆಸನದಮೇಲೆ ಗಣಪತಿಯ ವಿಗ್ರಹವನ್ನಿರಿಸಿ ಅದರಲ್ಲೇ ಗಣಾನಾಂತ್ವಾ ಎಂಬ ಮಂತ್ರದಿಂದ ಆವಾಹನೆಯನ್ನು ಮಾಡಿದನಂತರ ಏಕಾಗ್ರವಾದ ಮನಸ್ಸಿನಿಂದ ಧ್ಯಾನವನ್ನು ಮಾಡಬೇಕು.

೧೬-೧೮. ಆ ಗಣಪತಿಯ ಶರೀರವು ರಕ್ತವರ್ಣದ್ದಾಗಿಯೂ ದೊಡ್ಡದಾಗಿಯೂ ಇರುವುದು. ಅವನು ಸರ್ವಾಲಂಕಾರಭೂಷಿತನಾಗಿ ಕೈಗಳಲ್ಲಿ ಪಾಶ, ಅಂಕುಶ, ಇಷ್ಟಪ್ರದಮುದ್ರೆ, ದನ್ತ ಇವುಗಳನ್ನು ಹಿಡಿದಿರುವನು. ಪ್ರಭುವಾದ, ಆ ಗಣಪತಿಯು ಉಪಾಸಕನ ವಿಘ್ನಗಳೆಲ್ಲವನ್ನೂ ನಾಶಪಡಿಸುವನು. ಇಂತಹ ಗಣಪತಿಯನ್ನು ಧ್ಯಾನ ಮಾಡಿದನಂತರ ಗಂಧ, ಹೂವು, ಇವುಗಳೇ ಮೊದಲಾದ ಉಪಚಾರಗಳಿಂದಲೂ, ಬಾಳೇಹಣ್ಣು, ತೆಂಗಿನಕಾಯಿ, ಮಾವಿನಹಣ್ಣು, ಲಡ್ಡುಕ ಮೊದಲಾದ ನೈವೇದ್ಯವನ್ನು ಸಮರ್ಪಿಸಿ ನಮಸ್ಕಾರಮಾಡಬೇಕು.

೧೯. ಪದ್ಮದ ವಾಯುವ್ಯದಿಕ್ಕಿನಲ್ಲಿರುವ ಪದ್ಮದಲ್ಲಿ ಷಣ್ಮುಖನಿಗೆ ಆಸನವನ್ನು ಸ್ಥಾಪಿಸಿ ಅದರಲ್ಲಿ ಷಣ್ಮುಖನ ವಿಗ್ರಹವನ್ನಿರಿಸಿ ಆವಾಹನೆಯನ್ನು ಮಾಡಬೇಕು.

ಉಚ್ಚಾರ್ಯ ಸ್ಕಂದಗಾಯತ್ರೀಂ ಧ್ಯಾಯೇದಥ ಕುಮಾರಕಂ ।
ಉದ್ಯದಾದಿತ್ಯಸಂಕಾಶಂ ಮಯೂರವರವಾಹನಂ ॥ ೨೦ ॥

ಚತುರ್ಭುಜಮುದಾರಾಂಗಂ ಮುಕಟಾದಿವಿಭೂಷಿತಂ ।
ವರದಾಭಯಹಸ್ತಂ ಚ ಶಕ್ತಿಕುಕ್ಕುಟಧಾರಿಣಂ ॥ ೨೧ ॥

ಏವಂ ಧ್ಯಾತ್ವಾಥ ಗಂಧಾದ್ಯೈರುಪಚಾರೈರನುಕ್ರಮಾತ್ ।
ಸಂಪೂಜ್ಯ ಪೂರ್ವದ್ವಾರಸ್ಯ ದಕ್ಷಶಾಖಾಮುಪಾಶ್ರಿತಂ ॥ ೨೨ ॥

ಅನ್ತಃಪುರಾಧಿಪಂ ಸಾಕ್ಷಾನ್ನಂದಿನಂ ಸಮ್ಯಗರ್ಚಯೇತ್ ।
ಚಾಮೀಕರಾಚಲಪ್ರಖ್ಯಂ ಸರ್ವಾಭರಣಭೂಷಿತಂ ॥ ೨೩ ॥

೨೦-೨೧. ಷಣ್ಮುಖನ ಗಾಯತ್ರೀ ಮಂತ್ರವನ್ನು ಎಂದರೆ-ತತ್ಪುರುಷಾಯ ವಿದ್ಮಹೇ ಮಹಾಸೇನಾಯ ಧೀಮಹಿ। ತನ್ನಃ ಷಣ್ಮುಖಃ ಪ್ರಚೋದಯಾತ್ ॥ ಎಂದು ಹೇಳಿ ಷಣ್ಮುಖನನ್ನು ಧ್ಯಾನಮಾಡಬೇಕು. ಆ ಷಣ್ಮುಖನು ಉದಯ ಕಾಲದಲ್ಲಿರುವ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನಾಗಿ ನವಿಲಿನಮೇಲೆ ಕುಳಿತಿರುವನು ಅವನಿಗೆ ನಾಲ್ಕು ಕೈಗಳಿರುವವು. ವಿಸ್ತಾರವಾದ ಅವಯವಗಳಿಂದಲೂ, ಕಿರೀಟವೇ ಮೊದಲಾದ ಅಲಂಕಾರಗಳಿಂದಲೂ ಶೋಭಿಸುತ್ತಾ ಕೈಗಳಲ್ಲಿ ವರದ, ಅಭಯ ಶಕ್ತಿ, ಕುಕ್ಕುಟಗಳನ್ನು ಧರಿಸಿಕೊಂಡಿರುವಂತೆ ಧ್ಯಾನವನ್ನು ಮಾಡಿ ಗಂಧವೇ ಮೊದಲಾದ ಉಪಚಾರ ದ್ರವ್ಯಗಳಿಂದ ಪೂಜೆಯನ್ನು ಮಾಡಬೇಕು.

೨೨-೨೪. ಬಳಿಕ ನಂದಿಯನ್ನು ಧ್ಯಾನಮಾಡಬೇಕು. ಆ ನಂದಿಯು ಪೂರ್ವದಿಕ್ಕಿನ ಬಾಗಿಲಿನ ಒಳಗಡೆಯ ಭಾಗವನ್ನು ಆಶ್ರಯಿಸಿಕ್ಕೊಂಡಿರುವನು. ಅಂತಃ ಪುರಕ್ಕೆ ಅಧಿಪತಿಯಾಗಿರುವನು. ಪುಟವಿಕ್ಕಿದ ಚಿನ್ನದ ಬೆಟ್ಟದಂತಿರುವ ಶರೀರದಿಂದ ಬೆಳಗುತ್ತಿರುವನು. ಸರ್ವಾಲಂಕಾರಭೂಷಿತನಾಗಿರುವನು. ಶಿರಸ್ಸಿನಲ್ಲಿರುವ ಕಿರೀಟದಲ್ಲಿ ಎಲ್ಲಾ ಆಭರಣವನ್ನೂ ಧರಿಸಿಕೊಂಡು, ಬಾಲಚಂದ್ರನು ಬೆಳಗುತ್ತಿರುವನು. ಮೂರು ಕಣ್ಣುಗಳಿರುವವು. ನಾಲ್ಕು ಕೈಗಳಲ್ಲಿ ಹೊಳೆಯುತ್ತಿರುವ ತ್ರಿಶೂಲಾ

ಬಾಲೇಂದುಮುಕುಟಂ ಸೌಮ್ಯಂ ತ್ರಿನೇತ್ರಂ ಚ ಚತುರ್ಭುಜಂ ।
ದೀಪ್ತಶೂಲಮೃಗೀಟಂಕಹೇಮವೇತ್ರಧರಂ ವಿಭುಂ ॥ ೨೪ ॥

ಚಂದ್ರಬಿಂಬಾಭವದನಂ ಹರಿವಕ್ತ್ರಮಥಾಪಿ ವಾ ।
ಉತ್ತರಸ್ಯಾಂ ತಥಾ ತಸ್ಯ ಭಾರ್ಯಾಂ ಚ ಮರುತಾಂ ಸುತಾಂ ॥ ೨೫ ॥

ಸುಯಶಾಂ ಸುವ್ರತಾಮಂಬಪಾದಮಂಡನತತ್ಪರಾಂ ।
ಸಂಪೂಜ್ಯ ವಿಧಿವದ್ಗಂಧಪುಷ್ಪಾದ್ಯೈರುಪಚಾರಕೈಃ ॥ ೨೬ ॥

ತತಸ್ಸಂಪ್ರೋಕ್ಷಯೇತ್ಪದ್ಮಂ ಸಾಸ್ತ್ರಶಂಖೋದಬಿಂದುಭಿಃ ।
ಕಲ್ಪಯೇದಾಸನಂ ಪಶ್ಚಾದಾಧಾರಾದಿ ಯಥಾಕ್ರಮಂ ॥ ೨೭ ॥

ಆಧಾರಶಕ್ತಿಂ ಕಲ್ಯಾಣೀಂ ಶ್ಯಾಮಾಂ ಧ್ಯಾಯೇದಧೋ ಭುವಿ ।
ತಸ್ಯಾಃ ಪುರಸ್ತಾದುತ್ಕಂಠಮನಂತಂ ಕುಂಡಲಾಕೃತಿಂ ॥ ೨೮ ॥

ಧವಳಂ ಪಂಚಫಣಿನಂ ಲೇಲಿಹಾನಮಿವಾಂಬರಂ ।
ತಸ್ಯೋಪರ್ಯಾಸನಂ ಭದ್ರಂ ಕಂಠೀರವಚತುಷ್ಪದಂ ॥ ೨೯ ॥

---

ಯುಧ, ಮೃಗ, ಟಂಕ, ಚಿನ್ನದ ಬೆತ್ತ ಇವುಗಳನ್ನು ಧರಿಸಿರುವನು. ಚಂದ್ರಬಿಂಬದಂತಿರುವ ಮುಖವುಳ್ಳ ಅಥವಾ ವಾನರ ಮುಖದಂತೆ ಇರುವ ಇಂತಹ ನಂದಿಯನ್ನು ಧ್ಯಾನಮಾಡಬೇಕು.

೨೫–೨೬. ನಂದಿಯನ್ನು ಪೂಜಿಸಿದ ನಂತರ ಉತ್ತರದಿಕ್ಕಿನಲ್ಲಿ ಮರುದ್ದೇವತೆಗಳಿಗೆ ಮಗಳೂ, ಜಗನ್ಮಾತೆಯಾದ ಪಾರ್ವತೀದೇವಿಯ ಪಾದಪದ್ಮಗಳನ್ನು ನಿಯಮದಿಂದ ಅಲಂಕರಿಸುವುದರಲ್ಲಿ ಆಸಕ್ತಳೂ ಆಗಿರುವ ಸುಯಶಾ ಎಂಬ ನಂದಿಯ ಹೆಂಡತಿಯನ್ನು ನಂದಿಯೊಡನೆ ಶಾಸ್ತ್ರಕ್ಕನುಸಾರವಾಗಿ ಗಂಧ, ಹೂವು ಮೊದಲಾದ ಉಪಚಾರ ದ್ರವ್ಯಗಳಿಂದ ಪೂಜೆಮಾಡಬೇಕು.

೨೭. ಬಳಿಕ ಅಸ್ತ್ರಮಂತ್ರವನ್ನು ಪಠಿಸುತ್ತಾ ಶಂಖದ ನೀರಿನಿಂದ ಪದ್ಮವನ್ನು ಪ್ರೋಕ್ಷಿಸಿ ಆಧಾರವೇ ಮೊದಲಾದ ಆಸನವನ್ನು ಕ್ರಮವಾಗಿ ಸಿದ್ಧಪಡಿಸಬೇಕು.

೨೮–೩೧. ಅನಂತರ ಕೆಳಭಾಗದಲ್ಲಿ ಭೂಮಿಯಮೇಲೆ ಅನಂತನನ್ನು ಧ್ಯಾನ ಮಾಡಬೇಕು. ಮೊದಲು ಕೆಳಗಡೆ ಕಪ್ಪುಬಣ್ಣದ ಶರೀರಕಾಂತಿಯಿಂದ ಬೆಳಗುತ್ತಿ

ಧರ್ಮೋ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚ ಪದಾನಿ ವೈ ।
ಆಗ್ನೇಯಾದಿಶ್ವೇತಪೀತರಕ್ತಶ್ಯಾಮಾನಿ ವರ್ಣತಃ ॥ ೩೦ ॥

ಅಧರ್ಮಾದೀನಿ ಪೂರ್ವಾದೀನ್ಯುತ್ತರಾನ್ತಾನ್ಯನುಕ್ರಮಾತ್ ।
ರಾಜಾವರ್ತಮಣಿಪ್ರಖ್ಯಾನ್ಯಸ್ಯ ಗಾತ್ರಾಣಿ ಭಾವಯೇತ್ ॥ ೩೧ ॥

ಅಧೋರ್ಧ್ವಚ್ಛದನಂ ಪಶ್ಚಾತ್ಕಂದಂ ನಾಲಂ ಚ ಕಂಟಕಾನ್ ।
ದಳಾದಿಕಂ ಕರ್ಣಿಕಾಂ ಚ ವಿಭಾವ್ಯ ಕ್ರಮಶೋಽರ್ಚಯೇತ್ ॥ ೩೨ ॥

ದಲೇಷು ಸಿದ್ಧಯಶ್ಚಾಷ್ಟೌ ಕೇಸರೇಷು ಚ ಶಕ್ತಿಕಾಃ ।
ರುದ್ರಾ ವಾಮಾದಯಸ್ತ್ವಷ್ಟೌ ಪೂರ್ವಾದಿಪರಿತಃ ಕ್ರಮಾತ್ ॥ ೩೩ ॥

---

ರುವ ಕುಂಡಲಾಕೃತಿಯಿಂದಿರುವ ಆಧಾರಶಕ್ತಿಯನ್ನು ಧ್ಯಾನಮಾಡಿ ಆ ಆಧಾರಶಕ್ತಿಯ ಮುಂದುಗಡೆ ಅನಂತನನ್ನು ಧ್ಯಾನಿಸಬೇಕು. ಆ ಅನಂತನ ಶರೀರವು ಶ್ವೇತವರ್ಣವುಳ್ಳದ್ದಾಗಿರುವುದು. ತನ್ನ ಐದುಹೆಡೆಗಳಿಂದ ಗಗನವನ್ನು ಮುಟ್ಟುವಂತೆ ತೋರುತ್ತಿರುವನು. ಆ ಅನಂತನಮೇಲೆ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯವೆಂಬ ನಾಲ್ಕು ಪಾದಗಳುಳ್ಳ ಸಿಂಹಾಸನವನ್ನು ಆಗ್ನೇಯವೇ ಮೊದಲಾಗಿ ಬಿಳಿಯಬಣ್ಣ, ಹಳದಿಯ ಬಣ್ಣ, ಕೆಂಪುಬಣ್ಣ, ಕಪ್ಪುಬಣ್ಣದಿಂದ ಇರುವಂತೆ, ಆ ಜ್ಞಾನಾದಿ ನಾಲ್ಕುಪಾದಗಳಿಗೆ ಬಣ್ಣವನ್ನು ಕೊಟ್ಟು, ಪೂರ್ವದಿಕ್ಕನ್ನು ಮೊದಲುಮಾಡಿಕೊಂಡು, ಉತ್ತರದಿಕ್ಕು ಕೊನೆಯಾಗುವಂತೆ ಕ್ರಮವಾಗಿ ಅಧರ್ಮವೇ ಮೊದಲಾದ ನಾಲ್ಕುಪಾದಗಳನ್ನೂ, ರಾಜಾವರ್ತ, ಪದ್ಮರಾಗಮಣಿ ಇವುಗಳ ಕಾಂತಿಯುಳ್ಳಂತೆ ಭಾವಿಸಬೇಕು.

೩೨. ಆ ಸಿಂಹಾಸನದ ಮೇಲುಗಡೆಯಲ್ಲಿ ಕಮಲದ ಕೆಳಭಾಗದಲ್ಲಿರುವ ದಳಗಳನ್ನು ಅನಂತರ ಕಂದ, ನಾಳ, ತಾವರೆಯ ದಂಟಿನ ಮುಳ್ಳುಗಳು, ಹೂವಿನ ದಳಗಳು, ಕರ್ಣಿಕಾ ಇವುಗಳನ್ನು ಕ್ರಮವಾಗಿ ಭಾವನೆಮಾಡಿ ಪೂಜೆಮಾಡಬೇಕು.

೩೩–೩೫. ದಳಗಳಲ್ಲಿ ಅಷ್ಟಸಿದ್ಧಿಗಳನ್ನೂ, ಕೇಸರಗಳಲ್ಲಿ, ಪೂರ್ವದಿಕ್ಕಿನ ಕ್ರಮದಿಂದ ಸುತ್ತಲೂ ಕ್ರಮವಾಗಿ, ರುದ್ರಾ ವಾಮಾ ಇವೇ ಮೊದಲಾದ ಎಂಟು ಶಕ್ತಿಗಳನ್ನೂ, ಕರ್ಣಿಕೆಯಲ್ಲಿ ವೈರಾಗ್ಯವನ್ನೂ ಬೀಜಗಳಲ್ಲಿ ಪೂರ್ವದಿಕ್ಕನ್ನು ಮೊದಲುಗೊಂಡು ವಾಮಾಮೊದಲಾಗಿ, ಮನೋನ್ಮನೀ ಎಂಬುದು ಕೊನೆಗೆ ಬರುವಹಾಗೆ

**ಕರ್ಣಿಕಾಯಾಂ ಚ ವೈರಾಗ್ಯಂ ಬೀಜೇಷು ನವ ಶಕ್ತಯಃ ।**
**ವಾಮಾದ್ಯಾ ಏವ ಪೂರ್ವಾದಿ ತದಂತಶ್ಚ ಮನೋನ್ಮನೀ ॥ ೩೪ ॥**

**ಕಂದೇ ಶಿವಾತ್ಮಕೋ ಧರ್ಮೋ ನಾಲೇ ಜ್ಞಾನಂ ಶಿವಾಶ್ರಯಂ ।**
**ಕರ್ಣಿಕೋಪರಿ ವಾಹ್ನೇಯಂ ಮಂಡಲಂ ಸೌರಮೈಂದವಂ ॥ ೩೫ ॥**

**ಆತ್ಮವಿದ್ಯಾ ಶಿವಾಖ್ಯಂ ಚ ತತ್ತ್ವತ್ರಯಮತಃ ಪರಂ ।**
**ಸರ್ವಾಸನೋಪರಿ ಸುಖಂ ವಿಚಿತ್ರಕುಸುಮೋಜ್ಜ್ವಲಂ ॥ ೩೬ ॥**

**ಪರವ್ಯೋಮಾವಕಾಶಾಖ್ಯವಿದ್ಯಯಾತೀವ ಭಾಸ್ವರಂ ।**
**ಪರಿಕಲ್ಪ್ಯಾಸನಂ ಮೂರ್ತೇಃ ಪುಷ್ಪವಿನ್ಯಾಸಪೂರ್ವಕಂ ॥ ೩೭ ॥**

**ಆಧಾರಶಕ್ತಿಮಾರಭ್ಯ ಶುದ್ಧವಿದ್ಯಾಸನಾವಧಿ ।**
**ಓಂಕಾರಾದಿಚತುರ್ಥ್ಯಂತಂ ನಾಮಮಾತ್ರಂ ನಮೋಂತಕಂ ॥ ೩೮ ॥**

**ಉಚ್ಚಾರ್ಯ ಪೂಜಯೇದ್ವಿದ್ವಾನ್ಸರ್ವತ್ರೈವಂ ವಿಧಿಕ್ರಮಃ ।**
**ಅಂಗವಕ್ತ್ರಕಲಾಭೇದಾತ್ಪಂಚಬ್ರಹ್ಮಾಣಿ ಪೂರ್ವವತ್ ॥ ೩೯ ॥**

---

ಒಂಭತ್ತು ಶಕ್ತಿದೇವತೆಗಳನ್ನೂ, ಕಂದದಲ್ಲಿ ಶಿವರೂಪದಿಂದ ಇರುವ ಧರ್ಮವನ್ನೂ, ನಾಲದಲ್ಲಿ ಶಿವನಸಂಬಂಧವಾದ ಜ್ಞಾನವನ್ನೂ, ಕರ್ಣಿಕೆಯ ಮೇಲುಭಾಗದಲ್ಲಿ ವಹ್ನಿಮಂಡಲ, ಸೂರ್ಯಮಂಡಲ, ಚಂದ್ರಮಂಡಲ, ಇವುಗಳನ್ನೂ, ಅದರ ಮೇಲುಗಡೆಯಲ್ಲಿ ಆತ್ಮ, ವಿದ್ಯಾ, ಶಿವ ಎಂಬ ಮೂರು ತತ್ತ್ವಗಳನ್ನೂ ಭಾವನೆಮಾಡಬೇಕು.

೩೬–೩೯. ಎಲ್ಲಾ ಆಸನಗಳ ಮೇಲುಗಡೆಯಲ್ಲಿ, ಅನೇಕ ವಿಧವಾದ ಹೂವುಗಳಿಂದ ಪ್ರಕಾಶವಾನವಾದ ಪರವ್ಯೋಮಾಕಾಶ ಎಂಬ ಹೆಸರುಳ್ಳ ವಿದ್ಯೆಯಿಂದ ಪ್ರಕಾಶಿಸುತ್ತಿರುವ, ಆಸನವನ್ನು ಸ್ಥಾಪಿಸಿ, ಮೂರ್ತಿಗೆ ಪುಷ್ಪಾಂಜಲಿಪೂರ್ವಕವಾಗಿ ಆಧಾರಶಕ್ತಿಯನ್ನು ಮೊದಲುಮಾಡಿಕೊಂಡು ಶುದ್ಧವಿದ್ಯಾಸನದವರಿಗೂ, ಓಂಕಾರಪೂರ್ವಕವಾಗಿ ಆಯಾಯ ನಾಮಮಂತ್ರವನ್ನು ಚತುರ್ಥ್ಯಂತವಾಗಿ ಓಂ ಆಧಾರಶಕ್ತಯೇ ನಮಃ ಇತ್ಯಾದಿ ಹೇಳಿ ಪೂಜಿಸಿದನಂತರ ಹಿಂದಿನಂತೆ ಕ್ರಮವಾಗಿ ತನ್ನ ಶರೀರದ ಮುಖ, ಅಂಗ, ಕಲಾ ಇವುಗಳ ಭೇದವನ್ನು ಅನುಸರಿಸಿ ಆಯಾಯ ಮುದ್ರೆಗಳನ್ನು ತೋರಿಸುತ್ತಾ ಪಂಚಬ್ರಹ್ಮರನ್ನು ತನ್ನ ಶರೀರದ ಎಲ್ಲಾ ಕಡೆಯಲ್ಲಿಯೂ ಕ್ರಮವಾಗಿ ವಿನ್ಯಾಸವನ್ನು ಮಾಡಿಕೊಳ್ಳಬೇಕು. ಸಾಮಾನ್ಯವಾಗಿ ಎಲ್ಲಾ ಕಡೆಯಲ್ಲಿಯೂ, ಈ ಕ್ರಮವೇ ಇರುವುದು.

ವಿನ್ಯಸೇತ್ಕ್ರಮಶೋ ಮೂರ್ತೌ ತತ್ತನ್ಮುದ್ರಾವಿಚಕ್ಷಣಃ ।
ಆವಾಹಯೇತ್ತತೋ ದೇವಂ ಪುಷ್ಪಾಂಜಲಿಪುಟಸ್ಥಿತಃ ॥ ೪೦ ॥

ಸದ್ಯೋಜಾತಂ ಪ್ರಪದ್ಯಾಮೀತ್ಯಾರಭ್ಯೋಮಂತಮುಚ್ಚರನ್ ।
ಆಧಾರೋತ್ಥಿತನಾದಂ ತು ದ್ವಾದಶಗ್ರಂಥಿಭೇದತಃ ॥ ೪೧ ॥

ಬ್ರಹ್ಮರಂಧ್ರಾಂತಮುಚ್ಚಾರ್ಯ ಧ್ಯಾಯೇದೋಂಕಾರಗೋಚರಂ ।
ಶುದ್ಧಸ್ಫಟಿಕಸಂಕಾಶಂ ದೇವಂ ನಿಷ್ಕಲಮಕ್ಷರಂ ॥ ೪೨ ॥

ಕಾರಣಂ ಸರ್ವಲೋಕಾನಾಂ ಸರ್ವಲೋಕಮಯಂ ಪರಂ ।
ಅಂತರ್ಬಹಿಃ ಸ್ಥಿತಂ ವ್ಯಾಪ್ಯ ಹ್ಯಣೋರಲ್ಪಂ ಮಹತ್ತಮಂ ॥ ೪೩ ॥

ಭಕ್ತಾನಾಮಪ್ರಯತ್ನೇನ ದೃಶ್ಯಮೀಶ್ವರಮವ್ಯಯಂ ।
ಬ್ರಹ್ಮೇಂದ್ರವಿಷ್ಣುರುದ್ರಾದ್ಯೈರಪಿ ದೇವೈರಗೋಚರಂ ॥ ೪೪ ॥

---

೪೦–೪೧. ಅನಂತರ ಪುಷ್ಪಾಂಜಲಿಪೂರ್ವಕವಾಗಿ "ಸದ್ಯೋಜಾತಂ ಪ್ರಪದ್ಯಾಮಿ" ಎಂದು ಪ್ರಾರಂಭಿಸಿ ಓಂಕಾರವು ಕೊನೆಗೆ ಬರುವಂತೆ ಎಂದರೆ ಸದಾಶಿವೋಂ ಎನ್ನುವವರಿಗೆ ಮಂತ್ರವನ್ನು ಹೇಳುತ್ತಾ ಆಧಾರಚಕ್ರದಲ್ಲಿ ಎದ್ದಿರುವ ನಾದವನ್ನು ಹನ್ನೆರಡು ಗ್ರಂಥಿಗಳು ಭೇದಿಸುವಂತೆ ಬ್ರಹ್ಮರಂಧ್ರದ ಕೊನೆಯವರಿಗೂ ಹೇಳಬೇಕು.

೪೨–೪೪. ಅನಂತರ ಓಂಕಾರಕ್ಕೆ ಗೋಚರನಾಗಿರುವ ಪರಮೇಶ್ವರನನ್ನು ಧ್ಯಾನಮಾಡಬೇಕು. ಆ ಪರಮೇಶ್ವರನು ಶುದ್ಧಸ್ಫಟಿಕದಂತೆ ಹೊಳೆಯುತ್ತಿರುವನು. ನಿಷ್ಕಳಂಕವಾಗಿಯೂ, ನಾಶರಹಿತನಾಗಿಯೂ, ಎಲ್ಲಾ ಲೋಕಗಳಿಗೂ ಕಾರಣನಾಗಿಯೂ ಇರುವನು. ಮತ್ತು ಎಲ್ಲಾ ಲೋಕಗಳ ರೂಪದಿಂದ, ಲೋಕಗಳ ಒಳಭಾಗ, ಹೊರಭಾಗ ಇವುಗಳನ್ನು ವ್ಯಾಪಿಸಿಕೊಂಡು, ಅಣುವಿಗಿಂತಲೂ ಸಣ್ಣನಾಗಿಯೂ, ಮಹತ್ತಿಗಿಂತಲೂ ದೊಡ್ಡದಾಗಿಯೂ ಇರುವನು. ಭಕ್ತರಾದವರಿಗೆ ಅನಾಯಾಸವಾಗಿ ದರ್ಶನವನ್ನು ಕೊಟ್ಟು ಕಾಪಾಡುವನು. ಆತನು ಸರ್ವಸ್ವತಂತ್ರನು, ಪರಿಪೂರ್ಣನು. ಬ್ರಹ್ಮ, ವಿಷ್ಣು, ರುದ್ರ ಇವರೇ ಮೊದಲಾದ ದೇವತೆಗಳಿಗೂ ಅಗೋಚರನು. ವೇದಗಳಿಗೆ ಸಾರಭೂತನಾದವನು. ಜ್ಞಾನಿಗಳಿಗೂ ಸುಲಭವಾಗಿ ಗೋಚರನಾಗುವವನಲ್ಲ.

ವೇದಸಾರಂ ಚ ವಿದ್ವದ್ಭಿರಗೋಚರಮಿತಿ ಶ್ರುತಂ ।
ಆದಿಮಧ್ಯಾಂತರಹಿತಂ ಭೇಷಜಂ ಭವರೋಗಿಣಾಂ ॥ ೪೫ ॥

ಸಮಾಹಿತೇನ ಮನಸಾ ಧ್ಯಾತ್ವೈವಂ ಪರಮೇಶ್ವರಂ ।
ಆವಾಹನಂ ಸ್ಥಾಪನಂ ಚ ಸನ್ನಿರೋಧಂ ನಿರೀಕ್ಷಣಂ ॥ ೪೬ ॥

ನಮಸ್ಕಾರಂ ಚ ಕುರ್ವೀತ ಬಧ್ವಾ ಮುದ್ರಾಃ ಪೃಥಕ್ಪೃಥಕ್ ।
ಧ್ಯಾಯೇತ್ಸದಾಶಿವಂ ಸಾಕ್ಷಾದ್ದೇವಂ ಸಕಲನಿಷ್ಕಲಂ ॥ ೪೭ ॥

ಶುದ್ಧಸ್ಫಟಿಕಸಂಕಾಶಂ ಪ್ರಸನ್ನಂ ಶೀತಲದ್ಯುತಿಂ ।
ವಿದ್ಯುದ್ವಲಯಸಂಕಾಶಂ ಜಟಾಮುಕುಟಭೂಷಿತಂ ॥ ೪೮ ॥

ಶಾರ್ದೂಲಚರ್ಮವಸನಂ ಕಿಂಚಿತ್ಸ್ಮಿತಮುಖಾಂಬುಜಂ ।
ರಕ್ತಪದ್ಮದಲಪ್ರಖ್ಯಪಾಣಿಪಾದತಲಾಧರಂ ॥ ೪೯ ॥

---

ಇವನಿಗೆ ಆದಿ, ಮಧ್ಯ, ನಾಶ ಮೊದಲಾದವುಗಳಿಲ್ಲ ಸಂಸಾರವೆಂಬ ರೋಗಗ್ರಸ್ತರಿಗೆ ವೈದ್ಯನಂತಿರುವನು. ಇಂತಹ ಪರಮೇಶ್ವರನನ್ನು ಸಮಾಧಾನವಾದ ಮನಸ್ಸಿನಿಂದ ಈಪ್ರಕಾರವಾಗಿ ಧ್ಯಾನಮಾಡಬೇಕು.

೪೬-೫೦. ಆವಾಹನ, ಸ್ಥಾಪನ, ಸನ್ನಿರೋಧ, ನಿರೀಕ್ಷಣ, ನಮಸ್ಕಾರ, ಇವುಗಳನ್ನು ಬೇರೆಬೇರೆಯಾಗಿ ಆಯಾಯ ಮುದ್ರೆಗಳನ್ನು ತೋರಿಸುತ್ತಾ ಮಾಡಬೇಕು. ಅನಂತರದಲ್ಲಿ ಶಿವನನ್ನು ಈರೀತಿ ಧ್ಯಾನಮಾಡಬೇಕು. ಆ ಪರಮೇಶ್ವರನು ಸಕಲನಾಗಿಯೂ, ನಿಷ್ಕಲನಾಗಿಯೂ, ಇರುವನು. ಶುದ್ಧವಾದ ಸ್ಫಟಿಕದಂತೆ ಹೊಳೆಯುವ, ಶರೀರಕಾಂತಿಯಿಂದ ಬೆಳಗುತ್ತಿರುವನು. ಮಿಂಚಿನ ಸಮೂಹದಂತೆ ಪ್ರಕಾಶಿಸುತ್ತಿರುವ ಜಡೆಯೆಂಬ ಕಿರೀಟದಿಂದ ಕೂಡಿ ಹುಲಿಯಚರ್ಮವನ್ನು ಹೊದ್ದುಕೊಂಡು ಇರುವನು. ಅವನ ಮುಖಕಮಲವು ಮಂದಹಾಸದಿಂದ ವಿರಾಜಿಸುತ್ತಿರುವುದು. ಕೈಕಾಲು ಮೊದಲಾದ ಅವಯವಗಳು ಕೆಂಪು ತಾವರೆಯದಳದಂತೆ ಹೊಳೆಯುತ್ತಿರುವವು. ಸರ್ವಲಕ್ಷಣಸಂಪೂರ್ಣನಾಗಿರುವನು. ದಿವ್ಯಾಭರಣಭೂಷಿತನಾಗಿ, ಕೈಗಳಲ್ಲಿ ಉತ್ತಮವಾದ ಆಯುಧಗಳನ್ನೂ ಧರಿಸಿರುವನು. ಶರೀರಕ್ಕೆ ದಿವ್ಯಗಂಧ

ಸರ್ವಲಕ್ಷಣಸಂಪನ್ನಂ ಸರ್ವಾಭರಣಭೂಷಿತಂ ।
ದಿವ್ಯಾಯುಧಕರೈರ್ಯುಕ್ತಂ ದಿವ್ಯಗಂಧಾನುಲೇಪನಂ ॥ ೫೦ ॥

ಪಂಚವಕ್ತ್ರಂ ದಶಭುಜಂ ಚಂದ್ರಖಂಡಶಿಖಾಮಣಿಂ ।
ಅಸ್ಯ ಪೂರ್ವಮುಖಂ ಸೌಮ್ಯಂ ಬಾಲಾರ್ಕಸದೃಶಪ್ರಭಂ ॥ ೫೧ ॥

ತ್ರಿಲೋಚನಾರವಿಂದಾಢ್ಯಂ ಬಾಲೇಂದುಕೃತಶೇಖರಂ ।
ದಕ್ಷಿಣಂ ನೀಲಜೀಮೂತಸಮಾನರುಚಿರಪ್ರಭಂ ॥ ೫೨ ॥

ಭ್ರುಕುಟೀಕುಟಿಲಂ ಘೋರಂ ರಕ್ತವೃತ್ತತ್ರಿಲೋಚನಂ ।
ದಂಷ್ಟ್ರಾಕರಾಲಂ ದುಷ್ಪ್ರೇಕ್ಷ್ಯಂ ಸ್ಫುರಿತಾಧರಪಲ್ಲವಂ ॥ ೫೩ ॥

ಉತ್ತರಂ ವಿದ್ರುಮಪ್ರಖ್ಯಂ ನೀಲಾಲಕವಿಭೂಷಿತಂ ।
ಸದ್ವಿಲಾಸಂ ತ್ರಿನಯನಂ ಚಂದ್ರಾರ್ಧಕೃತಶೇಖರಂ ॥ ೫೪ ॥

---

ವನ್ನು ಲೇಪನಮಾಡಿಕೊಂಡಿರುವನು. ಐದುಮುಖಗಳು, ಹತ್ತು ತೋಳುಗಳು, ಶಿರಸ್ಸಿನಲ್ಲಿ ಆಭರಣಾರ್ಥವಾಗಿ ಧರಿಸಿರುವ ಚಂದ್ರಖಂಡ ಇವುಗಳಿಂದ ಒಪ್ಪುತ್ತಿರುವನು. ಇಂತಹ ಶಿವನನ್ನು ಏಕಾಗ್ರಮನಸ್ಸಿನಿಂದ ಧ್ಯಾನಮಾಡಬೇಕು.

೫೧-೫೩. ಇವನ ಪೂರ್ವದಿಕ್ಕಿನಮುಖವು ಸೌಮ್ಯವಾಗಿರುವುದು. ಬಾಲಸೂರ್ಯನಿಗೆ ಸಮನಾದ ಕಾಂತಿಯುಳ್ಳದ್ದಾಗಿರುವುದು. ಮೂರು ಕಣ್ಣುಗಳಿಂದ ಮುಖಕಮಲವು ಶೋಭಿಸುತ್ತಿರುವುದು. ಬಾಲಚಂದ್ರನು ತಲೆಯಲ್ಲಿ ಬೆಳಗುತ್ತಿರುವನು. ದಕ್ಷಿಣದಿಕ್ಕಿನಮುಖವು ಕಪ್ಪಗೆ ಇರುವ ಮೇಘಕ್ಕೆ ಸಮನಾದ ಕಾಂತಿಯುಳ್ಳದ್ದಾಗಿ, ಹುಬ್ಬುಗಂಟಿನಿಂದಲೂ, ಕೆಂಪಗಿರುವ ಮೂರು ಕಣ್ಣುಗಳಿಂದಲೂ, ಭಯಂಕರವಾದ ಕೋರೆಯ ಹಲ್ಲುಗಳಿಂದಲೂ ನೋಡಲು ಬಹು ಭಯಂಕರವಾಗಿರುವುದು. ಚಿಗುರಿನಂತಿರುವ ಕೆಳತುಟಿಯಿಂದ ಪ್ರಕಾಶಿಸುತ್ತಿರುವುದು.

೫೪-೫೬. ಉತ್ತರದಿಕ್ಕಿನ ಮುಖವು ಹವಳದಂತೆ ಹೊಳೆಯುತ್ತಾ ಕಪ್ಪಗಿರುವ ಮುಂಗುರುಳಿನಿಂದ ಅಲಂಕೃತವಾಗಿ, ವಿನೋದದಿಂದ ಕೂಡಿರುವದು. ಮೂರು ಕಣ್ಣುಗಳಿಂದಲೂ, ಶಿರಸ್ಸಿನಲ್ಲಿ ಆಭರಣಾರ್ಥವಾಗಿ ಧರಿಸಿರುವ ಅರ್ಧಚಂದ್ರನಿಂದಲೂ

ಪಶ್ಚಿಮಂ ಪೂರ್ಣಚಂದ್ರಾಭಂ ಲೋಚನತ್ರಿತಯೋಜ್ಜ್ವಲಂ ।
ಚಂದ್ರಲೇಖಾಧರಂ ಸೌಮ್ಯಂ ಮಂದಸ್ಮಿತಮನೋಹರಂ ॥ ೫೫ ॥

ಪಂಚಮಂ ಸ್ಫಟಿಕಪ್ರಖ್ಯಮಿಂದುರೇಖಾಸಮುಜ್ಜ್ವಲಂ ।
ಅತೀವಸೌಮ್ಯಮುತ್ಫುಲ್ಲಲೋಚನತ್ರಿತಯೋಜ್ಜ್ವಲಂ ॥ ೫೬ ॥

ದಕ್ಷಿಣೇ ಶೂಲಪರಶುವಜ್ರಖಡ್ಗಾನಲೋಜ್ಜ್ವಲಂ ॥ ೫೭ ॥

ಸವ್ಯೇ ಪಿನಾಕನಾರಾಚಘಂಟಾಪಾಶಾಂಕುಶೋಜ್ಜ್ವಲಂ ।
ನಿವೃತ್ತ್ಯಾ ಜಾನುಪರ್ಯಂತಮಾನಾಭಿ ಚ ಪ್ರತಿಷ್ಠಯಾ ॥ ೫೮ ॥

ಆಕಂಠಂ ವಿದ್ಯಯಾ ತದ್ವದಾಲಲಾಟಂ ತು ಶಾಂತಯಾ ।
ತದೂರ್ಧ್ವಂ ಶಾಂತ್ಯತೀತಾಖ್ಯಕಲಯಾ ಪರಯಾ ತಥಾ ॥ ೫೯ ॥

ಬೆಳಗುತ್ತಿರುವದು. ಪಶ್ಚಿಮದಿಕ್ಕಿನ ಮುಖವು ಪೂರ್ಣಚಂದ್ರನಂತೆ ಹೊಳೆಯುತ್ತಾ ಮೂರು ಕಣ್ಣುಗಳಿಂದ ಪ್ರಕಾಶಿಸುತ್ತಿರುವುದು. ಚಂದ್ರನ ಗೆರೆಯಂತಿರುವ ಅಧರೋಷ್ಠದಿಂದಲೂ, ಮುಗುಳುನಗೆಯಿಂದಲೂ ಮನೋಹರವಾಗಿರುವುದು. ಐದನೆಯ ಮುಖವು ಸ್ಫಟಿಕದ ಕಾಂತಿಯನ್ನು ಹೋಲುತ್ತಾ ಚಂದ್ರನ ಗೆರೆಯಿಂದ ಪ್ರಕಾಶಮಾನವಾಗಿ, ಬಹಳ ಮಾಧುರ್ಯದಿಂದ ಕೂಡಿ ಅರಳಿರುವ ಮೂರು ಕಣ್ಣುಗಳಿಂದ ಹೊಳೆಯುತ್ತಿರುವುದು.

೫೭–೬೦. ಬಲಗಡೆಯ ತೋಳುಗಳು ಶೂಲ, ಕೊಡಲಿ, ವಜ್ರಾಯುಧ, ಕತ್ತಿ, ಇವುಗಳಿಂದ ಪ್ರಕಾಶಿಸುತ್ತಿರುವುವು. ಎಡಗಡೆಯ ತೋಳುಗಳು ಪಿನಾಕಧನುಸ್ಸು, ಬಾಣ, ಘಂಟೆ, ಪಾಶಾಯುಧ, ಅಂಕುಶ, ಇವುಗಳಿಂದ ಹೊಳೆಯುತ್ತಿರುವುವು. ಆ ಶಿವನ ಮೂರ್ತಿಯು ಮಂಡಿಯವರೆಗೂ ನಿವೃತ್ತಿಯೆಂಬ ಕಲೆಯಿಂದಲೂ, ನಾಭಿಯವರೆಗೂ ಪ್ರತಿಷ್ಠಾ ಎಂಬ ಕಲೆಯಿಂದಲೂ, ಕುತ್ತಿಗೆಯವರಿಗೂ ವಿದ್ಯಾ ಎಂಬ ಕಲೆಯಿಂದಲೂ, ಹುಬ್ಬಿನವರೆಗೂ ಶಾಂತಾ ಎಂಬ ಕಲೆಯಿಂದಲೂ, ಅದರ ಮೇಲುಭಾಗದಲ್ಲಿ ಉತ್ತಮವಾದ ಶಾಂತ್ಯತೀತವೆಂಬ ಕಲೆಯಿಂದಲೂ ಕೂಡಿ ಪ್ರಕಾಶಿಸುತ್ತಿರುವುದು. ಮೂರ್ತಿಮತ್ತಾದ ಶಿವನನ್ನು ಐದು ಅಧ್ವಗಳನ್ನು ವ್ಯಾಪಿಸಿ

ಪಂಚಾಧ್ವವ್ಯಾಪಿನಂ ತಸ್ಮಾತ್ಕಲಾಪಂಚಕವಿಗ್ರಹಂ ।
ಈಶಾನಮುಕುಟಂ ದೇವಂ ಪುರುಷಾಖ್ಯಂ ಪುರಾತನಂ ॥ ೬೦ ॥

ಅಘೋರಹೃದಯಂ ತದ್ವದ್ವಾಮಗುಹ್ಯಂ ಮಹೇಶ್ವರಂ ।
ಸದ್ಯೋಜಾತಂ ಚ ತನ್ಮೂರ್ತಿಮಷ್ಟತ್ರಿಂಶತ್ಕಲಾಮಯಂ ॥ ೬೧ ॥

ಮಾತೃಕಾಮಯಮೀಶಾನಂ ಪಂಚಬ್ರಹ್ಮಮಯಂ ತಥಾ ।
ಓಂಕಾರಾಖ್ಯಮಯಂ ಚೈವ ಹಂಸನ್ಯಾಸಮಯಂ ತಥಾ ॥ ೬೨ ॥

ಪಂಚಾಕ್ಷರಮಯಂ ದೇವಂ ಷಡಕ್ಷರಮಯಂ ತಥಾ ।
ಅಂಗಷಟ್ಕಮಯಂ ಚೈವ ಜಾತಿಷಟ್ಕಸಮನ್ವಿತಂ ॥ ೬೩ ॥

ಏವಂ ಧ್ಯಾತ್ವಾಥ ಮದ್ವಾಮಭಾಗೇ ತ್ವಾಂ ಚ ಮನೋನ್ಮನೀಂ ।
ಗೌರೀಮಿರ್ಮಿನಾಯ ಮಂತ್ರೇಣ ಪ್ರಣವಾದ್ಯೇನ ಭಕ್ತಿತಃ ॥ ೬೪ ॥

---

ಕೊಂಡು ಇರುವ, ಐದು ಕಲೆಗಳಿಂದ ಕೂಡಿರುವ ಶರೀರವನ್ನು ಹೊಂದಿ, ಈಶಾನನೆಂಬ ಕಿರೀಟವೂ, ತತ್ಪುರುಷನೆಂಬ ಮುಖವೂ, ಅಘೋರನೆಂಬ ಹೃದಯವೂ, ವಾಮದೇವನೆಂಬ ಗುಹ್ಯೇಂದ್ರಿಯವೂ, ಉಳ್ಳವನನ್ನಾಗಿ ಧ್ಯಾನಮಾಡಬೇಕು.

೬೧–೬೨. ಸದ್ಯೋಜಾತನನ್ನು, ಆ ಹೆಸರನಿಂದ ಇರುವ ಶಿವನ ಆಕಾರವು ಮೂವತ್ತೆಂಟು ಕಲೆಗಳಿಂದ ಕೂಡಿರುವುದನ್ನಾಗಿ ಧ್ಯಾನಮಾಡಬೇಕು. ಈಶಾನ ದೇವನನ್ನು ಮಾತೃಕಾಕ್ಷರಗಳಿಂದ ವ್ಯಾಪ್ತವಾದ ಶರೀರವುಳ್ಳರೀತಿಯಿಂದ ಇರುವಂತೆಯೂ, ಪಂಚಬ್ರಹ್ಮರ ಆಕಾರವುಳ್ಳವನನ್ನಾಗಿಯೂ, ಓಂಕಾರವೆಂಬ ಹೆಸರಿನಿಂದ ಕೂಡಿರುವವನನ್ನಾಗಿಯೂ, ಹಂಸನ್ಯಾಸದಿಂದ ಕೂಡಿರುವವನನ್ನಾಗಿಯೂ ಧ್ಯಾನಮಾಡಬೇಕು.

೬೩. ಈ ಶಿವನನ್ನು ಐದು ಅಕ್ಷರಗಳುಳ್ಳ ಮಂತ್ರರೂಪವುಳ್ಳವನನ್ನಾಗಿಯೂ, (ನಮಃ ಶಿವಾಯ) ಆರು ಅಕ್ಷರಗಳುಳ್ಳ ಮಂತ್ರರೂಪವುಳ್ಳವನನ್ನಾಗಿಯೂ, (ಓಂ ನಮಃ ಶಿವಾಯ) ಆರು ಅಂಗನ್ಯಾಸವುಳ್ಳವನನ್ನಾಗಿಯೂ, ಆರುವಿಧವಾದ ಜಾತಿಗಳಿಂದ ಕೂಡಿದವನನ್ನಾಗಿಯೂ ಧ್ಯಾನಮಾಡಬೇಕು.

೬೪. ನನ್ನನ್ನು ಈ ಪ್ರಕಾರವಾಗಿ ಧ್ಯಾನಮಾಡಿದನಂತರ ನನ್ನ ಎಡಭಾಗದಲ್ಲಿ ಮನೋನ್ಮನೀರೂಪದಿಂದರುವ ನಿನ್ನನ್ನು ಓಂಕಾರಪೂರ್ವಕವಾದ ಗೌರೀಮಿರ್ಮಿನಾಯ

**ಆವಾಹ್ಯ ಪೂರ್ವವತ್ಕುರ್ಯಾನ್ನಮಸ್ಕಾರಾಂತಮೀಶ್ವರಿ ।**
**ಧ್ಯಾಯೇತ್ತತಸ್ತ್ವಾಂ ದೇವೇಶಿ ಸಮಾಹಿತಮನಾ ಮುನಿಃ ॥ ೬೫ ॥**

**ಪ್ರಫುಲ್ಲೋತ್ಪಲಪತ್ರಾಭಾಂ ವಿಸ್ತೀರ್ಣಾಯತಲೋಚನಾಂ ।**
**ಪೂರ್ಣಚಂದ್ರಾಭವದನಾಂ ನೀಲಕುಂಚಿತಮೂರ್ಧಜಾಂ ॥ ೬೬ ॥**

**ನೀಲೋತ್ಪಲದಲಪ್ರಖ್ಯಾಂ ಚಂದ್ರಾರ್ಧಕೃತಶೇಖರಾಂ ।**
**ಅತಿವೃತ್ತಘನೋತ್ತುಂಗಸ್ನಿಗ್ಧಪೀನಪಯೋಧರಾಂ ॥ ೬೭ ॥**

**ತನುಮಧ್ಯಾಂ ಪೃಥುಶ್ರೋಣೀಂ ಪೀತಸೂಕ್ಷ್ಮತರಾಂಬರಾಂ ।**
**ಸರ್ವಾಭರಣಸಂಪನ್ನಾಂ ಲಲಾಟತಿಲಕೋಜ್ಜ್ವಲಾಂ ॥ ೬೮ ॥**

**ವಿಚಿತ್ರಪುಷ್ಪಸಂಕೀರ್ಣಕೇಶಪಾಶೋಪಶೋಭಿತಾಂ ।**
**ಸರ್ವತೋನುಗುಣಾಕಾರಾಂ ಕಿಂಚಿಲ್ಲಜ್ಜಾನತಾನನಾಂ ॥ ೬೯ ॥**

---

ಎಂಬ ಮಂತ್ರದಿಂದ ಆವಾಹನೆಯನ್ನು ಮಾಡಿ ಹಿಂದಿನಂತೆಯೇ ನಮಸ್ಕಾರದವರೆಗೂ ಕರ್ಮಗಳೆಲ್ಲವನ್ನೂ ಮಾಡಬೇಕು.

೬೫–೭೦. ಎಲೈ ದೇವೇಶಿಯಾದ ಪಾರ್ವತಿಯೇ ಕೇಳು, ಅನಂತರ ಮುನಿಯಾಗಿರುವ ಆ ಸಾಧಕನು ಸಮಾಧಾನವಾದ ಮನಸ್ಸಿನಿಂದ ಪಾರ್ವತಿಯನ್ನು ಧ್ಯಾನ ಮಾಡಬೇಕು. ಆ ಪಾರ್ವತಿಯು ಅರಳಿರುವ ಕನ್ನೈದಿಲೆ ಹೂವಿಗೆ ಸಮನಾದ ಕಾಂತಿಯುಳ್ಳವಳು· ದೊಡ್ಡದಾದ ಕಣ್ಣುಗಳು, ಪೂರ್ಣಚಂದ್ರನಂತೆ ಇರುವ ಮುಖ, ಕಪ್ಪಗೂ, ಕುಟಿಲವಾಗಿಯೂ ಇರುವ ತಲೆಯ ಕೂದಲುಗಳು ಇವುಗಳಿಂದ ಶೋಭಿಸುತ್ತಿರುವಳು. ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವವಳು. ಅವಳ ಸ್ತನಗಳು ಬಹಳ ಗುಂಡಾಗಿಯೂ, ಘಟ್ಟಿಯಾಗಿಯೂ, ಎತ್ತರವಾಗಿಯೂ, ದಪ್ಪನಾಗಿಯೂ ಇರುವವು· ಕಟಿಪ್ರದೇಶವು ಸೂಕ್ಷ್ಮವಾಗಿರುವುದು. ಜಘನಪ್ರದೇಶವು ದಪ್ಪನಾಗಿರುವುದು. ಹಳದಿಯ ಬಣ್ಣದ ಸೂಕ್ಷ್ಮವಾದ ವಸ್ತ್ರವನ್ನು ಧರಿಸಿ ಸರ್ವಾಭರಣಭೂಷಿತಳಾಗಿ ಹಣೆಯಲ್ಲಿರುವ ತಿಲಕದಿಂದ ಒಪ್ಪುತ್ತಿರುವಳು. ಅವಳ ಶಿರಸ್ಸಿನಲ್ಲಿರುವ ಸುಂದರವಾದ ಕೇಶಪಾಶಗಳು ಮುಡಿದಿರುವ ಹೂವಿನಿಂದ ಮತ್ತಷ್ಟು ಸುಂದರವಾಗಿ ಬೆಳಗುತ್ತಿರು

ಹೇಮಾರವಿಂದಂ ವಿಲಸದ್ವಧಾನಾಂ ದಕ್ಷಿಣೇ ಕರೇ ।
ದಂಡವಚ್ಚಾಮರಂ ಹಸ್ತಂ ನ್ಯಸ್ಯಾಸೀನಾಂ ಸುಖಾಸನೇ ॥ ೭೦ ॥

ಏವಂ ಮಾಂ ತ್ವಾಂ ಚ ದೇವೇಶಿ ಧ್ಯಾತ್ವಾ ನಿಯತಮಾನಸಃ ।
ಸ್ನಾಪಯೇಚ್ಛಂಕತೋಯೇನ ಪ್ರಣವಪ್ರೋಕ್ಷಣಕ್ರಮಾತ್ ॥ ೭೧ ॥

ಭವೇ ಭವೇ ನಾತಿಭವ ಇತಿ ಪದ್ಯಂ ಪ್ರಕಲ್ಪಯೇತ್ ।
ವಾಮಾಯ ನಮ ಇತ್ಯುಕ್ತ್ವಾ ದದ್ಯಾದಾಚಮನೀಯಕಂ ॥ ೭೨ ॥

ಜ್ಯೇಷ್ಠಾಯ ನಮ ಇತ್ಯುಕ್ತ್ವಾ ಶುಭ್ರವಸ್ತ್ರಂ ಪ್ರಕಲ್ಪಯೇತ್ ।
ಶ್ರೇಷ್ಠಾಯ ನಮ ಇತ್ಯುಕ್ತ್ವಾ ದದ್ಯಾದ್ಯಜ್ಞೋಪವೀತಕಂ ॥ ೭೩ ॥

ರುದ್ರಾಯ ನಮ ಇತ್ಯುಕ್ತ್ವಾ ಪುನರಾಚಮನೀಯಕಂ ।
ಕಾಲಾಯ ನಮ ಇತ್ಯುಕ್ತ್ವಾ ಗಂಧಂ ದದ್ಯಾತ್ಸುಸಂಸ್ಕೃತಂ ॥ ೭೪ ॥

---

ವವು. ಶರೀರದ ಸೌಂದರ್ಯಕ್ಕೆ ಅನುಗುಣವಾದ ಆಕಾರವುಳ್ಳವಳಾಗಿ ಲಜ್ಜೆಯಿಂದ ಕೊಂಚಮಟ್ಟಿಗೆ ಮುಖವನ್ನು ತಗ್ಗಿಸಿರುವಳು. ಬಲಗೈಯಲ್ಲಿ ಚಿನ್ನದ ಕಮಲವನ್ನೂ, ಎಡಗೈಯಲ್ಲಿ ಚಾಮರದಿಂದ ಕೂಡಿರುವ ದಂಡವನ್ನೂ ಹಿಡಿದುಕೊಂಡು ಸುಖವಾದ ಆಸನದಲ್ಲಿ ಕುಳಿತಿರುವಳು. ಇಂತಹ ಪಾರ್ವತಿಯಾದ ನಿನ್ನನ್ನು ದೃಢವಾಗಿ ಮನಸ್ಸಿನಿಂದ ಧ್ಯಾನಮಾಡಬೇಕು.

೭೧-೭೬. ಆ ಸಾಧಕನು ಈ ಪ್ರಕಾರವಾಗಿ ನಿನ್ನನ್ನೂ ನನ್ನನ್ನೂ ಧ್ಯಾನ ಮಾಡಿದ ನಂತರ ಪ್ರಣವಮಂತ್ರದಿಂದ ಪ್ರೋಕ್ಷಣೆಮಾಡಿ ಶಂಖದಲ್ಲಿರುವ ನೀರಿನಿಂದ " ಭವೇಭವೇನಾತಿಭವೇಭವಸ್ವ " ಎಂಬ ಮಂತ್ರದಿಂದ ಪಾದ್ಯವನ್ನು ಕೊಡಬೇಕು. " ವಾಮದೇವಾಯನಮಃ " ಎಂದು ಹೇಳಿ ಆಚಮನೀಯವನ್ನು ಕೊಡಬೇಕು. "ಜ್ಯೇಷ್ಠಾಯನಮಃ" ಎಂದು ಹೇಳಿ ಶುಭ್ರವಾದ ವಸ್ತ್ರವನ್ನು ಒಪ್ಪಿಸಬೇಕು. "ಶ್ರೇಷ್ಠಾಯನಮಃ" ಎಂದು ಯಜ್ಞೋಪವೀತವನ್ನೂ, "ರುದ್ರಾಯನಮಃ" ಎಂದು ಪುನರಾಚಮನೀಯವನ್ನೂ, "ಕಾಲಾಯನಮಃ" ಎಂದು ಸಿದ್ಧಪಡಿಸಿರುವ ಗಂಧವನ್ನೂ, "ಕಲವಿ

ಕಲವಿಕರಣಾಯ ನಮೋಽಕ್ಷತಂ ಚ ಪರಿಕಲ್ಪಯೇತ್ ।
ಬಲವಿಕರಣಾಯ ನಮ ಇತಿ ಪುಷ್ಪಾಣಿ ದಾಪಯೇತ್ ॥ ೭೫ ॥

ಬಲಾಯ ನಮ ಇತ್ಯುಕ್ತ್ವಾ ಧೂಪಂ ದದ್ಯಾತ್ಪ್ರಯತ್ನತಃ ।
ಬಲಪ್ರಮಥನಾಯೇತಿ ಸುದೀಪಂ ಚೈವ ದಾಪಯೇತ್ ॥ ೭೬ ॥

ಬ್ರಹ್ಮಭಿಶ್ಚ ಷಡಂಗೈಶ್ಚ ತತೋ ಮಾತೃಕಯಾ ಸಹ ।
ಪ್ರಣವೇನ ಶಿವೇನೈವ ಶಕ್ತಿಯುಕ್ತೇನ ಚ ಕ್ರಮಾತ್ ॥ ೭೭ ॥

ಮುದ್ರಾಃ ಪ್ರದರ್ಶಯೇನ್ಮಹ್ಯಂ ತುಭ್ಯಂ ಚ ವರವರ್ಣಿನಿ ।
ಮಯಿ ಪ್ರಕಲ್ಪಯೇತ್ಪೂರ್ವಮುಪಚಾರಾಂಸ್ತತಸ್ತ್ವಯಿ ॥ ೭೮ ॥

ಯದಾ ತ್ವಯಿ ಪ್ರಕುರ್ವೀತ ಸ್ತ್ರೀಲಿಂಗಂ ಯೋಜಯೇತ್ತದಾ ।
ಇಯಾನೇವ ಹಿ ಭೇದೋಽಸ್ತಿ ನಾನ್ಯಃ ಪಾರ್ವತಿ ಕಶ್ಚನ ॥ ೭೯ ॥

---

ಕರಣಾಯನಮಃ" ಎಂದು ಅಕ್ಷತೆಯನ್ನೂ "ಬಲವಿಕರಣಾಯ ನಮಃ" ಎಂದು ಹೂವುಗಳನ್ನೂ "ಬಲಾಯನಮಃ" ಎಂದು ಧೂಪವನ್ನೂ "ಬಲಪ್ರಮಥನಾಯನಮಃ" ಎಂದು ದೀಪವನ್ನೂ ಅರ್ಪಿಸಬೇಕು.

೭೭–೭೮. ಎಲೈ ಉತ್ತಮಸ್ತ್ರೀಯಾದ ಪಾರ್ವತೀದೇವಿಯೇ ಕೇಳು. ಪಂಚಬ್ರಹ್ಮಮಂತ್ರಗಳ ಜೊತೆಗೆ ಮಾತೃಕಾಮಂತ್ರಗಳನ್ನು ಸೇರಿಸಿಕೊಂಡು ಪ್ರಣವಮಂತ್ರವನ್ನು ಸೇರಿಸಿ, ಶಿವನ ಮತ್ತೂ ಶಕ್ತಿಯ ಮೂಲಮಂತ್ರಗಳಿಂದ ಆರು ವಿಧವಾದ ಅಂಗನ್ಯಾಸಗಳನ್ನೂ ಮಾಡುತ್ತಾ ನನಗೂ, ನಿನಗೂ ಸಹ ಆಯಾಯ ಮುದ್ರೆಗಳನ್ನು ಉಪಾಸಕನು ತೋರಿಸಬೇಕು. ಮೊದಲು ನನಗೆ ಉಪಚಾರಗಳನ್ನು ಮಾಡಿದ ನಂತರ ನಿನಗೆ ಅದೇ ಉಪಚಾರಗಳನ್ನು ಮಾಡಬೇಕು.

೭೯. ನನಗೆ ಉಪಚಾರಗಳನ್ನು ಒಪ್ಪಿಸುವ ಮಂತ್ರಗಳನ್ನೇ ಸ್ತ್ರೀಲಿಂಗಕ್ಕೆ ಬದಲಾಯಿಸಿ ಹೇಳುತ್ತಾ ನಿನಗೆ ಆಯಾಯ ಉಪಚಾರಗಳನ್ನು ಒಪ್ಪಿಸಬೇಕು. ಎಲೈ ಪಾರ್ವತಿಯೇ ಕೇಳು, ನಮ್ಮಿಬ್ಬರ ಪೂಜೆಯ ವಿಷಯದಲ್ಲಿ ನಾನು ಹೇಳಿದ ಭೇದವೇ ಹೊರತು ಬೇರೆ ಯಾವ ವಿಧವಾದ ಭೇದವೂ ಇರುವುದಿಲ್ಲ.

**ಏವಂ ಧ್ಯಾನಂ ಪೂಜನಂ ಚ ಕೃತ್ವಾ ಸಮ್ಯಗ್ವಿಧಾನತಃ ।**
**ಮಮಾವರಣಪೂಜಾಂ ಚ ಪ್ರಾರಭೇತ ವಿಚಕ್ಷಣಃ ॥ ೮೦ ॥**

**ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ**
**ಶಿವಧ್ಯಾನಪೂಜನವರ್ಣನಂ ನಾಮ ಸಪ್ತಮೋಽಧ್ಯಾಯಃ**



೮೦. ಬುದ್ಧಿವಂತನಾದವನು ಈ ಪ್ರಕಾರವಾಗಿ ಧ್ಯಾನವನ್ನೂ, ಪೂಜೆಯನ್ನೂ ಮಾಡಿದ ನಂತರ ಶಾಸ್ತ್ರಕ್ರಮವನ್ನನುಸರಿಸಿ ನನ್ನ ಆವರಣ ಪೂಜೆಯನ್ನು ಮಾಡಲು ಪ್ರಾರಂಭಿಸಬೇಕು.

ಇಲ್ಲಿಗೆ ಶ್ರೀ ಶಿವಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಶಿವಧ್ಯಾನ
ಪೂಜನವರ್ಣನವೆಂಬ ಆರನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ಕೈಲಾಸಸಂಹಿತಾಯಾಂ

## ಅಷ್ಟಮೋಽಧ್ಯಾಯಃ



॥ ಈಶ್ವರ ಉವಾಚ ॥

**ಅತ್ರಾಸ್ತಿ ಚ ಮಹಾದೇವಿ ಖಲ್ವಾವರಣಪಂಚಕಂ ।**
**ಪಂಚಾವರಣಪೂಜಾಂ ತು ಪ್ರಾರಭೇತ ಯಥಾಕ್ರಮಂ ॥ ೧ ॥**

**ಪ್ರಥಮಂ ಪೂಜಿತೌ ಯತ್ರ ತತ್ರೈವ ಕ್ರಮಶಸ್ಸುಧೀಃ ।**
**ಗಂಧಾದ್ಯೈರರ್ಚಯೇತ್ಪೂರ್ವಂ ದೇವೌ ಹೇರಂಬಷಣ್ಮುಖೌ ॥ ೨ ॥**

---

೧. ಈಶ್ವರನಿಂತೆಂದನು :—ಎಲೈ ಮಹಾದೇವಿಯಾದ ಪಾರ್ವತಿಯೇ ಕೇಳು. ಇಲ್ಲಿ ಐದು ಆವರಣಗಳಿರುವುವು. ಸಾಧಕನು ಈ ಐದು ಆವರಣಗಳ ಪೂಜೆಯನ್ನು ಶಾಸ್ತ್ರಕ್ರಮದಿಂದ ಮಾಡಲು ಪ್ರಾರಂಭಿಸಬೇಕು.

೨-೫. ಬುದ್ಧಿವಂತನಾದ ಸಾಧಕನು ಪಾರ್ವತೀಪರಮೇಶ್ವರರಾದ ನಮ್ಮಿಬ್ಬರನ್ನು ಪೂಜೆಮಾಡಿದ ಮಂಡಲದ ಸಮೀಪದಲ್ಲಿಯೇ ಕ್ರಮವಾಗಿ ಗಣಪತಿ, ಷಣ್ಮುಖ ಇವರುಗಳನ್ನು ಗಂಧವೇ ಮೊದಲಾದ ಉಪಚಾರದ್ರವ್ಯಗಳಿಂದ ಪೂಜೆಯನ್ನು

ಪಂಚ ಬ್ರಹ್ಮಾಣಿ ಪರಿತೋ ವೃತ್ತೇ ಸಂಪೂಜಯೇತ್ಕ್ರಮಾತ್ ।
ಈಶಾನದೇಶೇ ಪೂರ್ವೇ ಚ ದಕ್ಷಿಣೇ ಚೋತ್ತರೇ ತಥಾ ॥ ೩ ॥

ಪಶ್ಚಿಮೇ ಚ ತತಸ್ತಸ್ಮಿನ್ಷಡಂಗಾನಿ ಸಮರ್ಚಯೇತ್ ।
ಆಗ್ನೇಯೇ ಚ ತಥೈಶಾನೇ ನೈಋರ್ತೇ ವಾಯುದೇಶಕೇ ॥ ೪ ॥

ಮಧ್ಯೇ ನೇತ್ರಂ ತದ್ವದಸ್ತ್ರಂ ಪೂರ್ವಾದಿಪರಿತಃ ಕ್ರಮಾತ್ ।
ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥ ೫ ॥

ಅನಂತಂ ಪೂರ್ವದಿಕ್ಪತ್ರೇ ಸೂಕ್ಷ್ಮಂ ದಕ್ಷಿಣತಸ್ತಥಾ ।
ಶಿವೋತ್ತಮಂ ಪಶ್ಚಿಮತ ಏಕನೇತ್ರಂ ತಥೋತ್ತರೇ ॥ ೬ ॥

ಏಕರುದ್ರಂ ತಥೈಶಾನೇ ತ್ರಿಮೂರ್ತಿಂ ವಹ್ನಿದಿಗ್ದಲೇ ।
ಶ್ರೀಕಂಠಂ ನೈಋರ್ತೇ ವಾಯೌ ಶಿಖಂಡೀಶಂ ಸಮರ್ಚಯೇತ್ ॥ ೭ ॥

---

ಮಾಡಬೇಕು. ಪಂಚಬ್ರಹ್ಮರನ್ನೂ ಪ್ರದಕ್ಷಿಣಕ್ರಮದಿಂದ ಸುತ್ತಲೂ ಕ್ರಮವಾಗಿ ಪೂಜಿಸಬೇಕು. ಈಶಾನ್ಯ, ಪೂರ್ವ, ದಕ್ಷಿಣ, ಉತ್ತರ,ಪಶ್ಚಿಮ ಎಂಬ ಪ್ರದೇಶಗಳಲ್ಲಿಯೂ, ಆರು ಅಂಗದೇವತೆಗಳನ್ನೂ ಕ್ರಮವಾಗಿ ಪೂಜಿಸಿಆಗ್ನೇಯ, ಈಶಾನ್ಯ, ನೈರುತ್ಯ ವಾಯುವ್ಯ ಈ ಪ್ರದೇಶಗಳಲ್ಲಿ ಅಸ್ತ್ರದೇವತೆಯರನ್ನೂ ಮಧ್ಯದಲ್ಲಿ ಪ್ರಧಾನ ದೇವತೆಯನ್ನೂ ಕ್ರಮವಾಗಿ ಪೂಜಿಸಬೇಕು. ಇದು ಮೊದಲನೆಯ ಆವರಣ ಪೂಜೆಯು. ಇನ್ನೂ ಎರಡನೆಯ ಆವರಣವನ್ನು ಹೇಳುವೆನು ಕೇಳು.

೬-೭. ಪೂರ್ವದಿಕ್ಕಿನ ದಳದಲ್ಲಿ ಅನಂತನನ್ನೂ, ದಕ್ಷಿಣದಲ್ಲಿ ಸೂಕ್ಷ್ಮನನ್ನೂ, ಪಶ್ಚಿಮದಿಕ್ಕಿನಲ್ಲಿ ಶಿವೋತ್ತಮನನ್ನೂ, ಉತ್ತರದಲ್ಲಿ ಏಕನೇತ್ರನನ್ನೂ ಈಶಾನ್ಯದಲ್ಲಿ ಏಕರುದ್ರನನ್ನೂ, ಆಗ್ನೇಯದಿಕ್ಕಿನಲ್ಲಿರುವ ದಳದಲ್ಲಿ ಮೂರು ಮೂರ್ತಿಗಳನ್ನೂ (ಬ್ರಹ್ಮ, ವಿಷ್ಣು, ರುದ್ರರು) ನೈಋತ್ಯದಿಕ್ಕಿನ ದಳದಲ್ಲಿ ಶ್ರೀಕಂಠನನ್ನೂ ವಾಯುವ್ಯ ದಿಕ್ಕಿನ ದಳದಲ್ಲಿ ಶಿಖಂಡೀಶನನ್ನೂ ಪೂಜಿಸಬೇಕು.

ದ್ವಿತೀಯಾವರಣೇ ಚೈವ ಪೂಜ್ಯಾಸ್ತೇ ಚಕ್ರವರ್ತಿನಃ ।
ಪೂರ್ವದ್ವಾರಸ್ಯ ಮಧ್ಯೇ ತು ವೃಷೇಶಾನಂ ಪ್ರಪೂಜಯೇತ್ ॥ ೮ ॥

ತದ್ದಕ್ಷಿಣೇ ನಂದಿನಂ ಚ ಮಹಾಕಾಲಂ ತದುತ್ತರೇ ।
ಭೃಂಗೀಶಂ ದಕ್ಷಿಣದ್ವಾರಪಶ್ಚಿಮೇ ಸಂಪ್ರಪೂಜಯೇತ್ ॥ ೯ ॥

ತತ್ಪೂರ್ವಕೋಷ್ಠೇ ಗಂಧಾದ್ಯೈಸ್ಸಂಪ್ರಪೂಜ್ಯ ವಿನಾಯಕಂ ।
ಪಶ್ಚಿಮೋತ್ತರಕೋಷ್ಠೇ ಚ ವೃಷಭಂ ದಿಕ್ಷಿಣೇ ಗುಹಂ ॥ ೧೦ ॥

ಉತ್ತರದ್ವಾರಪೂರ್ವೇ ತು ಪ್ರದಕ್ಷಿಣವಿಧಾನತಃ ।
ನಾಮಾಷ್ಟಕವಿಧಾನೇನ ಪೂಜಯೇದುಚ್ಯತೇ ಹಿ ತತ್ ॥ ೧೧ ॥

ಭವಂ ಶರ್ವಂ ತಥೇಶಾನಂ ರುದ್ರಂ ಪಶುಪತಿಂ ಪುನಃ ।
ಉಗ್ರಂ ಭೀಮಂ ಮಹಾದೇವಂ ತೃತೀಯಾವರಣಂ ತ್ವಿದಂ ॥ ೧೨ ॥

---

೮-೧೦. ಈ ಎರಡನೆಯ ಆವರಣದಲ್ಲಿ ಚಕ್ರದಲ್ಲಿರುವ ದೇವತೆಗಳನ್ನು ಪೂಜಿಸಬೇಕು. ಪೂರ್ವದಿಕ್ಕಿನ ಬಾಗಿಲಿನ ಮಧ್ಯದಲ್ಲಿ ವೃಷೇಶಾನನೆಂಬುವನನ್ನು ಪೂಜಿಸಬೇಕು. ಅವನಿಗೆ ದಕ್ಷಿಣದಲ್ಲಿ ನಂದಿಯನ್ನೂ ಅವನಿಗೆ ಉತ್ತರದಲ್ಲಿ ಮಹಾಕಾಲನನ್ನೂ, ದಕ್ಷಿಣದಿಕ್ಕಿನ ಪಶ್ಚಿಮದಲ್ಲಿ (ಎಡಗಡೆಯಲ್ಲಿ) ಭೃಂಗಿಯನ್ನೂ, ಪೂಜಿಸಬೇಕು. ಅದರ ಪೂರ್ವದಿಕ್ಕಿನ ಮನೆಯಲ್ಲಿ ವಿಘ್ನೇಶ್ವರನನ್ನು, ಗಂಧಾದಿದ್ರವ್ಯಗಳಿಂದ ಪೂಜಿಸಬೇಕು. ವಾಯುವ್ಯದಿಕ್ಕಿನ ಮನೆಯಲ್ಲಿ ವೃಷಭನನ್ನೂ ಅದರ ದಕ್ಷಿಣದಲ್ಲಿ ಗುಹನನ್ನೂ ಪೂಜಿಸಬೇಕು. ಇದು ಎರಡನೆಯ ಆವರಣಪೂಜೆಯು.

೧೧-೧೨. ಉತ್ತರದಿಕ್ಕಿನ ಬಾಗಿಲಿನಲ್ಲಿ ಪ್ರದಕ್ಷಿಣಾಕಾರವಾಗಿ, ಭವ, ಶರ್ವ, ಈಶಾನ, ರುದ್ರ, ಪಶುಪತಿ, ಉಗ್ರ, ಭೀಮ, ಮಹಾದೇವ, ಎಂಬ ಅಷ್ಟಮೂರ್ತಿಗಳನ್ನು ಕ್ರಮವಾಗಿ ಎಂಟು ಹೆಸರುಗಳ ವಿಧಾನದಿಂದ ಪೂಜಿಸಬೇಕು. ಇದು ಮೂರನೆಯ ಆವರಣವು.

ಯೋ ವೇದಾದೌ ಸ್ವರ ಇತಿ ಸಮಾವಾಹ್ಯ ಮಹೇಶ್ವರಂ ।
ಪೂಜಯೇತ್ಪೂರ್ವದಿಗ್ಭಾಗೇ ಕಮಲೇ ಕರ್ಣಿಕೋಪರಿ ॥ ೧೩ ॥

ಈಶ್ವರಂ ಪೂರ್ವದಿಕ್ಪತ್ರೇ ವಿಶ್ವೇಶಂ ದಕ್ಷಿಣೇ ತತಃ ।
ಸೌಮ್ಯೇ ತು ಪರಮೇಶಾನಂ ಸರ್ವೇಶಂ ಪಶ್ಚಿಮೇ ಯಜೇತ್ ॥ ೧೪ ॥

ದಕ್ಷಿಣೇ ತು ಯಜೇದ್ರುದ್ರಮಾವೋರಾಜಾನಮಿತ್ಯೃಚಾ ।
ಆವಾಹ್ಯ ಗಂಧಪುಷ್ಪಾದ್ಯೈಃ ಕರ್ಣಿಕಾಯಾಂ ದಲೇಷು ಚ ॥ ೧೫ ॥

ಶಿವಃ ಪೂರ್ವೇ ದಕ್ಷಿಣತೋ ಹರ ಉತ್ತರತೋ ಮೃಡಃ ।
ಭವಃ ಪಶ್ಚಿಮದಿಕ್ಪತ್ರೇ ಪೂಜ್ಯಾ ಏತೇ ಯಥಾಕ್ರಮಂ ॥ ೧೬ ॥

ಉತ್ತರೇ ವಿಷ್ಣುಮಾವಾಹ್ಯ ಗಂಧಪುಷ್ಪಾದಿಭಿರ್ಯಜೇತ್ ।
ಪ್ರತದ್ವಿಷ್ಣುರಿತಿ ಪ್ರೋಚ್ಯ ಕರ್ಣಿಕಾಯಾಂ ದಲೇಷು ಚ ॥ ೧೭ ॥

---

೧೩-೧೪. ಕಮಲದ ಪೂರ್ವದಿಕ್ಕಿನ ಭಾಗದಲ್ಲಿ ಕರ್ಣಿಕೆಯ ಮೇಲುಗಡೆಯಲ್ಲಿ "ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥ ಎಂಬ ಮಂತ್ರದಿಂದ ಮಹೇಶ್ವರನನ್ನು ಆವಾಹನೆಮಾಡಿ ಪೂಜಿಸಬೇಕು. ಪೂರ್ವದಿಕ್ಕಿನ ದಳದಲ್ಲಿ ಈಶ್ವರನನ್ನೂ ದಕ್ಷಿಣದಲ್ಲಿ ವಿಶ್ವೇಶನನ್ನೂ, ಉತ್ತರದಲ್ಲಿ ಪರಮೇಶನನ್ನೂ, ಪಶ್ಚಿಮದಲ್ಲಿ ಸರ್ವೇಶ್ವರನನ್ನೂ ಪೂಜಿಸಬೇಕು.

೧೫-೧೬. ದಕ್ಷಿಣದಲ್ಲಿ "ಆವೋರಾಜಾನಂ" ಎಂಬ ಮಂತ್ರದಿಂದ ರುದ್ರನನ್ನು ಆವಾಹನೆಮಾಡಿ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಕರ್ಣಿಕೆಯ ದಳಗಳಲ್ಲಿ ಪೂರ್ವದಲ್ಲಿ ಶಿವನನ್ನೂ, ದಕ್ಷಿಣದಲ್ಲಿ ಹರನನ್ನೂ, ಉತ್ತರದಲ್ಲಿ ಮೃಡನನ್ನೂ, ಪಶ್ಚಿಮದಲ್ಲಿ ಭವನನ್ನೂ, ಕ್ರಮವಾಗಿ ಪೂಜಿಸಬೇಕು.

೧೭-೧೮. ಉತ್ತರದಲ್ಲಿರುವ ಕಮಲದಲ್ಲಿ "ಪ್ರತದ್ವಿಷ್ಣುಃ" ಎಂಬ ಮಂತ್ರದಿಂದ ವಿಷ್ಣುವನ್ನು ಆವಾಹನೆಮಾಡಿ ಗಂಧ, ಹೂವು ಇವುಗಳಿಂದ ಪೂಜಿಸಬೇಕು.

ವಾಸುದೇವಂ ಪೂರ್ವಭಾಗೇ ದಕ್ಷಿಣೇ ಚಾನಿರುದ್ಧಕಂ ।
ಸೌಮ್ಯೇ ಸಂಕರ್ಷಣಂ ಚೈವ ಪ್ರದ್ಯುಮ್ನಂ ಪಶ್ಚಿಮೇ ಯಜೇತ್ ॥ ೧೮ ॥

ಬ್ರಹ್ಮಾಣಂ ಪಶ್ಚಿಮೇ ಪದ್ಮೇ ಸಮಾವಾಹ್ಯ ಸಮರ್ಚಯೇತ್ ।
ಹಿರಣ್ಯಗರ್ಭಃ ಸಮವರ್ತತ ಇತಿ ಮಂತ್ರೇಣ ಮಂತ್ರವಿತ್ ॥ ೧೯ ॥

ಹಿರಣ್ಯಗರ್ಭಂ ಪೂರ್ವಸ್ಯಾಂ ವಿರಾಜಂ ದಕ್ಷಿಣೇ ತತಃ ।
ಉತ್ತರೇ ಪುಷ್ಕರಂ ಚೈವ ಕಾಲಂ ಪಶ್ಚಿಮತೋ ಯಜೇತ್ ॥ ೨೦ ॥

ಸರ್ವೋರ್ಧ್ವಪಂಕ್ತೌ ಪೂರ್ವಾದಿಪ್ರದಕ್ಷಿಣವಿಧಾನತಃ ।
ತತ್ತತ್ಸ್ಥಾನೇಷು ಸಂಪೂಜ್ಯ ಲೋಕಪಾಲಾನನುಕ್ರಮಾತ್ ॥ ೨೧ ॥

ರಾಂತಂ ಪಾಂತಂ ತಥಾ ಜ್ಞಾಂತಂ ಲಾಂತಂ ಲಾಂತಮಪೂರ್ವಕಂ ।
ಷಾಂತಂ ಸಾಂತಂ ಚ ವದಾದ್ಯಂ ಶ್ರೀಬೀಜಂ ಚ ದಶಕ್ರಮಾತ್ ॥ ೨೨ ॥

---

ಆ ಕಮಲದ ಕರ್ಣಿಕೆಯ ದಳಗಳಲ್ಲಿ ಪೂರ್ವಭಾಗದಲ್ಲಿ ಅನಿರುದ್ಧನನ್ನೂ ಉತ್ತರದಲ್ಲಿ ಸಂಕರ್ಷಣನನ್ನೂ ಪಶ್ಚಿಮದಲ್ಲಿ ಪ್ರದ್ಯುಮ್ನನನ್ನೂ ಪೂಜಿಸಬೇಕು.

೧೯–೨೦. ಪಶ್ಚಿಮದಿಕ್ಕಿನಲ್ಲಿರುವ ಕಮಲದಲ್ಲಿ ಬ್ರಹ್ಮನನ್ನು ಆವಾಹನೆ ಮಾಡಿ ಪೂಜಿಸಬೇಕು. ಮಂತ್ರವನ್ನು ತಿಳಿದವನು ಕಮಲದ ಪೂರ್ವದಿಕ್ಕಿನ ದಳದಲ್ಲಿ "ಹಿರಣ್ಯಗರ್ಭಸ್ಸಮವರ್ತತ" ಎಂಬ ಮಂತ್ರವನ್ನು ಹೇಳಿ ಹಿರಣ್ಯಗರ್ಭನನ್ನೂ ದಕ್ಷಿಣದಿಕ್ಕಿನ ದಳದಲ್ಲಿ ವಿರಾಜನನ್ನೂ ಉತ್ತರದಳದಲ್ಲಿ ಪುಷ್ಕರನನ್ನೂ ಪಶ್ಚಿಮದ ದಳದಲ್ಲಿ ಕಾಲನನ್ನೂ ಪೂಜಿಸಬೇಕು.

೨೧. ಎಲ್ಲಕ್ಕಿಂತಲೂ ಮೇಲುಗಡೆಯಲ್ಲಿರುವ ಸಾಲಿನಲ್ಲಿ ಪೂರ್ವ ಮೊದಲುಗೊಂಡು ಪ್ರದಕ್ಷಿಣೆಯ ಕ್ರಮದಿಂದ ಆಯಾಯ ಸ್ಥಳಗಳಲ್ಲಿ ಕ್ರಮವಾಗಿ ಲೋಕಪಾಲಕರನ್ನು ಪೂಜಿಸತಕ್ಕದ್ದು.

೨೨. ರ, ಪ, ಜ್ಞ, ಲ, ಲ, ಷ, ಸ, ವ, ದ, ಶ್ರೀ ಈ ಹತ್ತು ಬೀಜಾಕ್ಷರಗಳು ಲೋಕಪಾಲಕರ ಪೂಜೆಗೆ ಉಕ್ತವಾಗಿರುವುವು. ಇವುಗಳಿಂದಲೇ ಲೋಕಪಾಲಕರನ್ನು ಪೂಜಿಸಬೇಕು.

ಬೀಜಾನಿ ಲೋಕಪಾಲಾನಾಮೇತೈರೇತಾನ್ಸಮರ್ಚಯೇತ್ ।
ನೈಋರ್ತೇ ಚೋತ್ತರೇ ತದ್ವದೀಶಾನಸ್ಯ ಚ ದಕ್ಷಿಣೇ ॥ ೨೩ ॥

ಬ್ರಹ್ಮವಿಷ್ಣೂ ಚ ವಿಧಿನಾ ಪೂಜಯೇದುಪಚಾರಕೈಃ ।
ಬಾಹ್ಯರೇಖಾಸು ದೇವೇಶಂ ಪಂಚಮಾವರಣೇ ಯಜೇತ್ ॥ ೨೪ ॥

ಶ್ರೀಮತ್ತ್ರಿಶೂಲಮೀಶಾನೇ ವಜ್ರಂ ಮಾಹೇಂದ್ರದಿಙ್ಮುಖೇ ।
ಪರಶುಂ ವಹ್ನಿದಿಗ್ಭಾಗೇ ಯಾಮ್ಯೇ ಸಾಯಕಮರ್ಚಯೇತ್ ॥ ೨೫ ॥

ನೈಋರ್ತೇ ತು ಯಜೇತ್ಖಡ್ಗಂ ಪಾಶಂ ವರುಣಗೋಚರೇ ।
ಅಂಕುಶಂ ಮಾರುತೇ ಭಾಗೇ ಪಿನಾಕಂ ಚೋತ್ತರೇ ಯಜೇತ್ ॥ ೨೬ ॥

ಪಶ್ಚಿಮಾಭಿಮುಖಂ ರೌದ್ರಂ ಕ್ಷೇತ್ರಪಾಲಂ ಸಮರ್ಚಯೇತ್ ।
ಯಥಾವಿಧಿ ವಿಧಾನಜ್ಞಃ ಶಿವಪ್ರೀತ್ಯರ್ಥಮೇವ ಚ ॥ ೨೭ ॥

೨೩-೨೪. ನೈಋತ್ಯದಲ್ಲಿಯೂ ಉತ್ತರದಲ್ಲಿಯೂ ಅದರಂತೆ ಈಶಾನ್ಯ ದಕ್ಷಿಣದಲ್ಲಿಯೂ ಕೂಡ ಬ್ರಹ್ಮ ವಿಷ್ಣು ಇವರಿಬ್ಬರನ್ನೂ ಶಾಸ್ತ್ರಕ್ರಮದಿಂದ ಉಪಚಾರದ್ರವ್ಯಗಳಿಂದ ಪೂಜಿಸಬೇಕು. ಇದು ಚತುರ್ಥಾವರಣಪೂಜೆಯು. ಹೊರ ಭಾಗದ ಗೆರೆಗಳಲ್ಲಿ ಪಂಚಮಾವರಣ ಪೂಜೆಯಿಂದ ದೇವೇಶನನ್ನು ಪೂಜಿಸತಕ್ಕದ್ದು.

೨೫-೨೬. ಈಶಾನ್ಯದಲ್ಲಿ ಕಾಂತಿಮತ್ತಾದ ತ್ರಿಶೂಲಾಯುಧವನ್ನೂ ಪೂರ್ವ ದಿಕ್ಕಿನಲ್ಲಿ ವಜ್ರಾಯುಧವನ್ನೂ ಆಗ್ನೇಯದಲ್ಲಿ ಪರಶು ಎಂಬ ಆಯುಧವನ್ನೂ ದಕ್ಷಿಣದಿಕ್ಕಿನಲ್ಲಿ ಬಾಣವೆಂಬಾಯುಧವನ್ನೂ ನೈಋತ್ಯದಿಕ್ಕಿನಲ್ಲಿ ಖಡ್ಗವೆಂಬ ಆಯುಧವನ್ನೂ' ಪಶ್ಚಿಮದಿಕ್ಕಿನಲ್ಲಿ ಪಾಶಾಯುಧವನ್ನೂ ವಾಯುವ್ಯದಿಕ್ಕಿನಲ್ಲಿ ಅಂಕುಶವನ್ನೂ ಉತ್ತರದಿಕ್ಕಿನಲ್ಲಿ ಪಿನಾಕಧನುಸ್ಸನ್ನೂ ಕ್ರಮವಾಗಿ ಪೂಜಿಸಬೇಕು. ಇದು ಪಂಚಮಾವರಣಪೂಜೆಯು.

೨೭. ಶಾಸ್ತ್ರಕ್ರಮವನ್ನು ತಿಳಿದವನು ಶಾಸ್ತ್ರವನ್ನನುಸರಿಸಿ ಶಿವನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ಭಯಂಕರನಾದ ಕ್ಷೇತ್ರಪಾಲನನ್ನು ಪಶ್ಚಿಮ ದಿಕ್ಕಿಗೆ ಅಭಿಮುಖನಾಗಿರುವಂತೆ ಪೂಜಿಸಬೇಕು.

ಕೃತಾಂಜಲಿಪುಟಾಸ್ಸರ್ವೇ ಚಿಂತ್ಯಾಃ ಸ್ಮಿತಮುಖಾಂಬುಜಾಃ ।
ಸಾದರಂ ಪ್ರೇಕ್ಷಮಾಣಾಶ್ಚ ದೇವಂ ದೇವೀಂ ಚ ಸರ್ವದಾ ॥ ೨೮ ॥

ಇತ್ಥಮಾವರಣಾಭ್ಯರ್ಚಾಂ ಕೃತ್ವಾ ವಿಕ್ಷೇಪಶಾಂತಯೇ ।
ಪುನರಭ್ಯರ್ಚ್ಯ ದೇವೇಶಂ ಪ್ರಣವಂ ಚ ಶಿವಂ ವದೇತ್ ॥ ೨೯ ॥

ಏವಮಭ್ಯರ್ಚ್ಯ ವಿಧಿವದ್ಗಂಧಾದ್ಯೈರುಪಚಾರಕೈಃ ।
ಉಪಚರ್ಯ ತತೋ ದದ್ಯಾನ್ನೈವೇದ್ಯಂ ವಿಧಿಸಾಧಿತಂ ॥ ೩೦ ॥

ಪುನರಾಚಮನೀಯಂ ಚ ದದ್ಯಾದರ್ಘ್ಯಂ ಯಥಾ ಪುರಾ ।
ತತೋ ನಿವೇದ್ಯ ಪಾನೀಯಂ ತಾಂಬೂಲಂ ಚೋಪದೇಶತಃ ॥ ೩೧ ॥

ನೀರಾಜನಾದಿಕಂ ಕೃತ್ವಾ ಪೂಜಾಶೇಷಂ ಸಮಾಪಯೇತ್ ।
ಧ್ಯಾತ್ವಾ ದೇವಂ ಚ ದೇವೀಂ ಚ ಮನುಮಷ್ಟೋತ್ತರಂ ಜಪೇತ್ ॥ ೩೨ ॥

---

೨೮. ಈ ಆವರಣದೇವತೆಗಳೆಲ್ಲರೂ ಪ್ರಸನ್ನಚಿತ್ತರಾಗಿ ಕೈಮುಗಿದುಕೊಂಡು ಮಹಾದೇವನನ್ನೂ, ದೇವಿಯನ್ನೂ ಭಕ್ತಿಯಿಂದ ನೋಡುತ್ತಿರುವಂತೆ ಧ್ಯಾನಿಸಿ ಪೂಜಿಸಬೇಕು.

೨೯. ಸಾಧಕನು ಇವರೆಲ್ಲರಿಗೂ ಹೀಗೆ ಆವರಣಪೂಜೆಯನ್ನು ಮಾಡಿ ಚಿತ್ತಚಾಂಚಲ್ಯ ನಾಶಕ್ಕಾಗಿ ದೇವತೆಗಳಿಗೆ ಅಧಿಪತಿಯಾದ ಶಿವನನ್ನು ಪುನಃ ಪೂಜಿಸಿ ಪ್ರಣವಮಂತ್ರವನ್ನೂ ಶಿವನ ಮಂತ್ರವನ್ನೂ ಜಪಮಾಡಬೇಕು.

೩೦-೩೨. ಗಂಧವೇ ಮೊದಲಾದ ಉಪಚಾರದ್ರವ್ಯಗಳಿಂದ ಶಾಸ್ತ್ರಕ್ಕನುಸಾರವಾಗಿ ಹೀಗೆ ಪೂಜೆಯನ್ನು ಮಾಡಿ ಉಪಚಾರವನ್ನು ಶಿವನಿಗೆ ಅರ್ಪಿಸಿದ ನಂತರ ಶಾಸ್ತ್ರಕ್ರಮದಿಂದ ಸಿದ್ಧಪಡಿಸಿದ ನೈವೇದ್ಯವನ್ನು ಶಿವನಿಗೆ ಒಪ್ಪಿಸಬೇಕು. ಪುನಃ ಆಚಮನೀಯವನ್ನು ಹಿಂದೆ ಒಪ್ಪಿಸಿದ ಪ್ರಕಾರ ಒಪ್ಪಿಸಿ ಬಳಿಕ ನೈವೇದ್ಯವನ್ನೂ ತಾಂಬೂಲವನ್ನು ತನಗೆ ಉಪದೇಶವಾಗಿರುವ ಮೂಲಮಂತ್ರದಿಂದ ಒಪ್ಪಿಸಬೇಕು. ಉತ್ತರನೀರಾಜನವೇ ಮೊದಲಾದ ಉಪಚಾರಗಳನ್ನು ಮಾಡಿ ಉಳಿದಿರುವ ಪೂಜೆ

ತತ ಉತ್ಥಾಯ ರಚಿತಪುಷ್ಪಾಂಜಲಿಪುಟಃ ಸ್ಥಿತಃ ।
ಜಪೇದ್ಧ್ಯಾತ್ವಾ ಮಹಾದೇವಂ ಯೋ ದೇವಾನಾಮಿತಿ ಕ್ರಮಾತ್ ॥ ೩೩ ॥

ಯೋ ವೇದಾದೌ ಸ್ವರಃ ಪ್ರೋಕ್ತ ಇತ್ಯಂತಂ ಪರಮೇಶ್ವರಿ ।
ಪುಷ್ಪಾಂಜಲಿಂ ತತೋ ದತ್ವಾ ತ್ರಿಃ ಪ್ರದಕ್ಷಿಣಮಾಚರೇತ್ ॥ ೩೪ ॥

ಸಾಷ್ಟಾಂಗಂ ಪ್ರಣಮೇತ್ತಂ ಚ ಭಕ್ತ್ಯಾ ಪರಮಯಾನ್ವಿತಃ ।
ಪುನಃ ಪ್ರದಕ್ಷಿಣಾಂ ಕೃತ್ವಾ ಪ್ರಣಮೇತ್ಪುನರೇಕಧಾ ॥ ೩೫ ॥

ಸ್ಥಿತ್ವಾಸನೇ ಸಮಭ್ಯರ್ಚ್ಯ ದೇವಂ ನಾಮಾಷ್ಟಕೇನ ಚ ।
ಸಾಧು ವಾಸಾಧು ವಾ ಕರ್ಮ ಯದ್ಯದಾಚರಿತಂ ಮಯಾ ॥ ೩೬ ॥

ತತ್ಸರ್ವಂ ಭಗವಂಚ್ಛಂಭೋ ಭವದಾರಾಧನಂ ಪರಂ ।
ಇತಿ ಶಂಖೋದಕೇನೈವ ಸಪುಷ್ಪೇಣ ಸಮರ್ಪಯೇತ್ ॥ ೩೭ ॥

---

ಯನ್ನು ಮಾಡಿ ಮುಗಿಸಬೇಕು. ದೇವನನ್ನೂ, ದೇವಿಯನ್ನೂ, ಧ್ಯಾನಮಾಡುತ್ತಾ ಮೂಲಮಂತ್ರವನ್ನು ಒಂದನೂರೆಂಟುಸಾರಿ ಜಪಿಸಬೇಕು.

೩೩–೩೫. ಮೂಲಮಂತ್ರವನ್ನು ಜಪಮಾಡಿದ ನಂತರ ಎದ್ದು ನಿಂತುಕೊಂಡು ಪುಷ್ಪಾಂಜಲಿಯನ್ನು ಹಿಡಿದುಕೊಂಡು ಮಹಾದೇವನನ್ನು ಧ್ಯಾನಮಾಡಿ ಕ್ರಮವಾಗಿ "ಯೋದೇವಾನಾಂ" ಎಂಬ ಮಂತ್ರವನ್ನು ಮೊದಲುಗೊಂಡು "ಯೋ ವೇದಾ ಸ್ವರಃ ಪ್ರೋಕ್ತ" ವೆಂಬ ಮಂತ್ರದ ಕೊನೆಯವರಿಗೂ ಹೇಳಿದನಂತರ ತಾನು ಹಿಡಿದಿರುವ ಪುಷ್ಪಾಂಜಲಿಯನ್ನು ಅರ್ಪಿಸಿ ಮೂರು ಪ್ರದಕ್ಷಿಣೆಯನ್ನು ಮಾಡಬೇಕು. ಅನಂತರ ಶಿವನನ್ನು ಧ್ಯಾನ ಮಾಡುತ್ತಾ ಅಷ್ಟಾಂಗಯುಕ್ತವಾದ ನಮಸ್ಕಾರವನ್ನು ಭಕ್ತಿಯಿಂದ ಮಾಡಬೇಕು. ಹೀಗೆಯೇ ಅನೇಕಸಾರಿ ಪ್ರದಕ್ಷಿಣೆ ಮತ್ತು ನಮಸ್ಕಾರಗಳನ್ನು ಮಾಡಬೇಕು.

೩೬–೩೭. ಅನಂತರ ತನ್ನ ಆಸನದಲ್ಲಿ ಕುಳಿತುಕೊಂಡು "ಭವಾಯದೇವಾಯ ನಮಃ" ಎಂದು ಶಿವನ ಎಂಟು ನಾಮಗಳಿಂದ ಪೂಜೆಯನ್ನು ಮಾಡಿ–ನಾನು ಶಾಸ್ತ್ರ ಸಮ್ಮತವಾದ ಪೂಜೆಯನ್ನು ಸರಿಯಾದ ರೀತಿಯಿಂದಲೋ, ಅಥವಾ ಸರಿಯಲ್ಲದ ರೀತಿಯಿಂದಲೋ ಮಾಡಿರುವೆನು. ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ಶಿವನೇ,

**ಪೂಜ್ಯಂ ಪುನಸ್ಸಮಭ್ಯರ್ಚ್ಯ ಸಾರ್ಘಂ ನಾಮಾಷ್ಟಕಂ ಜಪೇತ್ ।**
**ತದೇವ ಶೃಣು ದೇವೇಶಿ ಸಂಬ್ರುವೇ ತವ ಭಕ್ತಿತಃ ॥ ೩೮ ॥**

**ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾ-
ಮಾವರಣಪೂಜಾವರ್ಣನಂ ನಾಮಾಷ್ಟಮೋಽಧ್ಯಾಯಃ**



ಇವೆಲ್ಲವೂ ನಿನ್ನ ಉತ್ತಮವಾದ ಸೇವೆಗೆ ಸೇರಿರುವುವು ಎಂಬುದಾಗಿ ಹೇಳುತ್ತಾ ಹೂವಿನಿಂದ ಕೂಡಿರುವ ಶಂಖದ ನೀರಿನಿಂದ ಅರ್ಪಿಸಬೇಕು.

೩೮. ಎಲೈ ದೇವೇಶಿಯೇ ಕೇಳು :—ಶಿವನನ್ನು ಪೂಜಿಸಿ ಎಂದರೆ ಪುನಃ ಪೂಜೆಮಾಡಿ ಅರ್ಘವನ್ನು ಅನುಸಂಧಾನಮಾಡುತ್ತಾ ಶಿವನ ಎಂಟುನಾಮಗಳನ್ನೂ ಜಪಿಸಬೇಕು. ನಾನು ನಿನ್ನ ಭಕ್ತಿಗೆ ಮೆಚ್ಚಿ ಇನೆಲ್ಲವನ್ನೂ ವಿಸ್ತಾರವಾಗಿ ಹೇಳುವೆನು. ಸಾವಧಾನವಾಗಿ ಕೇಳು ಎಂದನು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಆವರಣಪೂಜಾ
ವರ್ಣನವೆಂಬ ಎಂಟನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ಕೈಲಾಸಸಂಹಿತಾಯಾಂ

## ನವಮೋಽಧ್ಯಾಯಃ

---

॥ ಈಶ್ವರ ಉವಾಚ ॥

ಶಿವೋ ಮಹೇಶ್ವರಶ್ಚೈವ ರುದ್ರೋ ವಿಷ್ಣುಃ ಪಿತಾಮಹಃ ।
ಸಂಸಾರವೈದ್ಯಸ್ಸರ್ವಜ್ಞಃ ಪರಮಾತ್ಮೇತಿ ಮುಖ್ಯತಃ ॥ ೧ ॥

ನಾಮಾಷ್ಟಕಮಿದಂ ನಿತ್ಯಂ ಶಿವಸ್ಯ ಪ್ರತಿಪಾದಕಂ ।
ಆದ್ಯಂತಪಂಚಕಂ ತತ್ರ ಶಾಂತ್ಯತೀತಾದ್ಯನುಕ್ರಮಾತ್ ॥ ೨ ॥

## ಒಂಭತ್ತನೆಯ ಅಧ್ಯಾಯವು

೧-೩. ಈಶ್ವರನಿಂತೆಂದನು :—ಶಿವ, ಮಹೇಶ್ವರ, ರುದ್ರ, ವಿಷ್ಣು, ಪಿತಾಮಹ, ಸಂಸಾರವೈದ್ಯ, ಸರ್ವಜ್ಞ, ಪರಮಾತ್ಮ ಎಂಬ ಎಂಟು ಹೆಸರುಗಳೂ ಮುಖ್ಯವಾಗಿ ಯಾವಾಗಲೂ ಶಿವನನ್ನೇ ನಿರ್ದೇಶಮಾಡಿ ಹೇಳುತ್ತಿರುವವು. ಮೊದಲಿನಿಂದ ಐದು ಹೆಸರುಗಳು ಕ್ರಮವಾಗಿ ಶಾಂತ್ಯತೀತವೇ ಮೊದಲಾಗಿ ಐದು ಉಪಾಧಿಗಳನ್ನು ಅಂಗೀಕರಿಸಿರುವ ಕಾರಣ ಸದಾಶಿವನೇ ಮೊದಲಾದ ಹೆಸರುಗಳಿಗೆ (ತತ್ತ್ವ

ಸಂಜ್ಞಾ ಸದಾಶಿವಾದೀನಾಂ ಪಂಚೋಪಾಧಿಪರಿಗ್ರಹಾತ್ ।
ಉಪಾಧಿವಿನಿವೃತ್ತೌ ತು ಯಥಾಸ್ವಂ ವಿನಿವರ್ತತೇ ॥ ೩ ॥

ಪದಮೇವ ಹಿತಂ ನಿತ್ಯಮನಿತ್ಯಾಃ ಪದಿನಃ ಸ್ಮೃತಾಃ ।
ಪದಾನಾಂ ಪರಿವೃತ್ತಿಃ ಸ್ಯಾನ್ಮುಚ್ಯಂತೇ ಪದಿನೋ ಯತಃ ॥ ೪ ॥

ಪರಿವೃತ್ತ್ಯಂತರೇ ತ್ವೇವಂ ಭೂಯಸ್ತಸ್ಯಾಪ್ಯುಪಾಧಿನಾ ।
ಆತ್ಮಾಂತರಾಭಿಧಾನಂ ಸ್ಯಾತ್ಪದಾದ್ಯಂ ನಾಮಪಂಚಕಂ ॥ ೫ ॥

ಅನ್ಯತ್ತು ತ್ರಿತಯಂ ನಾಮ್ನಾಮುಪಾದಾನಾದಿಭೇದತಃ ।
ತ್ರಿವಿಧೋಪಾಧಿರಚನಾಚ್ಛಿವ ಏವ ತು ವರ್ತತೇ ॥ ೬ ॥

ಅನಾದಿಮಲಸಂಶ್ಲೇಷಪ್ರಾಗಭಾವಾತ್ಸ್ವಭಾವತಃ ।
ಆತ್ಯಂತಪರಿಶುದ್ಧಾತ್ಮೇತ್ಯತೋಽಯಂ ಶಿವ ಉಚ್ಯತೇ ॥ ೭ ॥

---

ಗಳಿಗೆ) ಸಂಜ್ಞೆಯಾಗಿರುವುವು. ಉಪಾಧಿಗಳು ಕಳೆದುಹೋದರೆ ಕ್ರಮವಾಗಿ ಸಂಜ್ಞೆಗಳೂ ನಿವೃತ್ತವಾಗುವುವು.

೪. ಪದವೇ ಯಾವಾಗಲೂ ನಿತ್ಯವಾಗಿರುವುದು. ಪದಗಳ ಅರ್ಥವು ಅನಿತ್ಯವಾಗಿರುವುದು. ಪದಗಳ ಬದಲಾವಣೆಯಿಂದ ಪದಗಳ ಅರ್ಥಗಳು ಬದಲಾಯಿಸುವುವು.

೫-೬. ಆದ್ದರಿಂದಲೇ ಈ ಪದಗಳಿಗೆ ಬದಲಾಗಿ ಬೇರೆಯ ಪದಗಳನ್ನು ಬದಲಾಯಿಸಿ ಹೇಳಿದರೆ ಆಯಾಯ ಪದಗಳಿಗೆ ಅನುಸಾರವಾದ ಉಪಾಧಿಯನ್ನು ಅನುಸರಿಸಿ ಬೇರೆಯ ಪದಾರ್ಥಗಳನ್ನು ಹೇಳುವ ಸಾಮರ್ಥ್ಯವು ಉಂಟಾಗುವುದು. ಹೀಗಿರುವುದರಿಂದ ಈ ಎಂಟು ಹೆಸರುಗಳಲ್ಲಿ ಮೊದಲನೆಯ ಐದು ಹೆಸರುಗಳು ಶಿವಾದಿಮೂರ್ತಿಗಳಿಗೆ ಅನ್ವಯಿಸುವವು. ಕೊನೆಯದಾಗಿರುವ ಮೂರು ಹೆಸರುಗಳು ಮಾತ್ರ ಮುಖ್ಯವಾದ ವೃತ್ತಿಯಿಂದ ಮೂರು ವಿಧವಾದ ಉಪಾದಿಗಳ ಸಂಬಂಧವು ನಿರತಿಶಯವಾಗಿರುವ ಕಾರಣ ಪರಶಿವನನ್ನೇ (ಪರಬ್ರಹ್ಮ) ಸಾಕ್ಷಾತ್ತಾಗಿ ಹೇಳುವುವು.

೭. ಶಿವವಾಚ್ಯಗಳಾದ ಹಿಂದೆ ಹೇಳಿದ ಎಂಟು ಪದಗಳಿಗೂ ಅರ್ಥವಿವರಣೆಯನ್ನು ಮಾಡುವರು. ಈಶ್ವರನು ಆದಿ ಇಲ್ಲದವನು ಎಂದರೆ ಯಾವಾಗಲೂ ಇರತಕ್ಕವನು. ನಾಶರಹಿತನು. ದೋಷರಹಿತನು. ಅತ್ಯಂತ ಪರಿಶುದ್ಧನಾದವನು. ಆದುದರಿಂದಲೇ ಈಶ್ವರನಿಗೆ ಶಿವನೆಂದು ಹೆಸರು ಪ್ರಸಿದ್ಧವಾಗಿರುವುದು.

ಅಥವಾ ಶೇಷಕಲ್ಯಾಣಗುಣೈಕಧನ ಈಶ್ವರಃ ।
ಶಿವ ಇತ್ಯುಚ್ಯತೇ ಸದ್ಭಿಶ್ಶಿವತತ್ತ್ವಾರ್ಥವೇದಿಭಿಃ ॥ ೮ ॥

ತ್ರಯೋವಿಂಶತಿತತ್ತ್ವೇಭ್ಯಃ ಪರಾ ಪ್ರಕೃತಿರುಚ್ಯತೇ ।
ಪ್ರಕೃತೇಸ್ತು ಪರಂ ಪ್ರಾಹುಃ ಪುರುಷಂ ಪಂಚವಿಂಶಕಂ ॥ ೯ ॥

ಯದ್ವೇದಾದೌ ಸ್ವರಂ ಪ್ರಾಹುರ್ವಾಚ್ಯವಾಚಕಭಾವತಃ ।
ವೇದೈಕವೇದ್ಯಂ ಯಾಥಾತ್ಮ್ಯಾದ್ವೇದಾಂತೇ ಚ ಪ್ರತಿಷ್ಠಿತಂ॥ ೧೦ ॥

ಸ ಏವ ಪ್ರಕೃತೌ ಲೀನೋ ಭೋಕ್ತಾ ಯಃ ಪ್ರಕೃರೇರ್ಯತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥ ೧೧ ॥

ತದಧೀನಪ್ರವೃತ್ತಿತ್ವಾತ್ಪ್ರಕೃತೇಃ ಪುರುಷಸ್ಯ ಚ ।
ಅಥವಾ ತ್ರಿಗುಣಂ ತತ್ತ್ವಂ ಮಾಯೇಯಮಿದಮವ್ಯಯಂ ॥ ೧೨ ॥

---

೮. ಅಥವಾ ಈಶ್ವರನು ಸಮಸ್ತ ಕಲ್ಯಾಣಗುಣಪರಿಪೂರ್ಣನಾದುದರಿಂದ ಇವನನ್ನು ಶಿವನೆಂದು ಶಿವತತ್ವವನ್ನು ತಿಳಿದ ಜ್ಞಾನಿಗಳು ಹೇಳುವರು.

೯. ಇಪ್ಪತ್ತಮೂರು ತತ್ತ್ವಗಳಿಗಿಂತಲೂ, ಪ್ರಕೃತಿಯು ಉತ್ತಮವಾದದ್ದು. ಈ ಇಪ್ಪತ್ತ ನಾಲ್ಕನೇ ಪ್ರಕೃತಿಗಿಂತಲೂ ಪುರುಷನು ಬೇರೆಯಾದವನು ಮತ್ತೂ ಶ್ರೇಷ್ಠನು. ಆದುದರಿಂದ ಇವನು ಇಪ್ಪತ್ತೈದನೆಯ ತತ್ತ್ವಸ್ವರೂಪನು ಎಂದು ಹೇಳುವರು.

೧೦-೧೧. ಯಾವುದು ವೇದಗಳ ಆದಿಯಲ್ಲಿ ವಾಚ್ಯವಾಚಕಭಾವವನ್ನು ಹೊಂದಿ ಸ್ವರರೂಪದಿಂದ ಇರುವುದೋ, ತನ್ನ ನಿಜವಾದ ರೂಪದಿಂದ ವೇದ ಮಾತ್ರ ದಿಂದಲೇ ತಿಳಿಯಲು ಶಕ್ಯವಾಗಿರುವುದೋ, ವೇದಗಳ ಕೊನೆಯಾದ ಉಪನಿಷತ್ತಿನಲ್ಲಿಯೂ, ಪ್ರತಿಪಾದಿತವಾಗಿರುವುದೋ ಆ ಆತ್ಮಸ್ವರೂಪವೇ ಎಂದರೆ ಬ್ರಹ್ಮಸ್ವರೂಪವೇ ಪ್ರಕೃತಿಯಲ್ಲಿ ಅಡಗಿಕೊಂಡು ಪ್ರಕೃತಿಯ ಸಂಬಂಧವಾದ ಭೋಗವನ್ನು ಅನುಭವಿಸತಕ್ಕದ್ದಾಗಿರುವುದು. ಪ್ರಕೃತಿಯಲ್ಲಿ ಲೀನವಾಗಿರುವ ಆ ಪ್ರಕಾರದಿಂದ ಇರುವ ಉತ್ತಮವಾದ ತತ್ತ್ವವೇ ಮಹೇಶ್ವರನೆನಿಸಿರುವುದು. ಈ ಮಹೇಶ್ವರನಿಗೆ ಪ್ರಕೃತಿಯೂ, ಪುರುಷನೂ ಅಧೀನರಾಗಿರುವರು.

೧೨-೧೩. ಹೀಗಿಲ್ಲದಿದ್ದರೆ ಇನ್ನೂ ಬೇರೆಯ ವಿಧದಿಂದ ಹೇಳುತ್ತೇನೆ. ಈ ಪ್ರಕೃತಿಯ ಗುಣಗಳು ಸತ್ತ್ವ, ರಜಸ್ಸು, ತಮಸ್ಸೆಂಬ ತ್ರಿಗುಣತತ್ತ್ವವು ಮಾಯಾ

ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ।
ಮಾಯಾವಿಮೋಚಕೋಽನಂತೋ ಮಹೇಶ್ವರಸಮನ್ವಯಾತ್ ॥ ೧೩ ॥

ರುದ್ದುಃಖಂ ದುಃಖಹೇತುರ್ವಾ ತದ್ರಾವಯತಿ ಯಃ ಪ್ರಭುಃ ।
ರುದ್ರ ಇತ್ಯುಚ್ಯತೇ ತಸ್ಮಾಚ್ಛಿವಃ ಪರಮಕಾರಣಂ ॥ ೧೪ ॥

ಶಿವತತ್ತ್ವಾದಿಭೂಮ್ಯಂತಂ ಶರೀರಾದಿ ಘಟಾದಿ ಚ ।
ವ್ಯಾಪ್ಯಾಧಿತಿಷ್ಠತಿ ಶಿವಸ್ತಸ್ಮಾದ್ವಿಷ್ಣುರುದಾಹೃತಃ ॥ ೧೫ ॥

ಜಗತಃ ಪಿತೃಭೂತಾನಾಂ ಶಿವೋ ಮರ್ತ್ಯಾತ್ಮನಾಮಪಿ ।
ಪಿತೃಭಾವೇನ ಸರ್ವೇಷಾಂ ಪಿತಾಮಹ ಉದೀರಿತಃ ॥ ೧೬ ॥

ನಿದಾನಜ್ಞೋ ಯಥಾ ವೈದ್ಯೋ ರೋಗಸ್ಯ ವಿನಿವರ್ತಕಃ ।
ಉಪಾಯೈರ್ಭೇಷಜೈಸ್ತದ್ವಲ್ಲಯಭೋಗಾಧಿಕಾರಕಃ ॥ ೧೭ ॥

---

ಎಂದೆನಿಸಿಕೊಂಡಿರುವುದು. ಈ ತ್ರಿಗುಣರೂಪವಾದ ತತ್ತ್ವವು ಯಾವಾಗಲೂ ಇರುವುದು. ಮಾಯೆಯನ್ನು ಪ್ರಕೃತಿ ಎಂಬುದಾಗಿಯೂ, ಮಹೇಶ್ವರನನ್ನು ಮಾಯಾ ಪ್ರೇರಕನು ಎಂಬುದಾಗಿಯೂ ತಿಳಿಯತಕ್ಕದ್ದು. ಮಾಯಾ ಸಂಬಂಧವನ್ನು ತಪ್ಪಿಸುವವನು ಅನಂತನು. ಇವನೇ ಮಹೇಶ್ವರನೆನಿಸುವನು.

೧೪. ರುಃ ಎಂದರೆ ದುಃಖವು ಅಥವಾ ದುಃಖಕ್ಕೆ ಕಾರಣವು. ಪ್ರಭುವಾದ ಶಿವನು ಅದನ್ನು ತಪ್ಪಿಸುವನು. ಆದ್ದರಿಂದ ಶಿವನಿಗೆ ರುದ್ರನೆಂದು ಹೆಸರು. ಈ ಶಿವನು ಎಲ್ಲಕ್ಕೂ ಉತ್ತಮವಾದ ಕಾರಣನಾಗಿರುವನು.

೧೫–೧೮. ಶಿವತತ್ತ್ವವೇ ಮೊದಲುಮಾಡಿಕೊಂಡು ಭೂಮಿ, ಘಟ, ಶರೀರ ಇವೇ ಮೊದಲಾದ ಎಲ್ಲಾ ಪದಾರ್ಥಗಳನ್ನೂ ವ್ಯಾಪಿಸಿಕೊಂಡಿರುವುದರಿಂದ ಶಿವನೇ ವಿಷ್ಣುವೆನಿಸುವನು. ಆಕಾರವನ್ನು ಹೊಂದಿರುವ ಎಲ್ಲಾ ಪದಾರ್ಥಗಳಿಗೂ, ಮತ್ತು ಜಗತ್ತಿನಲ್ಲಿ ಶರೀರಧಾರಿಗಳಾದ ಮನುಷ್ಯರಿಗೂ, ಪ್ರಾಣಿಗಳಿಗೂ ತಂದೆಯಾಗಿರುವ ಕಾರಣ ಶಿವನು ಪಿತಾಮಹನೆನಿಸಿಕೊಳ್ಳುವನು. ವೈದ್ಯನು ರೋಗಕ್ಕೆ ಕಾರಣವನ್ನು ತಿಳಿದು ಆಯಾಯ ರೋಗಗಳನ್ನು ಅದಕ್ಕೆ ತಕ್ಕ ಉಪಾಯಗಳಿಂದಲೂ, ಔಷಧಿಗಳಿಂದಲೂ, ನಾಶಮಾಡಿ ಸೌಖ್ಯವನ್ನುಂಟುಮಾಡುವಹಾಗೆ ಶಿವನು ಸ್ಥೂಲವಾದ ಈ ಪ್ರಪಂಚದ ಜನನಮರಣರೂಪವಾದ ಸಂಸಾರವನ್ನು ತನಗೆ ಸಂಬಂಧಪಟ್ಟ ಲಯ

ಸಂಸಾರಸ್ಯೇಶ್ವರೋ ನಿತ್ಯಂ ಸ್ಥೂಲಸ್ಯ ವಿನಿವರ್ತಕಃ ।
ಸಂಸಾರವೈದ್ಯ ಇತ್ಯುಕ್ತಸ್ಸರ್ವತತ್ತ್ವಾರ್ಥವೇದಿಭಿಃ ॥ ೧೮ ॥

ದಶಾರ್ಧಜ್ಞಾನಸಿದ್ಧ್ಯರ್ಥಮಿಂದ್ರಿಯೇಷು ಚ ಸತ್ಸ್ವಪಿ ।
ತ್ರಿಕಾಲಭಾವಿನೋ ಭಾವಾನ್ಸ್ಥೂಲಾನ್ಸೂಕ್ಷ್ಮಾನಶೇಷತಃ ॥ ೧೯ ॥

ಅಣವೋ ನೈವ ಜಾನಂತಿ ಮಾಯಾರ್ಣವಮಲಾವೃತಾಃ ।
ಅಸತ್ಸ್ವಪಿ ಚ ಸರ್ವೇಷು ಸಿದ್ಧಸರ್ವಾರ್ಥವೇದಿಷು ॥ ೨೦ ॥

ಯದ್ಯಥಾವಸ್ಥಿತಂ ವಸ್ತು ತತ್ತಥೈವ ಸದಾಶಿವಃ ।
ಅಯತ್ನೇನೈವ ಜಾನಾತಿ ತಸ್ಮಾತ್ಸರ್ವಜ್ಞ ಉಚ್ಯತೇ ॥ ೨೧ ॥

ಸರ್ವಾತ್ಮಾ ಪರಮೈರೇಭಿರ್ಗುಣೈರ್ನಿತ್ಯಸಮನ್ವಯಾತ್ ।
ಸ್ವಸ್ಮಾತ್ಪರಾತ್ಮವಿರಹಾತ್ಪರಮಾತ್ಮಾ ಶಿವಸ್ಸ್ವಯಂ ॥ ೨೨ ॥

---

ಭೋಗಗಳೆಂಬ ಅಧಿಕಾರದಿಂದ ನಾಶಪಡಿಸುವನಾದ್ದರಿಂದ ಶಿವತತ್ತ್ವದ ಅರ್ಥವನ್ನು ತಿಳಿದ ಪೂಜ್ಯರೆಲ್ಲರೂ ಶಿವನನ್ನು ಸಂಸಾರ ವೈದ್ಯನೆಂದು ಕರೆಯುವರು.

೧೯-೨೧. ಆಯಾಯ ಇಂದ್ರಿಯಗಳ ಮೂಲಕ ಶಬ್ದಾದಿ ಐದು ವಿಧವಾದ ಜ್ಞಾನವು ಉಂಟಾಗುತ್ತಿರುವಾಗ ಮೂರು ಕಾಲಗಳಲ್ಲಿಯೂ, ಉಂಟಾಗಬಹುದಾದ ಸ್ಥೂಲಸೂಕ್ಷ್ಮರೂಪದಿಂದ ಇರುವ ವಿಷಯಗಳನ್ನು ಮಾಯೆಯ ಬಲವಾದ ಮಲದ ಮಹಿಮೆಯಿಂದ ಆವರಿಸಲ್ಪಟ್ಟ ಅಣುಗಳಾದ ಜೀವರು ತಿಳಿಯಲಾರದೆ ಇರುವರು. ಎಲ್ಲಾ ವಿಧವಾದ ಜ್ಞಾನವನ್ನು ತಿಳಿಯಲು ಇಂದ್ರಿಯಗಳಿಗೆ ಸಾಮರ್ಥ್ಯವಿಲ್ಲ, ಆ ನಿಶ್ಚಯಜ್ಞಾನವನ್ನು ತಿಳಿಯಲು ತಕ್ಕ ಸಾಧನಾದಿಗಳು ಜೀವರಿಗೆ ಇಲ್ಲ. ಆದರೆ ಆಯಾಯ ಪದಾರ್ಥಗಳ ನಿಜಸ್ಥಿತಿಯನ್ನು ಈ ಸದಾಶಿವನು ಯಾವ ಪ್ರಯತ್ನವೂ ಇಲ್ಲದೆ ಅನಾಯಾಸವಾಗಿ ತಿಳಿಯುವುದರಿಂದ ಈ ಸದಾಶಿವರೂಪದಿಂದ ಇರುವ ಶಿವನನ್ನು ಸರ್ವಜ್ಞನೆಂದು ಹೇಳುವರು.

೨೨. ಶಿವನು ಉತ್ತಮವಾದ ಈ ಗುಣಗಳಿಂದ ಯಾವಾಗಲೂ ಕೂಡಿರುವವನಾದ್ದರಿಂದಲೂ, ತನಗಿಂತಲೂ ಉತ್ತಮರಾದವರು ಬೇರೆ ಯಾರೂ ಇಲ್ಲದಿರುವುದರಿಂದಲೂ ಶಿವನನ್ನು ಪರಮಾತ್ಮನೆಂದು ಹೇಳುವರು.

ಇತಿ ಸ್ತುತ್ವಾ ಮಹಾದೇವಂ ಪ್ರಣವಾತ್ಮಾನಮವ್ಯಯಂ ।
ದತ್ವಾ ಪರಾಙ್ಮುಖಾರ್ಘ್ಯಂ ಚ ಪಶ್ಚಾದೀಶಾನಮಸ್ತಕೇ ॥ ೨೩ ॥

ಪುನರಭ್ಯರ್ಚ್ಯ ದೇವೇಶಂ ಪ್ರಣವೇನ ಸಮಾಹಿತಃ ।
ಹಸ್ತೇನ ಬದ್ಧಾಂಜಲಿನಾ ಪೂಜಾಪುಷ್ಪಂ ಪ್ರಗೃಹ್ಯ ಚ ॥ ೨೪ ॥

ಉನ್ಮನಾಂತಂ ಶಿವಂ ನೀತ್ವಾ ವಾಮನಾಸಾಪುಟಾಧ್ವನಾ ।
ದೇವೀಮುದ್ವಾಸ್ಯ ಚ ತತೋ ದಕ್ಷನಾಸಾಪುಟಾಧ್ವನಾ ॥ ೨೫ ॥

ಶಿವ ಏವಾಹಮಸ್ಮೀತಿ ತದೈಕ್ಯಮನುಭೂಯ ಚ ।
ಸರ್ವಾವರಣದೇವಾಂಶ್ಚ ಪುನರುದ್ವಾಸಯೇದ್ಧೃದಿ ॥ ೨೬ ॥

ವಿದ್ಯಾಪೂಜಾಂ ಗುರೋಃ ಪೂಜಾಂ ಕೃತ್ವಾ ಪಶ್ಚಾದ್ಯಥಾಕ್ರಮಂ ।
ಶಂಖಾರ್ಘ್ಯಪಾತ್ರಮಂತ್ರಾಂಶ್ಚ ಹೃದಯಂ ವಿನ್ಯಸೇತ್ಕ್ರಮಾತ್ ॥ ೨೭ ॥

---

೨೩–೨೬. ಸಾಧಕನಾದವನು ಪ್ರಣವರೂಪದಿಂದ ಇರುವ ಪರಿಪೂರ್ಣನಾದ ಮಹಾದೇವನನ್ನು ಈ ಪ್ರಕಾರದಿಂದ ಸ್ತುತಿಮಾಡಿ, ಶಿವನಿಗೆ ಬ್ರಹ್ಮವಿಷಯಕವಾದ ಲೋಕಸಂಬಂಧರಹಿತವಾದ ಆತ್ಮಜ್ಞಾನವನ್ನು ಚೆನ್ನಾಗಿ ಭಾವನೆಮಾಡಿ, ಈಶಾನ ಶಿರಸ್ಸಿನಿಂದಿರುವ ಈ ಶಿವನಿಗೆ ಪ್ರಣವಮಂತ್ರದಿಂದ ಮತ್ತೆ ಪೂಜಿಸಿ, ಕೃತಾಂಜಲಿ ಪುರಸ್ಸರವಾಗಿ ಕೈಗಳಿಂದ ಹೂವುಗಳನ್ನು ತುಂಬಿ ಹಿಡಿದುಕೊಂಡು, ತನ್ನ ಶಿವ ಭಾವನೆಯಿಂದ ಉನ್ಮನೀವರೆಗೂ ಭಾವನೆಯನ್ನು ಮಾಡಿದನಂತರ, ತನ್ನ ಎಡಗಡೆಯ ಮೂಗಿನ ರಂಧ್ರದಿಂದ ದೇವಿಯನ್ನು ಉದ್ವಾಸನೆಮಾಡಬೇಕು. ಅನಂತರ ಮೂಗಿನ ಬಲಗಡೆಯ ರಂಧ್ರದಿಂದ ನಾನು ಶಿವನಾಗಿರುವೆನು (ಶಿವೋಽಹಂ) ಎಂದು ಶಿವನ ಐಕ್ಯವನ್ನು ಚೆನ್ನಾಗಿ ಅನುಭವಿಸಿ, ಆವರಣದೇವತೆಗಳೆಲ್ಲರನ್ನೂ ತನ್ನ ಹೃದಯದಲ್ಲಿ ಮತ್ತೆ ಉದ್ವಾಸನೆಯನ್ನು ಮಾಡಿಕೊಳ್ಳಬೇಕು.

೨೭–೨೮. ಅನಂತರ ವಿದ್ಯೆಯ ಪೂಜೆಯನ್ನೂ, ಗುರುವಿನ ಪೂಜೆಯನ್ನೂ, ಕ್ರಮವಾಗಿ ಮಾಡಬೇಕು. ಶಂಖಮಂತ್ರ, ಅರ್ಘ್ಯಪಾತ್ರಮಂತ್ರ, ಇವುಗಳನ್ನು ತನ್ನ ಹೃದಯದಲ್ಲಿ ಕ್ರಮವಾಗಿ ನ್ಯಾಸಮಾಡಿಕೊಳ್ಳಬೇಕು. ಶಿವನಿಗೆ

ನಿರ್ಮಾಲ್ಯಂ ಚ ಸಮುತ್ಸೃಜ್ಯಾಽಥ ಚಂಡೇಶಾಯೇಶಗೋಚರೇ ।
ಪುನಶ್ಚ ಸಂಯತಪ್ರಾಣ ಋಷ್ಯಾದಿಕಮಥೋಚ್ಚರೇತ್ ॥ ೨೮ ॥

ಕೈಲಾಸಪ್ರಸ್ತರೋ ನಾಮ ಮಂಡಲಂ ಪರಿಭಾಷಿತಂ ।
ಅರ್ಚಯೇನ್ನಿತ್ಯಮೇವೈತತ್ಪಕ್ಷೇ ವಾ ಮಾಸಿಮಾಸಿ ವಾ ॥ ೨೯ ॥

ಷಣ್ಮಾಸೇ ವತ್ಸರೇ ವಾಪಿ ಚಾತುರ್ಮಾಸ್ಯಾದಿಪರ್ವಣಿ ।
ಅವಶ್ಯಂ ಚ ಸಮಭ್ಯರ್ಚೇನ್ನಿತ್ಯಂ ಮಲ್ಲಿಂಗಮಾಸ್ತಿಕಃ ॥ ೩೦ ॥

ತಸ್ಮಿನ್ಕ್ರಮೇ ಮಹಾದೇವಿ ವಿಶೇಷಃ ಕೋಽಪಿ ಕಥ್ಯತೇ ।
ಉಪದೇಶದಿನೇ ಲಿಂಗಂ ಪೂಜಿತಂ ಗುರುಣಾ ಸಹ ॥ ೩೧ ॥

ಗೃಹ್ಣೀಯಾದರ್ಚಯಿಷ್ಯಾಮಿ ಶಿವಮಾಪ್ರಾಣಸಂಕ್ಷಯಂ ।
ಏವಂ ತ್ರಿವಾರಮುಚ್ಚಾರ್ಯ ಶಪಥಂ ಗುರುಸನ್ನಿಧೌ ॥ ೩೨ ॥

---

ಪ್ರತ್ಯಕ್ಷವಾಗಿ ಎದುರಿಗೆ ಇರುವ ಚಂಡೇಶನ ಸನ್ನಿಧಿಯಲ್ಲಿ, ನಿರ್ಮಾಲ್ಯವನ್ನು ವಿಸರ್ಜನೆಮಾಡಿದನಂತರ, ಪುನಃ ಪ್ರಾಣಾಯಾಮಪೂರ್ವಕವಾಗಿ ಶ್ವಾಸಧಾರಣೆಯನ್ನು ಮಾಡಿಕೊಂಡು ಋಷಿದೇವತಾಛಂದಸ್ಸುಗಳನ್ನು ಉಚ್ಚರಿಸಬೇಕು.

೨೯. ಈ ಪ್ರಕಾರದಿಂದ ಮಾಡಿರುವ (ಯಂತ್ರವು) ಮಂಡಲವು ಕೈಲಾಸಪ್ರಸ್ತರವೆನಿಸುವುದು. ಈ ರೀತಿಯಾಗಿ ಮಂಡಲದಲ್ಲಿ ಪ್ರತಿದಿನವಾಗಲಿ, ಪಕ್ಷಪರಿಯಂತರವಾಗಲಿ, ಪ್ರತಿತಿಂಗಳಿನಲ್ಲಿಯಾಗಲಿ, ಆರುತಿಂಗಳಿಗೊಂದುಸಾರಿಯಾಗಲಿ, ವರ್ಷಕ್ಕೊಂದುಸಾರಿಯಾಗಲಿ, ಪೂಜಿಸಬೇಕು.

೩೦. ಆಸ್ತಿಕನಾದವನು ಚಾತುರ್ಮಾಸ್ಯದ ಪರ್ವಕಾಲಗಳಲ್ಲಿ ಶಿವಲಿಂಗರೂಪದಿಂದ ಇರುವ ನನ್ನನ್ನು ಅವಶ್ಯಕವಾಗಿ ಪ್ರತಿದಿನವೂ ಪೂಜಿಸಬೇಕು. ಎಲೈ ಮಹಾದೇವಿಯೇ ಕೇಳು, ಆ ದಿವಸದಲ್ಲಿ ಪೂಜೆಯನ್ನು ಮಾಡುವ ಕ್ರಮವನ್ನೂ ಬೇರೆ ವಿಧವಾದ ವಿಶೇಷಕ್ರಮುವನ್ನೂ ಹೇಳುವೆನು'

೩೧-೩೨. ಸಾಧಕನಾದವನು ತನಗೆ ಗುರುವಿನಿಂದ ಮಂತ್ರೋಪದೇಶವು ದೊರಕಿದ ದಿನ ಪೂಜೆಮಾಡಿದ ಲಿಂಗವನ್ನು ಗುರುವಿನಿಂದ ತೆಗೆದುಕೊಂಡು ಶಿವನನ್ನು ತನ್ನ ಪ್ರಾಣವಿರುವವರೆಗೂ, ಪೂಜಿಸುವನೆಂದು, ಗುರುವಿನ ಸನ್ನಿಧಿಯಲ್ಲಿ ಶಪಥವನ್ನು ಮೂರುಸಾರಿ ಮಾಡಿ ಜೋಪಾನವಾಗಿರಿಸಿಕೊಂಡು ಹಿಂದೆ ಹೇಳಿದ ಕ್ರಮದಿಂದ ಪ್ರತಿದಿನವೂ ಪೂಜೆಮಾಡಬೇಕು.

ತತಸ್ಸಮರ್ಚಯೇನ್ನಿತ್ಯಂ ಪೂರ್ವೋಕ್ತವಿಧಿನಾ ಪ್ರಿಯೇ ।
ಅರ್ಘ್ಯಂ ಸಮರ್ಪಯೇಲ್ಲಿಂಗಂ ಮೂರ್ಧನ್ಯರ್ಘ್ಯೋದಕೇನ ಚ ॥ ೩೩ ॥

ಪ್ರಣವೇನ ಸಮಭ್ಯರ್ಚ್ಯ ಧೂಪದೀಪೌ ಸಮರ್ಪಯೇತ್ ।
ಐಶಾನ್ಯಾಂ ಚಂಡಮಾರಾಧ್ಯ ನಿರ್ಮಾಲ್ಯಂ ಚ ನಿವೇದಯೇತ್ ॥ ೩೪ ॥

ಪ್ರಕ್ಷಾಲ್ಯ ಲಿಂಗಂ ವೇದಿಂ ಚ ವಸ್ತ್ರಪೂತೈರ್ಜಲೈಸ್ತತಃ ।
ನಿಃಕ್ಷಿಪ್ಯ ಪುಷ್ಪಂ ಶಿರಸಿ ಲಿಂಗಸ್ಯ ಪ್ರಣವೇನ ತು ॥ ೩೫ ॥

ಆಧಾರಶಕ್ತಿಮಾರಭ್ಯ ಶುದ್ಧವಿದ್ಯಾಸನಾವಧಿ ।
ವಿಭಾವ್ಯ ಸರ್ವಂ ಮನಸಾ ಸ್ಥಾಪಯೇತ್ಪರಮೇಶ್ವರಂ ॥ ೩೬ ॥

ಪಂಚಗವ್ಯಾದಿಭಿರ್ದ್ರವ್ಯೈರ್ಯಥಾವಿಭವಸಂಭೃತೈಃ ।
ಕೇವಲೈರ್ವಾ ಜಲೈಶ್ಶುದ್ಧೈಸ್ಸುರಭಿದ್ರವ್ಯವಾಸಿತೈಃ ॥ ೩೭ ॥

---

೩೩-೩೪. ಬಳಿಕ ಆ ಶಿವಲಿಂಗದ ಮೇಲುಗಡೆಯಲ್ಲಿ ಅರ್ಘ್ಯೋದಕವನ್ನು ಕೊಟ್ಟು ಪ್ರಣವದಿಂದಲೇ ಪೂಜಿಸಿ ಧೂಪದೀಪಗಳನ್ನು ಒಪ್ಪಿಸಿ, ಆ ಲಿಂಗದ ಈಶಾನ್ಯ ದಿಕ್ಕಿನಲ್ಲಿ ಚಂಡೇಶನನ್ನು ಪೂಜಿಸಿದನಂತರ ಆ ಚಂಡೇಶನ ಸಮೀಪದಲ್ಲಿ ನಿರ್ಮಾಲ್ಯವನ್ನು ವಿಸರ್ಜನೆ ಮಾಡಬೇಕು ಮತ್ತು ಚಂಡೇಶನಿಗೆ ತಾನು ಮಾಡಿರುವ ಶಿವಪೂಜೆಯನ್ನು ವರದಿ ಹೇಳಬೇಕು.

೩೫-೩೭. ಬಟ್ಟೆಯಿಂದ ಚೆನ್ನಾಗಿ ಶೋಧಿಸಿದ ನೀರಿನಿಂದ ಲಿಂಗವನ್ನೂ, ವೇದಿಕೆಯನ್ನೂ ತೊಳೆದು ಪ್ರಣವಮಂತ್ರದಿಂದ ಶಿವಲಿಂಗದ ಮೇಲುಗಡೆಯಲ್ಲಿ ಹೂವನ್ನು ಇರಿಸಿ ಆಧಾರಶಕ್ತಿಯನ್ನು ಪ್ರಾರಂಭಿಸಿ, ಶುದ್ಧವಿದ್ಯೆಯೇ ಕೊನೆಯಾಗುವವರಿಗೆ ಪೀಠವನ್ನೆಲ್ಲವನ್ನೂ ಮನಸ್ಸಿನಿಂದ ಭಾವಿಸಿಕೊಂಡು ಪರಮೇಶ್ವರನನ್ನು ಆ ಪೀಠದಲ್ಲಿ ಸ್ಥಾಪನೆಯನ್ನು ಮಾಡಿ ತನ್ನ (ವಿಭವ) ಐಶ್ವರ್ಯಕ್ಕನುಸಾರವಾಗಿ ಸಿದ್ಧಪಡಿಸಿದ ಪಂಚಗವ್ಯವೇ ಮೊದಲಾದ ಪದಾರ್ಥಗಳಿಂದಲೂ, ಪರಿಮಳದ್ರವ್ಯಗಳಿಂದ ಕೂಡಿರುವ ಪರಿಶುದ್ಧವಾದ ನೀರಿನಿಂದಲೂ, ಪವಮಾನಸೂಕ್ತಗಳು, ರುದ್ರಾಧ್ಯಾಯದ ಮಂತ್ರಗಳು, ಸಾಮವೇದದ ಋಕ್ಕಿನ ಮಂತ್ರಗಳು, ಪಂಚಬ್ರಹ್ಮಮಂತ್ರಗಳು, ಪ್ರಣವಮಂತ್ರಗಳು, ಶಿವಸಂಕಲ್ಪಸೂಕ್ತ ಇವುಗಳಿಂದ ಅಭಿಷೇಕವನ್ನು ಮಾಡಿ, ದೇವದೇವ

ಸಾಮಮಾನೇನ ರುದ್ರೇಣ ನೀಲೇನ ತ್ವರಿತೇನ ಚ ।
ಋುಗ್ಭಿಶ್ಚ ಸಾಮಭಿರ್ವಾಪಿ ಬ್ರಹ್ಮಭಿಶ್ಚೈವ ಪಂಚಭಿಃ ॥ ೩೮ ॥

ಸ್ನಾಪಯೇದ್ದೇವದೇವೇಶಂ ಪ್ರಣವೇನ ಶಿವೇನ ಚ ।
ವಿಶೇಷಾರ್ಘ್ಯೋದಕೇನಾಪಿ ಪ್ರಣವೇನಾಭಿಷೇಚಯೇತ್ ॥ ೩೯ ॥

ವಿಶೋಧ್ಯ ವಾಸಸಾ ಪುಷ್ಪಂ ಲಿಂಗಮೂರ್ಧನಿ ವಿನ್ಯಸೇತ್ ।
ಪೀಠೇ ಲಿಂಗಂ ಸಮಾರೋಪ್ಯ ಸೂರ್ಯಾದ್ಯರ್ಚಾಂ ಸಮಾಚರೇತ್ ॥ ೪೦ ॥

ಆಧಾರಶಕ್ತ್ಯನಂತೌ ದ್ವೌ ಪೀಠಾಧಸ್ತಾತ್ಸಮರ್ಚಯೇತ್ ।
ಸಿಂಹಾಸನಂ ತದೂರ್ಧ್ವಂ ತು ಸಮಭ್ಯರ್ಚ್ಯ ಯಥಾಕ್ರಮಂ ॥ ೪೧ ॥

ಅಥೋರ್ಧ್ವಚ್ಛದನಂ ಪೀಠಪಾದೇ ಸ್ಕಂದಂ ಸಮರ್ಚಯೇತ್ ।
ಲಿಂಗೇ ಮೂರ್ತಿಂ ಸಮಾಕಲ್ಪ್ಯ ಮಾಂ ತ್ವಯಾ ಸಹ ಪೂಜಯೇತ್ ॥ ೪೨ ॥

ಸಮ್ಯಗ್ಭಕ್ತ್ಯಾ ವಿಧಾನೇನ ಯತಿರ್ಮದ್ಧ್ಯಾನತತ್ಪರಃ ।
ಏವಂ ಮಯಾ ತೇ ಕಥಿತಮತಿಗುಹ್ಯಮಿದಂ ಪ್ರಿಯೇ ॥ ೪೩ ॥

---

ನಾದ ಶಿವನನ್ನು ಸ್ನಾನಮಾಡಿಸಬೇಕು. ಈ ಅಭಿಷೇಕವನ್ನು ಮಾಡುವಾಗ ವಿಶೇಷಾರ್ಘ್ಯದ ನೀರಿನಿಂದಲೂ, ಪ್ರಣವಮಂತ್ರದಿಂದ ಅಭಿಷೇಕವನ್ನು ಮಾಡಬೇಕು.

೩೯-೪೨. ನನ್ನನ್ನು ಧ್ಯಾನಮಾಡುವುದರಲ್ಲಿ ಆಸಕ್ತನಾಗಿರುವ ಯತಿಯು, ಭಕ್ತಿಯಿಂದ ಕೂಡಿದವನಾಗಿ ಶಾಸ್ತ್ರಕ್ರಮದಲ್ಲಿ ಹೇಳಿರುವ ಮಾರ್ಗವನ್ನು ಅನುಸರಿಸಿ ಹೂವುಗಳನ್ನೂ ಬಟ್ಟೆಯಿಂದ ಒರಸಿ ಶಿವಲಿಂಗದಮೇಲೆ ಪೂಜಿಸಬೇಕು. ಪೀಠದಲ್ಲಿ ಲಿಂಗವನ್ನು ಸ್ಥಾಪಿಸಿ ಸೂರ್ಯನೇ ಮೊದಲಾದವರ ಪೂಜೆಯನ್ನು ಮಾಡಬೇಕು. ಆಧಾರಶಕ್ತಿ, ಅನಂತ, ಇವರಿಬ್ಬರನ್ನೂ, ಪೀಠದ ಕೆಳಭಾಗದಲ್ಲಿ ಪೂಜಿಸಬೇಕು. ಅನಂತರದಲ್ಲಿ ಕ್ರಮವನ್ನು ಅನುಸರಿಸಿ ಸಿಂಹಾಸನವನ್ನು ಪೂಜಿಸಬೇಕು. ಅನಂತರ ಪೀಠದ ಮೇಲುಗಡೆಯಭಾಗದಲ್ಲಿ ಸ್ಕಂದನನ್ನು ಪೂಜಿಸಬೇಕು. ಶಿವಲಿಂಗದಲ್ಲಿ ನಿನ್ನೊಡನೆ ನನ್ನ ಆಕಾರವನ್ನು ಭಾವನೆಮಾಡಿ ಪೂಜಿಸಬೇಕು.

೪೪-೪೬. ಎಲೈ ಪ್ರಿಯಳಾದ ಪಾರ್ವತಿಯೇ ಕೇಳು :—ಬಹಳ ರಹಸ್ಯವಾಗಿರುವ ಈ ಪೂಜಾವಿಧಿಯನ್ನು ನಿನಗೆ ಹೇಳಿರುವೆನು. ಇದನ್ನು ಪ್ರಯತ್ನಪೂರ್ವಕ

ಗೋಪನೀಯಂ ಪ್ರಯತ್ನೇನ ನ ದೇಯಂ ಯಸ್ಯ ಕಸ್ಯಚಿತ್ ।
ಮಮ ಭಕ್ತಾಯ ದಾತವ್ಯಂ ಯತಯೇ ವೀತರಾಗಿಣೇ ॥ ೪೪ ॥

ಗುರುಭಕ್ತಾಯ ಶಾಂತಾಯ ಮದರ್ಥೇ ಯೋಗಭಾಗಿನೇ ।
ಮಮಾಜ್ಞಾಮತಿಲಂಘ್ಯೈತದ್ಯೋ ದದಾತಿ ವಿಮೂಢಧೀಃ ॥ ೪೫ ॥

ಸ ನಾರಕೀ ಮಮ ದ್ರೋಹೀ ಭವಿಷ್ಯತಿ ನ ಸಂಶಯಃ ।
ಮದ್ಭಕ್ತದಾನಾದ್ದೇವೇಶಿ ಮತ್ಪ್ರಿಯಶ್ಚ ಭವೇದ್ಧ್ರುವಂ ।
ಇಹ ಭುಕ್ತ್ವಾಖಿಲಾನ್ಭೋಗಾನ್ಮತ್ಸಾನ್ನಿಧ್ಯಮವಾಪ್ನುಯಾತ್ ॥ ೪೬ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ಮಹಾದೇವೀ ಮಹಾದೇವೇನ ಭಾಷಿತಂ ।
ಸ್ತುತ್ವಾ ತು ವಿವಿಧೈಃ ಸ್ತೋತ್ರೈರ್ದೇವಂ ವೇದಾರ್ಥಗರ್ಭಿತೈಃ ॥ ೪೭ ॥

ಶ್ರೀಮತ್ಪಾದಾಬ್ಜಯೋಃ ಪತ್ಯುಃ ಪ್ರಣಾಮಂ ಪರಮೇಶ್ವರೀ ।
ಅತಿಪ್ರಹೃಷ್ಟಹೃದಯಾ ಮುಮೋದ ಮುನಿಸತ್ತಮಾಃ ॥ ೪೮ ॥

---

ವಾಗಿ ರಹಸ್ಯವಾಗಿರಿಸಿರಬೇಕು. ಯಾರಿಗೂ ಹೇಳಬಾರದು. ಇದನ್ನು ಗುರುವಿನಲ್ಲಿ ಭಕ್ತಿಯುಳ್ಳವನಾಗಿಯೂ ಉಪಶಾಂತನಾಗಿಯೂ ನನ್ನಲ್ಲಿ ಭಕ್ತಿಯಿಂದ ಯೋಗ ಮಾರ್ಗವನ್ನು ಅವಲಂಬಿಸಿರುವ ಜಿತೇಂದ್ರಿಯನಾದ, ನನ್ನ ಭಕ್ತನಿಗೆ ಮಾತ್ರ ಉಪ ದೇಶಮಾಡಬೇಕು. ಬುದ್ಧಿಯಿಲ್ಲದವನು ಯಾವನಾದರೂ ನನ್ನ ಆಜ್ಞೆಯನ್ನು ಉಲ್ಲಂಘನೆಮಾಡಿ, ಇದನ್ನು ಇತರರಿಗೆ ಯಾರಿಗಾದರೂ ಉಪದೇಶಮಾಡಿದರೆ ನರಕ ವನ್ನು ಹೊಂದುವನು. ನನಗೆ ದ್ರೋಹವನ್ನು ಮಾಡಿದವನೂ ಆಗುವನು. ಇದ ರಲ್ಲಿ ಸಂಶಯವಿಲ್ಲ. ನನ್ನಲ್ಲಿ ಭಕ್ತಿಯುಳ್ಳವನಿಗೆ ಇದನ್ನು ಉಪದೇಶಮಾಡಿದರೆ ಉಪದೇಶಮಾಡಿದವನು ನನ್ನ ಪ್ರೀತಿಗೆ ಪಾತ್ರನಾಗುವನು. ಅವನು ಈ ಲೋಕದಲ್ಲಿ ಎಲ್ಲಾ ವಿಧವಾದ ಸೌಖ್ಯಗಳನ್ನೂ ಅನುಭವಿಸಿ ಕೊನೆಯಲ್ಲಿ ನನ್ನ ಸಾನ್ನಿಧ್ಯವನ್ನು ಹೊಂದುವನು. ಇದು ಸತ್ಯವು ಎಂದನು.

೪೭-೪೮. ವ್ಯಾಸಮುನಿಯಿಂತೆಂದನು :—ಮಹಾದೇವನು ಈ ಪ್ರಕಾರ ಹೇಳಿದ ಪೂಜಾಕ್ರಮವನ್ನು ಪರಮೇಶ್ವರಿಯಾದ ಪಾರ್ವತಿಯು ಕೇಳಿ, ಪರಮೇಶ್ವರ

**ಅತಿಗುಹ್ಯಮಿದಂ ವಿಪ್ರಾಃ ಪ್ರಣವಾರ್ಥಪ್ರಕಾಶಕಂ ।**
**ಶಿವಜ್ಞಾನಪರಂ ಹ್ಯೇತದ್ಭವತಾಮಾರ್ತಿನಾಶನಂ ॥ ೪೯ ॥**

**॥ ಸೂತ ಉವಾಚ ॥**

**ಇತ್ಯುಕ್ತ್ವಾ ಮುನಿಶಾರ್ದೂಲಃ ಪಾರಾಶರ್ಯೋ ಮಹಾತಪಾಃ ।**
**ಪೂಜಿತಃ ಪರಯಾ ಭಕ್ತ್ಯಾ ಮುನಿಭಿರ್ವೇದವಾದಿಭಿಃ ॥ ೫೦ ॥**

**ಕೈಲಾಸಾದ್ರಿಮನುಸ್ಮೃತ್ಯ ಯಯೌ ತಸ್ಮಾತ್ತಪೋವನಾತ್ ।**
**ತೇಽಪಿ ಪ್ರಹೃಷ್ಟಹೃದಯಾಸ್ಸತ್ರಾಂತೇ ಪರಮೇಶ್ವರಂ ॥ ೫೧ ॥**

**ಸಂಪೂಜ್ಯ ಪರಯಾ ಭಕ್ತ್ಯಾ ಸೋಮಂ ಸೋಮಾರ್ಧಶೇಖರಂ ।**
**ಯಮಾದಿಯೋಗನಿರತಾಶ್ಶಿವಧ್ಯಾನಪರಾಭವನ್ ॥ ೫೨ ॥**

---

ನನ್ನು ವೇದಾರ್ಥಗರ್ಭಿತವಾದ ಅನೇಕ ಪ್ರಕಾರವಾದ ಸ್ತೋತ್ರಗಳಿಂದ ಸ್ತುತಿಮಾಡಿ ತನ್ನ ಪತಿಯಾದ ಆ ಪರಮೇಶ್ವರನ ಪಾದಕಮಲಗಳಿಗೆ ನಮಸ್ಕಾರವನ್ನು ಮಾಡಿದಳು ಈ ಪೂಜಾಕ್ರಮವನ್ನು ಕೇಳಿದ್ದರಿಂದ ಪಾರ್ವತಿಗೆ ತುಂಬಾ ಸಂತೋಷವಾಯಿತು. ಎಲೈ ಮುನಿಶ್ರೇಷ್ಠರೇ ಕೇಳಿರಿ. ಈಗ ನಿಮಗೆ ಪ್ರಣವಮಂತ್ರದ ವಿಷಯವೆಲ್ಲವನ್ನೂ ತಿಳಿಸಿದ್ದಾಯಿತು. ಈ ವಿವರಣೆಯು ಶಿವಜ್ಞಾನವನ್ನು ಬಹಳವಾಗಿ ಹೆಚ್ಚಿಸುವುದು. ನಿಮ್ಮ ಮನೋವ್ಯಥೆಯನ್ನು ನಾಶಮಾಡುವುದಾಗಿರುವುದು ಎಂದನು.

೫೦–೫೨. ಸೂತನಿಂತೆಂದನು :—ತಪಸ್ವಿಯೂ ಪರಾಶರಋಷಿಯ ಕುಮಾರನೂ ಆದ ವ್ಯಾಸಋಷಿಯು ಋಷಿಗಳಿಗೆ ಈ ಪ್ರಕಾರವಾಗಿ ಉಪದೇಶಮಾಡಿ ವೇದಾಧ್ಯಯನಸಂಪನ್ನರಾದ ಆ ಋಷಿಗಳಿಂದ ಭಕ್ತಿಯಿಂದ ಪೂಜಿತನಾಗಿ ಕೈಲಾಸಪರ್ವತವನ್ನು ಜ್ಞಾಪಿಸಿಕೊಂಡು ಆ ತಪೋವನದಿಂದ ಹೊರಟುಹೋದನು. ಆ ಋಷಿಗಳೆಲ್ಲರೂ ಬಹಳ ಸಂತೋಷಗೊಂಡು ತಾವು ನಡೆಸುತ್ತಿರುವ ಯಜ್ಞವು ಮುಗಿದ ನಂತರ ಉಮಾಸಹಿತನೂ ಚಂದ್ರಶೇಖರನೂ ಆದ ಪರಮೇಶ್ವರನನ್ನು ಉತ್ತಮವಾದ ಭಕ್ತಿಯಿಂದ ಪೂಜಿಸಿದರು. ಅನಂತರ ಯಮವೇ ಮೊದಲಾದ ಯೋಗಾಂಗಗಳಲ್ಲಿ ಆಸಕ್ತರಾಗಿ ಶಿವನನ್ನು ಧ್ಯಾನಮಾಡುವುದರಲ್ಲಿ ಉದ್ಯುಕ್ತರಾದರು.

ಗುಹಾಯ ಕಥಿತಂ ಹ್ಯೇತದ್ದೇವ್ಯಾ ತೇನಾಪಿ ನಂದಿನೇ ।
ಸನತ್ಕುಮಾರಮುನಯೇ ಪ್ರೋವಾಚ ಭಗವಾನ್ ಹಿ ಸಃ ॥ ೫೩ ॥

ತಸ್ಮಾಲ್ಲಬ್ಧಂ ಮದ್ಗುರುಣಾ ವ್ಯಾಸೇನಾಮಿತತೇಜಸಾ ।
ತಸ್ಮಾಲ್ಲಬ್ಧಮಿದಂ ಪುಣ್ಯಂ ಮಯಾಪಿ ಮುನಿಪುಂಗವಾಃ ॥ ೫೪ ॥

ಮಯಾ ವಿಶ್ರಾವಿತಂ ಹ್ಯೇತದ್ಗುಹ್ಯಾದ್ಗುಹ್ಯತರಂ ಪರಂ ।
ಜ್ಞಾತ್ವಾ ಶಿವಪ್ರಿಯಾನ್ಭಕ್ತ್ಯಾ ಭವತೋ ಗಿರಿಶಪ್ರಿಯಂ ॥ ೫೫ ॥

ಭವದ್ಭಿರಪಿ ದಾತವ್ಯಮೇತದ್ಗುಹ್ಯಂ ಶಿವಪ್ರಿಯಂ ।
ಯತಿಭ್ಯಶ್ಶಾಂತಚಿತ್ತೇಭ್ಯೋ ಭಕ್ತೇಭ್ಯಶ್ಶಿವಪಾದಯೋಃ ॥ ೫೬ ॥

ಏತದುಕ್ತ್ವಾ ಮಹಾಭಾಗಸ್ಸೂತಃ ಪೌರಾಣಿಕೋತ್ತಮಃ ।
ತೀರ್ಥಯಾತ್ರಾಪ್ರಸಂಗೇನ ಚಚಾರ ಪೃಥಿವೀಮಿಮಾಂ ॥ ೫೭ ॥

---

೫೩-೫೪. ಪಾರ್ವತಿಯು ಈ ಪ್ರಣವ ವಿಧಿಯನ್ನು (ಗುಹನಿಗೆ) ಷಣ್ಮುಖನಿಗೆ ಹೇಳಿದಳು. ಅವನು ನಂದಿಗೂ, ನಂದೀಶ್ವರನು ಸನತ್ಕುಮಾರಋಷಿಗೂ ಇದನ್ನು ಉಪದೇಶಮಾಡಿದನು. ನನ್ನ ಗುರುವಾದ ವ್ಯಾಸಋಷಿಯು ಇದನ್ನು ಸನತ್ಕುಮಾರ ಮುನಿಯಿಂದ ಉಪದೇಶವನ್ನು ಹೊಂದಿದನು. ಎಲೈ ಮುನಿಶ್ರೇಷ್ಠರೇ ಕೇಳಿರಿ. ಪರಿಶುದ್ಧವಾದ ಪುಣ್ಯಕರವಾದ ಇದನ್ನು ನಾನು ನನ್ನ ಗುರುವಾದ ವ್ಯಾಸಋಷಿಯಿಂದ ಉಪದೇಶವನ್ನು ಹೊಂದಿರುವೆನು.

೫೫-೫೬. ನಾನು, ರಹಸ್ಯವಾಗಿರುವ ವಿಷಯಗಳಲ್ಲಿಯೂ ಅತಿರಹಸ್ಯವೂ ಅತ್ಯುತ್ತಮವೂ ಆದ ಈ ಪ್ರಣವವಿಧಿಯನ್ನು ನಿಮಗೆ ಹೇಳಿರುವೆನು. ನೀವೆಲ್ಲರೂ ಶಿವನನ್ನು ಭಕ್ತಿಯಿಂದ ಸೇವಿಸುತ್ತಿರುವಿರಿ. ನೀವುಗಳೂ ಕೂಡ ಶಿವನಿಗೆ ಪ್ರೀತಿಯನ್ನುಂಟುಮಾಡುವ ಈ ಪೂಜಾವಿಧಿಯನ್ನು ಶಿವನಲ್ಲಿ ಭಕ್ತಿಯಿಂದಿರುವ ಉಪಶಾಂತವಾದ ಮನಸ್ಸುಳ್ಳವರಾದ ಯತಿಗಳಿಗೆ ಉಪದೇಶವನ್ನು ಮಾಡಿರಿ ಎಂದನು.

೫೭. ಪುರಾಣಗಳನ್ನು ಹೇಳುವುದರಲ್ಲಿ ಶ್ರೇಷ್ಠನಾದ ಆ ಸೂತಪುರಾಣಿಕನು ಋಷಿಗಳ ಸಂಗಡ ಹೀಗೆ ಹೇಳಿ, ತೀರ್ಥಯಾತ್ರೆಯನ್ನು ಮಾಡುವ ಉದ್ದೇಶದಿಂದ ಭೂಮಿಯೆಲ್ಲವನ್ನೂ ಸುತ್ತುವುದಕ್ಕಾಗಿ ಹೊರಟುಹೋದನು.

ಏತದ್ರಹಸ್ಯಂ ಪರಮಂ ಲಬ್ಧ್ವಾ ಸೂತಾನ್ಮುನೀಶ್ವರಾಃ ।
ಕಾಶ್ಯಾಮೇವ ಸಮಾಸೀನಾ ಮುಕ್ತಾಶ್ಶಿವಪದಂ ಯಯುಃ ॥ ೫೮ ॥

ಇತಿ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಪ್ರಣವಾರ್ಥಪದ್ಧತಿವರ್ಣನಂ ನಾಮ ನವಮೋಽಧ್ಯಾಯಃ



---

೫೮. ಆ ಋಷಿಶ್ರೇಷ್ಠರೆಲ್ಲರೂ ರಹಸ್ಯವಾದ ಶಿವನ ಪೂಜಾವಿಧಾನವನ್ನು ಸೂತಪುರಾಣಿಕನಿಂದ ಕೇಳಿ ತಿಳಿದು, ಕಾಶಿಯಲ್ಲಿಯೇ ವಾಸಮಾಡುತ್ತಾ ಅಲ್ಲಿಯೇ ಮುಕ್ತರಾಗಿ ಶಿವನ ಸ್ಥಾನವನ್ನು ಹೊಂದಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಪ್ರಣವಾರ್ಥ ಪದ್ಧತಿವರ್ಣನವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.



ಶ್ರೀಃ

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವಮಹಾಪುರಾಣೇ

## ಕೈಲಾಸಸಂಹಿತಾಯಾಂ

## ದಶಮೋಽಧ್ಯಾಯಃ



**॥ ವ್ಯಾಸ ಉವಾಚ ॥**

**ಗತೇಽಥ ಸೂತೇ ಮುನಯಸ್ಸುವಿಸ್ಮಿತಾ**
**ವಿಚಿಂತ್ಯ ಚಾನ್ಯೋಽನ್ಯಮಿದಂ ತು ವಿಸ್ಮೃತಂ ।**
**ಯದ್ವಾಮದೇವಸ್ಯ ಮತಂ ಮುನೀಶ್ವರ-**
**ಪ್ರತ್ಯೂಚಿತಂ ತತ್ಖಲು ಕಷ್ಟಮದ್ಯ ನಃ ॥ ೧ ॥**

---

## ಹತ್ತನೆಯ ಅಧ್ಯಾಯವು

೧. ವ್ಯಾಸನು ಹೇಳಿದನು :—ಸೂತಪುರಾಣಿಕನು ಹೊರಟುಹೋದನಂತರ ಆ ಋಷಿಗಳೆಲ್ಲರೂ ಬಹಳ ಆಶ್ಚರ್ಯಪಡುತ್ತಾ ತಮ್ಮತಮ್ಮಲ್ಲಿ ಪರಸ್ಪರವಾಗಿ ಯೋಚಿಸಿದರು. ಈ ಸೂತಪುರಾಣೀಕನು ಹೇಳಿರುವ ಪ್ರಣವೋಪನ್ಯಾಸಕ್ರಮವು ಬಹಳ ಕಠಿನವಾಗಿರುವುದರಿಂದ ನಮಗೆ ಜ್ಞಾಪಕಕ್ಕೆ ಬರುವಂತೆ ಇಲ್ಲವು. ವಾಮದೇವ ಮುನಿಯ ಮತವು ಬೇರೆ ಇರುವುದೆಂದು ಸೂತಪುರಾಣಿಕನು ಹೇಳಿರುವನು. ಅದನ್ನಾದರೂ ನಾವು ತಿಳಿದು ಅದರ ಪ್ರಕಾರವಾಗಿ ಶಿವನನ್ನು ಸೇವಿಸದಿರುವುದು ನಮಗೆ ಬಹಳ ಕಷ್ಟತರವಾಗಿ ಇರುತ್ತದೆ.

ಕದಾನು ಭೂಯಾನ್ಮುನಿವರ್ಯದರ್ಶನಂ
ಭವಾಬ್ಧಿದುಃಖೌಘಹರಂ ಪರಂ ಹಿ ತತ್ ।
ಮಹೇಶ್ವರಾರಾಧನಪುಣ್ಯತೋಽಧುನಾ
ಮುನೀಶ್ವರಸ್ಸತ್ವರಮಾವಿರಸ್ತು ನಃ ॥ ೨ ॥

ಇತಿ ಚಿಂತಾಸಮಾವಿಷ್ಟಾ ಮುನಯೋ ಮುನಿಪುಂಗವಂ ।
ವ್ಯಾಸಂ ಸಂಪೂಜ್ಯ ಹೃತ್ಪದ್ಮೇ ತಸ್ಥುಸ್ತದ್ದರ್ಶನೋತ್ಸುಕಾಃ ॥ ೩ ॥

ಸಂವತ್ಸರಾಂತೇ ಸ ಪುನಃ ಕಾಶೀಂ ಪ್ರಾಪ ಮಹಾಮುನಿಃ ।
ಶಿವಭಕ್ತಿರತೋ ಜ್ಞಾನೀ ಪುರಾಣಾರ್ಥಪ್ರಕಾಶಕಃ ॥ ೪ ॥

ತಂ ದೃಷ್ಟ್ವಾ ಸೂತಮಾಯಾಂತಂ ಮುನಯೋ ಹೃಷ್ಟಚೇತಸಃ ।
ಅಭ್ಯುತ್ಥಾನಾಸನಾರ್ಘ್ಯಾದಿಪೂಜಯಾ ಸಮಪೂಜಯನ್ ॥ ೫ ॥

---

೨-೩. ಹೀಗೆ ಚಿಂತಾವಿಷ್ಟರಾಗಿ ಸೂತಮುನಿಯ ದರ್ಶನವು ನಮಗೆ ಪುನಃ ಯಾವಾಗ ಉಂಟಾದೀತು ? ನಾವು ಈಗ ಮಹೇಶ್ವರನನ್ನು ಸೇವಿಸುವುದರ ಪುಣ್ಯದಿಂದಲಾದರೂ, ಆ ಮಹಾನುಭಾವನಾದ ಸೂತಪುರಾಣಿಕನ ದರ್ಶನವು ನಮಗೆ ಉಂಟಾಗಬಾರದೇ ? ಎಂದು ಆಲೋಚಿಸುತ್ತಾ, ಮುನೀಶ್ವರನಾದ ವ್ಯಾಸಋಷಿಯನ್ನು ಮನಸ್ಸಿನಲ್ಲಿ ಪೂಜಿಸಿ ಸೂತಪುರಾಣಿಕನನ್ನು ನೋಡುವ ಆಸೆಯಿಂದ ಅವನ ಆಗಮನ ನಿರೀಕ್ಷಣೆಯಲ್ಲಿಯೇ ಇದ್ದರು.

೪. ಒಂದು ವರ್ಷವು ಕಳೆದನಂತರ, ಪುರಾಣಗಳ ಅರ್ಥಗಳನ್ನು ಚೆನ್ನಾಗಿ ಬೋಧಿಸುವವನೂ, ಶಿವಭಕ್ತಿಯಲ್ಲಿ ಆಸಕ್ತಿಯುಳ್ಳವನೂ, ಜ್ಞಾನಿಯೂ ಆದ ಸೂತಮಹಾಮುನಿಯು ಕಾಶೀಪಟ್ಟಣಕ್ಕೆ ತಾನಾಗಿಯೇ ಬಂದನು.

೫. ಆ ಋಷಿಗಳೆಲ್ಲರೂ ಸೂತಪುರಾಣೀಕನು ಬರುತ್ತಿರುವುದನ್ನು ನೋಡಿ ಸಂತೋಷದಿಂದ ಆ ಋಷಿಗೆ ಪ್ರತ್ಯುತ್ಥಾನ ಮೊದಲಾದ ಮರ್ಯಾದೆಗಳನ್ನು ಆದರದಿಂದ ಮಾಡಿ ಗೌರವಿಸಿದರು.

ಸೋऽಪಿ ತಾನ್ಮುನಿಶಾರ್ದೂಲಾನಭಿನಂದ್ಯ ಸ್ಮಿತೋದರಂ ।
ಪ್ರೀತ್ಯಾ ಸ್ನಾತ್ವಾ ಜಾಹ್ನವೀಯೇ ಜಲೇ ಪರಮಪಾವನೇ ॥ ೬ ॥

ಋಷಿಸ್ಸಂತರ್ಪ್ಯ ಚ ಸುರಾನ್ಪಿತೄಂಶ್ಚ ತಿಲತಂಡುಲೈಃ ।
ತೀರಮಾಗತ್ಯ ಸಂಪ್ರೋಕ್ಷ್ಯ ವಾಸಸೀ ಪರಿಧಾಯ ಚ ॥ ೭ ॥

ದ್ವಿರಾಚಮ್ಯ ಸಮಾದಾಯ ಭಸ್ಮ ಸದ್ಯಾದಿಮಂತ್ರತಃ ।
ಉದ್ಧೂಲನಾದಿಕ್ರಮತೋ ವಿಧಾಯ್ಯಾಥ ಮುನೀಶ್ವರಃ ॥ ೮ ॥

ರುದ್ರಾಕ್ಷಮಾಲಾಭರಣಃ ಕೃತನಿತ್ಯಕ್ರಿಯಸ್ಸುಧೀಃ ।
ಯಥೋಕ್ತಾಂಗೇಷು ವಿಧಿನಾ ತ್ರಿಪುಂಡ್ರಂ ರಚತಿ ಸ್ಮ ಹ ॥ ೯ ॥

ವಿಶ್ವೇಶ್ವರಮುಮಾಕಾಂತಂ ಸಸುತಂ ಸಗಣಾಧಿಪಂ ।
ಪೂಜಯಾಮಾಸ ಸದ್ಭಕ್ತ್ಯಾ ಹ್ಯಸ್ತೌನ್ನತ್ವಾ ಮುಹುರ್ಮುಹುಃ ॥ ೧೦ ॥

---

೬–೯. ಆ ಸೂತನೂ ಕೂಡ ಆ ಶ್ರೇಷ್ಠರಾದ ಋಷಿಗಳೆಲ್ಲರನ್ನೂ ಮಂದಹಾಸದಿಂದ ಅಭಿನಂದಿಸಿ, ಬಹಳ ಪವಿತ್ರವಾದ ಗಂಗಾನದಿಯಲ್ಲಿ ಸ್ನಾನವನ್ನು ಬಹಳ ಆದರದಿಂದ ಮಾಡಿದನು. ಎಳ್ಳು, ಅಕ್ಕಿ, ಇವುಗಳಿಂದ ದೇವತೆಗಳಿಗೂ ಪಿತೃಗಳಿಗೂ ತರ್ಪಣವನ್ನು ಕೊಟ್ಟನು. ಅನಂತರ ಗಂಗಾನದಿಯ ದಡದಲ್ಲಿ ನಿಂತುಕೊಂಡು ಬಟ್ಟೆಗಳನ್ನು ಚೆನ್ನಾಗಿ ಪ್ರೋಕ್ಷಿಸಿ ಅವುಗಳನ್ನು ಧರಿಸಿಕೊಂಡು, ಎರಡುಸಾರಿ ಆಚಮನವನ್ನು ಮಾಡಿ ಭಸ್ಮವನ್ನು ಸದ್ಯೋಜಾತವೇ ಮೊದಲಾದ ಮಂತ್ರಗಳಿಂದ ಉದ್ಧೂಳನವೇ ಮೊದಲಾದ ಕ್ರಮದಿಂದ ಧರಿಸಿಕೊಂಡು, ರುದ್ರಾಕ್ಷಮಾಲೆಯನ್ನು ಧರಿಸಿ ಶಾಸ್ತ್ರದಲ್ಲಿ ಹೇಳಿರುವ ತ್ರಿಪುಂಡ್ರಧಾರಣೆಮಾಡುವ ಕ್ರಮದಂತೆ ಆಯಾಯ ಅಂಗಗಳಿಗೆ ಭಸ್ಮದಿಂದ ತ್ರಿಪುಂಡ್ರಧಾರಣೆಯನ್ನು ಮಾಡಿಕೊಂಡನು. ಬಳಿಕ ನಿತ್ಯಾಹ್ನಿಕ ಕ್ರಿಯೆಗಳನ್ನು ನೆರವೇರಿಸಿದನು.

೧೦-೧೨. ಪುತ್ರನಾದ ಗಣೇಶ್ವರನಿಂದಲೂ, ಪ್ರಮಥಗಣಗಳಿಂದಲೂ ಸಹಿತನಾದ ಪಾರ್ವತೀಪತಿಯನ್ನು ಭಕ್ತಿಯಿಂದ ನಮಸ್ಕರಿಸಿ ಅನೇಕ ವಿಧವಾಗಿ ಸ್ತೋತ್ರವನ್ನು ಮಾಡಿದನು. ಕಾಲಭೈರವನನ್ನೂ ಶಾಸ್ತ್ರಕ್ರಮದಿಂದ ಪೂಜಿಸಿದನು. ಮೂರುಸಾರಿ, ಐದುಬಾರಿ ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಿ, ಪುನಃ ಪ್ರದಕ್ಷಿಣೆ

ಕಾಲಭೈರವನಾಥಂ ಚ ಸಂಪೂಜ್ಯಾಥ ವಿಧಾನತಃ ।
ಪ್ರದಕ್ಷಿಣೀಕೃತ್ಯ ಪುನಸ್ತ್ರಿಧಾ ನತ್ವಾ ಚ ಪಂಚಧಾ ॥ ೧೧ ॥

ಪುನಃ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಭುವಿ ದಂಡವತ್ ।
ತುಷ್ಟಾವ ಪರಯಾ ಸ್ತುತ್ಯಾ ಸಂಸ್ಮರಂಸ್ತತ್ಪದಾಂಬುಜಂ ॥ ೧೨ ॥

ಶ್ರೀಮತ್ಪಂಚಾಕ್ಷರೀಂ ವಿದ್ಯಾಮಷ್ಟೋತ್ತರಸಹಸ್ರಕಂ ।
ಸಂಜಪ್ಯ ಪುರತಃ ಸ್ಥಿತ್ವಾ ಕ್ಷಮಾಪಯ್ಯ ಮಹೇಶ್ವರಂ ॥ ೧೩ ॥

ಚಂಡೇಶಂ ಸಂಪ್ರಪೂಜ್ಯಾಽಥ ಮುಕ್ತಿಮಂಡಪಮಧ್ಯತಃ ।
ನಿರ್ದಿಷ್ಟಮಾಸನಂ ಭೇಜೇ ಮುನಿಭಿರ್ವೇದಪಾರಗೈಃ ॥ ೧೪ ॥

ಏವಂ ಸ್ಥಿತೇಷು ಸರ್ವೇಷು ನಮಸ್ಕೃತ್ಯ ಸಮಂತ್ರಕಂ ।
ಅಥ ಪ್ರಾಹ ಮುನೀಂದ್ರಾಣಾಂ ಭಾವವೃದ್ಧಿಕರಂ ವಚಃ ॥ ೧೫ ॥

---

ಯನ್ನು ಮಾಡಿ ದಂಡಾಕಾರವಾಗಿ ನಮಸ್ಕರಿಸಿ, ಆ ಕಾಲಭೈರವೇಶ್ವರನ ಪಾದಪದ್ಮಗಳನ್ನು ಸ್ಮರಿಸುತ್ತಾ ಉತ್ತಮವಾದ ಭಕ್ತಿಯಿಂದ ಸ್ತೋತ್ರವನ್ನು ಮಾಡಿದನು.

೧೩-೧೪. ಮಹಾಶ್ರೇಷ್ಠವಾದ ಪಂಚಾಕ್ಷರೀ ಮಂತ್ರವನ್ನು ಒಂದು ಸಾವಿರದ ಎಂಟುಸಾರಿ ಜಪಿಸಿ, ಮಹೇಶ್ವರನ ಮುಂದುಗಡೆಯಲ್ಲಿ ನಿಂತುಕೊಂಡು ಕ್ಷಮಾಪಣೆಯನ್ನು ಕೇಳಿಕೊಂಡನು. ಅನಂತರ ಚಂಡೇಶನನ್ನೂ ಪೂಜಿಸಿ ಮುಕ್ತಿಮಂಟಪದ ಮಧ್ಯದಲ್ಲಿ ವೇದಪಾರಗರಾದ ಋಷಿಗಳು ತನಗಾಗಿ ಸಿದ್ಧಮಾಡಿರುವ ಪೀಠವನ್ನು ಋಷಿಗಳೊಡನೆ ಅಲಂಕರಿಸಿದನು.

೧೫. ಆ ಸಭೆಯಲ್ಲಿ ಎಲ್ಲರೂ ಸುಖಾಸೀನರಾಗಿರುವ ಕಾಲದಲ್ಲಿ ಸೂತಪುರಾಣೀಕನು ಮಂತ್ರೋಚ್ಚಾರಣೆ ಪೂರ್ವಕವಾಗಿ ಎಲ್ಲರಿಗೂ ನಮಸ್ಕರಿಸಿ ಆ ಋಷಿಗಳ ಮನಸ್ಸಿನಲ್ಲಿರುವ ಅಭಿಪ್ರಾಯವನ್ನರಿತು ಇಂತೆಂದನು.

॥ ಸೂತ ಉವಾಚ ॥

ಧನ್ಯಾ ಯೂಯಂ ಮಹಾಪ್ರಾಜ್ಞಾ ಮುನಯಶ್ಶಂಸಿತವ್ರತಾಃ ।
ಭವದರ್ಥಮಿಹ ಪ್ರಾಪ್ತೋಽಹಂ ತದ್ವೃತ್ತಮಿದಂ ಶೃಣು ॥ ೧೬ ॥

ಯದಾಹಮುಪದಿಶ್ಯಾಥ ಭವತಃ ಪ್ರಣವಾರ್ಥಕಂ ।
ಗತಸ್ತೀರ್ಥಾಟನಾರ್ಥಾಯ ತದ್ವೃತ್ತಾಂತಂ ಬ್ರವೀಮಿ ವಃ ॥ ೧೭ ॥

ಇತೋ ನಿರ್ಗತ್ಯ ಸಂಪ್ರಾಪ್ಯ ತೀರಂ ದಕ್ಷಪಯೋನಿಧೇಃ ।
ಸ್ನಾತ್ವಾ ಸಂಪೂಜ್ಯ ವಿಧಿವದ್ದೇವೀಂ ಕನ್ಯಾಮಯೀಂ ಶಿವಾಂ ।
ಪುನರಾಗತ್ಯ ವಿಪ್ರೇಂದ್ರಾಸ್ಸುವರ್ಣಮುಖರೀತಟಂ ॥ ೧೮ ॥

ಶ್ರೀಕಾಲಹಸ್ತಿಶೈಲಾಖ್ಯನಗರೇ ಪರಮಾದ್ಭುತೇ ।
ಸುವರ್ಣಮುಖರೀತೋಯೇ ಸ್ನಾತ್ವಾ ದೇವಾನೃಷೀನಪಿ ॥ ೧೯ ॥

---

೧೬-೧೮. ಎಲೈ ಮಹಾಪ್ರಾಜ್ಞರಾದ ಋಷಿಗಳಿರಾ ಕೇಳಿರಿ. ನೀವುಗಳು ಬಹಳ ಚೆನ್ನಾಗಿ ವ್ರತವನ್ನು ಮಾಡಿರುವಿರಿ. ನೀವೇ ಪುಣ್ಯವಂತರು. ನಾನು ನಿಮಗೋಸ್ಕರವಾಗಿಯೇ ಇಲ್ಲಿಗೆ ಬಂದಿರುವೆನು. ಆ ವೃತ್ತಾಂತವೆಲ್ಲವನ್ನೂ ಹೇಳುವೆನು ಕೇಳಿರಿ. ಹಿಂದೆ ಪ್ರಣವಮಂತ್ರವನ್ನು ಅದರ ಅರ್ಥದೊಡನೆ ಉಪದೇಶ ಮಾಡಿದನಂತರ ತೀರ್ಥಯಾತ್ರೆಯನ್ನು ಮಾಡುವುದಕ್ಕಾಗಿ ಹೊರಟೆನಷ್ಟೆ. ನಾನು ಇಲ್ಲಿಂದ ಹೊರಟವನು ದಕ್ಷಿಣದಿಕ್ಕಿನಲ್ಲಿರುವ ಸಮುದ್ರವನ್ನು ಸೇರಿ ಅಲ್ಲಿ ಸ್ನಾನವನ್ನು ಮಾಡಿ ಕನ್ಯಾಕುಮಾರಿಯರೂಪದಿಂದ ಇರುವ ದೇವಿಯನ್ನು ಶಾಸ್ತ್ರಕ್ರಮವಾಗಿ ಪೂಜಿಸಿ, ಹಿಂದಕ್ಕೆ ಬಂದು ಸುವರ್ಣಮುಖರೀನದಿಯ ತೀರವನ್ನು ಸೇರಿದೆನು.

೧೯—೨೨. ಅಲ್ಲಿಂದ ಬಹಳ ಆಶ್ಚರ್ಯಕರವಾದ ಕಾಳಹಸ್ತಿ ಪರ್ವತವೆಂಬ ಪಟ್ಟಣವನ್ನು ತಲಪಿ, ಸುವರ್ಣಮುಖರೀನದಿಯಲ್ಲಿ ಸ್ನಾನವನ್ನು ಮಾಡಿ, ದೇವತೆಗಳನ್ನೂ, ಋಷಿಗಳನ್ನೂ, ಉದ್ದೇಶಿಸಿ ತರ್ಪಣವನ್ನು ಕೊಟ್ಟು, ಶಿವನನ್ನೂ, ಸಮುದ್ರ

ಸಂತರ್ಪ್ಯ ವಿಧಿವದ್ಭಕ್ತ್ಯಾ ಸಮುದ್ರಂ ಗಿರಿಶಂ ಸ್ಮರನ್ ।
ಸಮುಚ್ಚ್ಯ ಕಾಲಹಸ್ತೀಶಂ ಚಂದ್ರಕಾಂತಸಮಪ್ರಭಂ ॥ ೨೦ ॥

ಪಶ್ಚಿಮಾಭಿಮುಖಂ ಪಂಚಶಿರಸಂ ಪರಮಾದ್ಭುತಂ ।
ಸಕೃದ್ದರ್ಶನಮಾತ್ರೇಣ ಸರ್ವಾಘಕ್ಷಯಕಾರಣಂ ॥ ೨೧ ॥

ಸರ್ವಸಿದ್ಧಿಪ್ರದಂ ಭುಕ್ತಿಮುಕ್ತಿದಂ ತ್ರಿಗುಣೇಶ್ವರಂ ।
ತತಶ್ಚ ಪರಯಾ ಭಕ್ತ್ಯಾ ತಸ್ಯ ದಕ್ಷಿಣಗಾಂ ಶಿವಾಂ ॥ ೨೨ ॥

ಜ್ಞಾನಪ್ರಸೂನಕಲಿಕಾಂ ಸಮುಚ್ಚ್ಯ ಹಿ ಜಗತ್ಪ್ರಸೂಂ ।
ಶ್ರೀಮತ್ಪಂಚಾಕ್ಷರೀಂ ವಿದ್ಯಾಮಷ್ಟೋತ್ತರಸಹಸ್ರಕಂ ॥ ೨೩ ॥

ಜಪ್ತ್ವಾ ಪ್ರದಕ್ಷಿಣೀಕೃತ್ಯ ಸ್ತುತ್ವಾ ನತ್ವಾ ಮುಹುರ್ಮುಹುಃ ॥ ೨೪ ॥

ತತಃ ಪ್ರದಕ್ಷಿಣೀಕೃತ್ಯ ಗಿರಿಂ ಪ್ರತ್ಯಹಮಾದರಾತ್ ।
ಆಮೋದತೀವ ಮನಸಿ ಪ್ರತ್ಯಹಂ ನಿಯಮಾಸ್ಥಿತಃ ॥ ೨೫ ॥

---

ವನ್ನೂ ಸ್ಮರಿಸುತ್ತಾ, ಶಾಸ್ತ್ರಕ್ಕನುಸಾರವಾಗಿ ಕಾಳಹಸ್ತೀಶ್ವರನನ್ನು ಪೂಜಿಸಿದೆನು. ಆ ಕಾಳಹಸ್ತೀಶ್ವರನು, ಆ ಕಾಳಹಸ್ತಿಪರ್ವತದಲ್ಲಿ ಪಶ್ಚಿಮಮುಖನಾಗಿರುವನು. ಚಂದ್ರಕಾಂತಶಿಲೆಗೆ ಸಮನಾದ ಕಾಂತಿಯುಳ್ಳವನಾಗಿರುವನು. ಐದು ತಲೆಗಳಿಂದ ಕೂಡಿ, ಬಹಳ ಆಶ್ಚರ್ಯವನ್ನುಂಟುಮಾಡುತ್ತಾ, ಒಂದುಬಾರಿ ದರ್ಶನಮಾಡಿದ ಮಾತ್ರದಿಂದ ಪಾಪಗಳೆಲ್ಲವನ್ನೂ, ನಾಶಮಾಡುತ್ತಿರುವನು. ಎಲ್ಲಾ ವಿಧವಾದ ಸಿದ್ಧಿಯನ್ನೂ ಕೊಟ್ಟು, ಭುಕ್ತಿಮುಕ್ತಿಗಳೆರಡನ್ನೂ ಕೊಡುವನು. ಸತ್ವ, ರಜಸ್ಸು, ತಮಸ್ಸೆಂಬ ಮೂರುಗುಣಗಳಿಗೂ ಅಧಿಪತಿಯಾಗಿರುವನು. ಈ ಪ್ರಕಾರದಿಂದ ಇರುವ ಕಾಳಹಸ್ತೀಶ್ವರನನ್ನು ಸೇವಿಸಿದನಂತರ ಆ ದೇವನ ದಕ್ಷಿಣಭಾಗದಲ್ಲಿರುವ ಜ್ಞಾನಪ್ರಸೂನಾಂಬಿಕಾ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿರುವ ದೇವಿಯಾದ ಪಾರ್ವತಿಗೆ ಪ್ರದಕ್ಷಿಣೆ ನಮಸ್ಕಾರವನ್ನು ಬಹಳ ಭಕ್ತಿಯಿಂದ ಮಾಡಿದೆನು.

೨೩-೨೮. ಜಗನ್ಮಾತೆಯಾದ ಜ್ಞಾನಪ್ರಸೂನಾಂಬಿಕಾದೇವಿಯ ಪೂಜೆಯನ್ನು ಮಾಡಿದನಂತರ, ಶಿವಪಂಚಾಕ್ಷರೀ ಮಂತ್ರವನ್ನು ಒಂದುಸಾವಿರದ ಎಂಟುಸಾರಿ ಜಪವನ್ನು ಮಾಡಿ ಪ್ರದಕ್ಷಿಣೆನಮಸ್ಕಾರಗಳನ್ನು ಅನೇಕಾವರ್ತಿ ಮಾಡಿದನಂತರ ಆ

ಅನಯಂ ಚತುರೋ ಮಾಸಾನೇವಂ ತತ್ರ ಮುನೀಶ್ವರಾಃ ।
ಜ್ಞಾನಪ್ರಸೂನಕಲಿಕಾಮಹಾದೇವ್ಯಾಃ ಪ್ರಸಾದತಃ ॥ ೨೬ ॥

ಏಕದಾ ತು ಸಮಾಸ್ತೀರ್ಯ ಚೈಲಾಜಿನಕುಶೋತ್ತರಂ ।
ಆಸನಂ ಪರಮಂ ತಸ್ಮಿನ್ಸ್ಥಿತ್ವಾ ರುದ್ಧೇಂದ್ರಿಯೋ ಮುನಿಃ ॥ ೨೭ ॥

ಸಮಾಧಿಮಾಸ್ಥಾಯ ಸದಾ ಪರಮಾನಂದಚಿದ್ಘನಃ ।
ಪರಿಪೂರ್ಣಶ್ಶಿವೋಽಸ್ಮೀತಿ ನಿರ್ವ್ಯಗ್ರಹೃದಯೋಽಭವಂ ॥ ೨೮ ॥

ಏತಸ್ಮಿನ್ನೇವ ಸಮಯೇ ಮದ್ಗುರುಃ ಕರುಣಾನಿಧಿಃ ।
ನೀಲಜೀಮೂತಸಂಕಾಶೋ ವಿದ್ಯುತ್ಪಿಂಗಜಟಾಧರಃ ॥ ೨೯ ॥

ಪ್ರಾಂಶುಃ ಕಮಂಡಲೂದ್ದಂಡಕೃಷ್ಣಾಜಿನಧರಸ್ಸ್ವಯಂ ।
ಭಸ್ಮಾವದಾತಸರ್ವಾಂಗಸ್ಸರ್ವಲಕ್ಷಣಲಕ್ಷಿತಃ ॥ ೩೦ ॥

---

ಬೆಟ್ಟವೆಲ್ಲವನ್ನೂ, ಆದರದಿಂದ ಹಗಲೆಲ್ಲವೂ ಪ್ರದಕ್ಷಿಣೆಮಾಡಿದೆನು. ನಿಯಮದಿಂದಿರುವ ನನಗೆ ಮನಸ್ಸಿನಲ್ಲಿ ಬಹಳ ಸಂತೋಷವುಂಟಾಯಿತು. ಎಲೈ ಋಷಿಗಳಿರಾ ಕೇಳಿರಿ, ಹೀಗೆಯೇ ನಾನು ಅಲ್ಲಿ ನಾಲ್ಕು ತಿಂಗಳು ಕಾಲವನ್ನು ಕಳೆದನು. ಒಂದು ದಿನ ಮಹಾದೇವಿಯಾದ ಜ್ಞಾನಪ್ರಸೂನಾಂಬಿಕಾದೇವಿಯ ಅನುಗ್ರಹದಿಂದ, ದರ್ಭೆಯ ಮೇಲೆ ಅಜಿನ ವಸ್ತ್ರಗಳನ್ನು ಹಾಸಿಕೊಂಡು ಆ ಆಸನದಲ್ಲಿ ಇಂದ್ರಿಯಗಳನ್ನು ಸಂಯಮಮಾಡಿಕೊಂಡು ಆನಂದಮಯನಾಗಿ, ಪರಿಪೂರ್ಣನಾದ ಶಿವನೇ ನಾನಾಗಿರುವೆನು ಎಂಬ ಸೋಽಹಂಭಾವನೆಯಿಂದ ತುಂಬಿದ ಮನಸ್ಸುಳ್ಳವನಾಗಿ ನಿರ್ವಿಕಲ್ಪ ಸಮಾಧಿಯಲ್ಲಿದ್ದೆನು.

೨೯-೩೧. ಈ ಸಮಯಕ್ಕೆ ಸರಿಯಾಗಿ ಕರುಣಾನಿಧಿಯಾಗಿರುವ ನನ್ನ ಗುರುವು, ನನ್ನ ಹೃದಯಕಮಲದಲ್ಲಿ ಕಾಣಿಸಿಕೊಂಡನು. ಆತನ ಶರೀರವು ನೀಲ ಮೇಘದಂತೆ ಕಪ್ಪಾಗಿ ಬೆಳಗುತ್ತಿತ್ತು. ಮಿಂಚಿನಂತೆ ಹೊಂಬಣ್ಣವಾದ ಜಟೆಗಳನ್ನು ಧರಿಸಿದ್ದನು. ವಾಮನಾಕಾರವನ್ನು ಹೊಂದಿ ಕೈಗಳಲ್ಲಿ ಕಮಂಡಲು, ದಂಡ, ಕೃಷ್ಣಾಜಿನ ಇವುಗಳನ್ನು ಧರಿಸಿಕೊಂಡು ಭಸ್ಮದಿಂದ ಹೊಳೆಯುತ್ತಿರುವ ಶರೀರವುಳ್ಳವನಾಗಿ, ಸರ್ವಲಕ್ಷಣಸಂಪೂರ್ಣನಾಗಿದ್ದನು. ಹಣೆಯಲ್ಲಿ ತ್ರಿಪುಂಡ್ರವು ಹೊಳೆಯುತ್ತಿತ್ತು. ಶರೀರವು ರುದ್ರಾಕ್ಷಮಾಲೆಗಳಿಂದ ಅಲಂಕೃತವಾಗಿತ್ತು. ನೇತ್ರಗಳು

ತ್ರಿಪುಂಡ್ರವಿಲಿಸದ್ಭಾಲೋ ರುದ್ರಾಕ್ಷಾಲಂಕೃತಾಕೃತಿಃ |
ಪದ್ಮಪತ್ರಾರುಣಾಯಾಮವಿಸ್ತೀರ್ಣನಯನದ್ವಯಃ ॥ ೩೧ ॥

ಪ್ರಾದುರ್ಭೂಯ ಹೃದಂಭೋಜೇ ತದಾನೀಮೇವ ಸತ್ವರಂ |
ವಿಮೋಹಿತಸ್ತದೈವಾಸಮೇತದದ್ಭುತಮಾಸ್ತಿಕಾಃ ॥ ೩೨ ॥

ತತಃ ಉನ್ಮೀಲ್ಯ ನಯನೇ ವಿಲಾಪಂ ಕೃತವಾನಹಂ |
ಆಸೀನ್ಮಮಾಶ್ರುಪಾತಶ್ಚ ಗಿರಿನಿರ್ಝರಸನ್ನಿಭಃ ॥ ೩೩ ॥

ಏತಸ್ಮಿನ್ನೇವ ಸಮಯೇ ಶ್ರುತಾ ವಾಗಶರೀರಿಣೀ |
ವ್ಯೋಮ್ನೋ ಮಹಾದ್ಭುತಾ ವಿಪ್ರಾಸ್ತಾಮೇವ ಶೃಣುತಾದರಾತ್ ॥ ೩೪ ॥

ಸೂತಪುತ್ರ ಮಹಾಭಾಗ ಗಚ್ಛ ವಾರಾಣಸೀಂ ಪುರೀಂ |
ತತ್ರಾಸನ್ಮುನಯಃ ಪೂರ್ವಮುಪದಿಷ್ಟಾಸ್ತ್ವಯಾಽಧುನಾ ॥ ೩೫ ॥

ತ್ವದುಪಾಗಮಕಲ್ಯಾಣಂ ಕಾಂಕ್ಷಂತೇ ವಿವಶಾ ಭೃಶಂ |
ತಿಷ್ಠಂತಿ ತೇ ನಿರಾಹಾರಾ ಇತ್ಯುಕ್ತ್ವಾ ವಿರರಾಮ ಸಾ ॥ ೩೬ ॥

---

ತಾವರೆಯ ದಳಗಳಂತೆ ಕೆಂಪಾಗಿಯೂ ವಿಸ್ತಾರವಾಗಿಯೂ ಇದ್ದವು. ಇಂತಹ ಸುಂದರಾಕೃತಿಯನ್ನು ಧರಿಸಿ ನನ್ನ ಗುರುವು ನನ್ನ ಹೃದಯಕಮಲದಲ್ಲಿ ಕಾಣಿಸಿಕೊಂಡನು.

೩೨–೩೪. ಎಲೈ ಆಸ್ತಿಕರಾದ ಋಷಿಗಳಿರಾ, ಕೇಳಿರಿ. ನಾನು ಈ ಆಶ್ಚರ್ಯವನ್ನು ಕಂಡು ಬೆರಗಾದೆನು. ಕಣ್ಣುಗಳಿಂದ ಧಾರಾಕಾರವಾಗಿ ಅಶ್ರುಗಳು ಬೀಳಲಾರಂಭಿಸಿದವು. ಹೀಗಿರಲು ಆಕಾಶದಲ್ಲಿ ಅಶರೀರವಾಣಿಯು ಕೇಳಿಸಿತು. ಅದನ್ನು ಹೇಳುವೆನು ಕೇಳಿರಿ.

೩೫–೩೬. ಎಲೈ ಪುಣ್ಯವಂತನಾದ ಸೂತಪುರಾಣಿಕನೇ, ನೀನು ಕಾಶೀನಗರಕ್ಕೆ ಹೋಗು. ಅಲ್ಲಿ ನೀನು ಹಿಂದೆ ಉಪದೇಶಮಾಡಿರುವ ಋಷಿಗಳು ನಿನ್ನ ಆಗಮನವನ್ನೇ ಚಿತ್ತೈಕಾಗ್ರ್ಯದಿಂದ ಎದುರುನೋಡುತ್ತಿರುವರು. ಮತ್ತೂ ಅವರೆಲ್ಲರೂ ಯಾವವಿಧವಾದ ಆಹಾರವನ್ನೂ ತೆಗೆದುಕೊಳ್ಳದೇ ನಿಯಮದಿಂದಿರುವರು. ಎಂದು ಹೇಳಿ ಆಕಾಶವಾಣಿಯು ಸುಮ್ಮನಾಯಿತು.

ತತ ಉತ್ಥಾಯ ತರಸಾ ದೇವಂ ದೇವೀಂ ಚ ಭಕ್ತಿತಃ ।
ಪ್ರದಕ್ಷಿಣೀಕೃತ್ಯ ಪುನಃ ಪ್ರಣಮ್ಯ ಭುವಿ ದಂಡವತ್ ॥ ೩೭ ॥

ದ್ವಿಷಡ್ವಾರಂ ಗುರೋರಾಜ್ಞಾಂ ವಿಜ್ಞಾಯ ಶಿವಯೋರಥ ।
ಕ್ಷೇತ್ರಾನ್ನಿರ್ಗತ್ಯ ತರಸಾ ಚತ್ವಾರಿಂಶದ್ದಿನಾಂತರೇ ॥ ೩೮ ॥

ಆಗತೋಽಸ್ಮಿ ಮುನಿಶ್ರೇಷ್ಠಾ ಅನುಗೃಹ್ಣಂತು ಮಾಮಿಹ ।
ಮಯಾ ಕಿಮದ್ಯ ವಕ್ತವ್ಯಂ ಭವಂತಸ್ತದ್ಬ್ರುವಂತು ಮೇ ॥ ೩೯ ॥

ಇತಿ ಸೂತವಚಶ್ಶ್ರುತ್ವಾ ಋಷಯೋ ಹೃಷ್ಟಮಾನಸಾಃ ।
ಅವೋಚನ್ಮುನಿಶಾರ್ದೂಲಂ ವ್ಯಾಸಂ ನತ್ವಾ ಮುಹುರ್ಮುಹುಃ ॥ ೪೦ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಸೂತೋಪದೇಶೋ ನಾಮ ದಶಮೋಽಧ್ಯಾಯಃ

---

೩೭-೩೯. ಅದನ್ನು ಕೇಳಿ ನಾನು ಬೇಗನೆ ಅಲ್ಲಿಂದ ಎದ್ದು ದೇವನಾದ ಶಿವನನ್ನೂ, ದೇವಿಯಾದ ಪಾರ್ವತಿಯನ್ನೂ, ಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಹನ್ನೆರಡುಸಾರಿ ದಂಡಪ್ರಣಾಮವನ್ನು ಮಾಡಿದೆನು. ಗುರುವಾಗಿರುವ ಪಾರ್ವತೀಪರಮೇಶ್ವರರ ಅಪ್ಪಣೆಯಂತೆ, ಆ ಕಾಳಹಸ್ತಿ ಕ್ಷೇತ್ರದಿಂದ ಹೊರಟು ಬೇಗನೆ ಬರುತ್ತಾ ನಲವತ್ತು ದಿನಗಳಲ್ಲಿ ಕಾಶೀನಗರದಲ್ಲಿರುವ ನಿಮ್ಮ ಸಮೀಪಕ್ಕೆ ಬಂದಿರುವೆನು. ನನಗೆ ನೀವೆಲ್ಲರೂ ಅನುಗ್ರಹವನ್ನು ಮಾಡಿರಿ. ನಾನು ನಿಮಗೆ ಈಗ ಏನನ್ನು ಹೇಳಬೇಕು ? ಅದನ್ನು ತಿಳಿಸಿ ಎಂದನು.

೪೦. ಸೂತಪುರಾಣಿಕನು ಹೇಳುತ್ತಿರುವ ಈ ಮಾತುಗಳನ್ನು ಆ ಋಷಿಗಳೆಲ್ಲರೂ ಕೇಳಿ ಸಂತೋಷದಿಂದ ಋಷಿಶ್ರೇಷ್ಠನಾದ ವ್ಯಾಸಋಷಿಗೆ ಮನಸ್ಸಿನಲ್ಲಿಯೇ ಅನೇಕಸಾರಿ ನಮಸ್ಕರಿಸಿ ಸೂತಪುರಾಣಿಕನೊಡನಿಂತೆಂದರು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಸೂತೋಪದೇಶವೆಂಬ
ಹತ್ತನೆಯ ಅಧ್ಯಾಯವು ಮುಗಿದುದು.



ಶ್ರೀಃ

|| ಓಂ ನಮಃ ಶಿವಾಯ ||

---

# ಅಥ ಶ್ರೀ ಶಿವ ಮಹಾ ಪುರಾಣೇ

## ಕೈಲಾಸಸಂಹಿತಾಯಾಂ

## ಏಕಾದಶೋಽಧ್ಯಾಯಃ

|| ಋಷಯ ಊಚುಃ ||

ಸೂತ ಸೂತ ಮಹಾಭಾಗಸ್ತ್ವಮಸ್ಮದ್ಗುರುರುತ್ತಮಃ ।
ಅತಸ್ತ್ವಾಂ ಪರಿಪೃಚ್ಛಾಮೋ ಭವತೋಽನುಗ್ರಹೋ ಯದಿ || ೧ ||

ಶ್ರದ್ಧಾಲುಷು ಚ ಶಿಷ್ಯೇಷು ತ್ವಾದೃಶಾ ಗುರವಸ್ಸದಾ ।
ಸ್ನಿಗ್ಧಭಾವಾ ಇತೀದಂ ನೋ ದರ್ಶಿತಂ ಭವತಾಧುನಾ || ೨ ||

---

## ಹನ್ನೊಂದನೆಯ ಅಧ್ಯಾಯ

೧-೨. ಋಷಿಗಳು ಪ್ರಶ್ನೆಮಾಡುತ್ತಾರೆ:—ಎಲೈ ಪುಣ್ಯವಂತನಾದ ಸೂತ ಪುರಾಣಿಕನೇ, ನೀನು ನಮಗೆ ಉತ್ತಮನಾದ ಗುರುವು. ನಾವು ನಿನ್ನ ಶಿಷ್ಯರು. ಶ್ರದ್ಧಾಭಕ್ತಿಯಿಂದಿರುವ ಶಿಷ್ಯರಲ್ಲಿ ಗುರುವು ಅನುಗ್ರಹಮಾಡಿ ಆ ಶಿಷ್ಯರು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರನನ್ನು ಹೇಳಿ ಅವರ ಸಂಶಯಗಳನ್ನು ಪರಿಹರಿಸುವನು. ಅದರಂತೆ ಈಗ ನೀನು ನಮ್ಮ ಮೇಲೆ ದಯವಿಟ್ಟು ನಾವು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಹೇಳಿ ನಮ್ಮನ್ನುದ್ಧರಿಸಬೇಕು.

ವಿರಜಾಹೋಮಸಮಯೇ ವಾಮದೇವಮತಂ ಪುರಾ ।
ಸೂಚಿತಂ ಭವತಾಸ್ಮಾಭಿರ್ನ ಶ್ರುತಂ ವಿಸ್ತರಾನ್ಮುನೇ ॥ ೩ ॥

ತದಿದಾನೀಂ ಶ್ರೋತುಕಾಮಾಃ ಶ್ರದ್ಧಯಾ ಪರಮಾದರಾತ್ ।
ವಯಂ ಸರ್ವೇ ಕೃಪಾಸಿಂಧೋ ಪ್ರೀತ್ಯಾ ತದ್ವಕ್ತುಮರ್ಹಸಿ ॥ ೪ ॥

ಇತಿ ತೇಷಾಂ ವಚಃ ಶ್ರುತ್ವಾ ಸೂತೋ ಹೃಷ್ಟತನೂರುಹಃ ।
ನಮಸ್ಕೃತ್ಯ ಮಹಾದೇವಂ ಗುರೋಃ ಪರತರಂ ಗುರುಂ ॥ ೫ ॥

ಮಹಾದೇವೀಂ ತ್ರಿಜನನೀಂ ಗುರುಂ ವ್ಯಾಸಂ ಚ ಭಕ್ತಿತಃ ।
ಪ್ರಾಹ ಗಂಭೀರಯಾ ವಾಚಾ ಮುನೀನಾಹ್ಲಾದಯನ್ನಿದಂ ॥ ೬ ॥

॥ ಸೂತ ಉವಾಚ ॥

ಸ್ವಸ್ತ್ಯಸ್ತು ಮುನಯಸ್ಸರ್ವೇ ಸುಖಿನಸ್ಸಂತು ಸರ್ವದಾ ।
ಶಿವಭಕ್ತಾಃ ಸ್ಥಿರಾತ್ಮಾನಶ್ಶೈವಭಕ್ತಿಪ್ರವರ್ತಕಾಃ ॥ ೭ ॥

---

೩-೪. ಎಲೈ ಋಷಿಯೇ, ನೀನು ಹಿಂದೆ ನಮಗೆ ಉಪದೇಶಮಾಡುವಾಗ ವಿರಜಾಹೋಮದ ಕಾಲದಲ್ಲಿ ಎರಡು ಮತಗಳಿರುವವೆಂದು ಹೇಳಿದೆಯಷ್ಟೆ. ಅದರಲ್ಲಿ ವಾಮದೇವಮತವು ಮುಖ್ಯವೆಂತಲೂ, ಹೇಳಿರುತ್ತೀಯೆ. ಆ ಮತವನ್ನು ನಾವು ಕೇಳಿಲ್ಲ. ಅದನ್ನು ಈಗ ವಿಸ್ತಾರವಾಗಿ ನಮಗೆ ತಿಳಿಸಬೇಕು. ಅದನ್ನು ಬಹಳ ಭಕ್ತಿಯಿಂದಲೂ, ಆದರದಿಂದಲೂ ಕೇಳಬಯಸುವೆವು. ಎಲೈ ದಯಾನಿಧಿಯೇ, ನೀನು ನಮ್ಮಲ್ಲಿ ಪ್ರೀತಿಯಿಂದ ಅದನ್ನು ಹೇಳಿದರೆ ನಾವೆಲ್ಲರೂ ಕೇಳಲು ಸಿದ್ಧರಾಗಿರುವೆವು ಎಂದರು.

೫-೬. ಹೀಗೆ ಹೇಳುತ್ತಿರುವ ಆ ಋಷಿಗಳ ಮಾತನ್ನು ಕೇಳಿ ಸೂತಪುರಾಣಿಕನು ಸಂತೋಷದಿಂದ ಶರೀರವು ಪುಳಕಿತವಾಗಲು, ತನ್ನ ಗುರುವಿಗೂ ಗುರುವಾದ ಮಹಾದೇವನಿಗೂ, ವ್ಯಾಸಋಷಿಗೂ ಸಹ, ಭಕ್ತಿಯಿಂದ ನಮಸ್ಕಾರಮಾಡಿ, ಆ ಋಷಿಗಳೆಲ್ಲರಿಗೂ ಸಂತೋಷವಾಗುವಂತೆ ಗಂಭೀರವಾದ ಧ್ವನಿಯಿಂದ ಹೇಳಲುಪಕ್ರಮಿಸಿದನು.

೭-೯. ಎಲೈ ಋಷಿಗಳಿರಾ ಕೇಳಿರಿ. ನಿಮಗೆಲ್ಲರಿಗೂ ಕ್ಷೇಮವಾಗಲಿ. ಶಿವಭಕ್ತರಾದ ನೀವೆಲ್ಲರೂ ಸ್ಥಿರವಾದ ಮನಸ್ಸಿನಿಂದ ಕೂಡಿ ಸುಖದಿಂದ ಬಾಳಿರಿ. ಶಿವಭಕ್ತರೂ ಶಿವನಲ್ಲಿ ಭಕ್ತಿಯನ್ನುಂಟುಮಾಡುವಂತೆ ಉಪದೇಶಮಾಡುವವರೂ,

ತದತೀವ ವಿಚಿತ್ರಂ ಹಿ ಶ್ರುತಂ ಗುರುಮುಖಾಂಬುಜಾತ್ ।
ಇತಃ ಪೂರ್ವಂ ಮಯಾ ನೋಕ್ತಂ ಗುಹ್ಯಪ್ರಾಕಟ್ಯಶಂಕಯಾ ॥ ೮ ॥

ಯೂಯಂ ಖಲು ಮಹಾಭಾಗಾಶ್ಶಿವಭಕ್ತಾ ದೃಢವ್ರತಾಃ ।
ಇತಿ ನಿಶ್ಚಿತ್ಯ ಯುಷ್ಮಾಕಂ ವಕ್ಷ್ಯಾಮಿ ಶ್ರೂಯತಾಂ ಮುದಾ ॥ ೯ ॥

ಪುರಾ ರಥಂತರೇ ಕಲ್ಪೇ ವಾಮದೇವೋ ಮಹಾಮುನಿಃ ।
ಗರ್ಭಮುಕ್ತಶ್ಶಿವಜ್ಞಾನವಿದಾಂ ಗುರುತಮಸ್ಸ್ವಯಂ ॥ ೧೦ ॥

ವೇದಾಗಮಪುರಾಣಾದಿಸರ್ವಶಾಸ್ತ್ರಾರ್ಥತತ್ತ್ವವಿತ್ ।
ದೇವಾಸುರಮನುಷ್ಯಾದಿಜೀವಾನಾಂ ಜನ್ಮಕರ್ಮವಿತ್ ॥ ೧೧ ॥

---

ಸ್ಥಿರವಾದ ಮನಸ್ಸುಳ್ಳವರಾಗಿ ಸುಖದಿಂದ ಇರಲಿ. ನೀವು ಕೇಳಿರುವ ಪ್ರಶ್ನೆಯು ಬಹಳ ಅದ್ಭುತವಾದುದು. ನಾನು ಗುರುವಿನ ಮುಖದಿಂದ ಅದನ್ನು ತಿಳಿದಿದ್ದೇನೆ. ಇದು ಬಹಳ ರಹಸ್ಯವೆಂದು ತಿಳಿದು ಇದನ್ನು ಹೊರಗೆ ಯಾರಿಗೂ ಹೇಳಬಾರದೆಂದು ಈವರಿಗೂ ಇದನ್ನು ಯಾರಿಗೂ ನಾನು ಹೇಳಿಲ್ಲ. ನೀವು ಪುಣ್ಯವಂತರೆಂದೂ ಶಿವನಲ್ಲಿ ಭಕ್ತಿಯುಳ್ಳವರೆಂತಲೂ, ದೃಢವಾದ ವ್ರತನಿಯಮನಿಷ್ಠರೆಂತಲೂ, ತಿಳಿದು ನಿಮಗೆ ನಾನು ಹೇಳುವೆನು. ಸಂತೋಷದಿಂದ ಕೇಳಿರಿ.

೧೦-೧೨. ಪೂರ್ವದಲ್ಲಿ ರಥಂತರವೆಂಬ ಕಲ್ಪದಲ್ಲಿ ಶಿವಜ್ಞಾನವುಳ್ಳವರೆಲ್ಲರಿಗೂ ಉತ್ತಮ ಗುರುವಾದ ವಾಮದೇವಋಷಿಯು ಗರ್ಭದಲ್ಲಿಯೇ ಮುಕ್ತನಾಗಿರುವನೆಂದು ಪ್ರಸಿದ್ಧನಾಗಿರುವನು. ಈ ವಾಮದೇವಋಷಿಯು ವೇದ, ಆಗಮ, ಪುರಾಣ ಇವುಗಳೇ ಮೊದಲಾದ ಎಲ್ಲಾ ಶಾಸ್ತ್ರಗಳ ಅರ್ಥಗಳನ್ನೂ ಅವುಗಳ ರಹಸ್ಯಗಳನ್ನೂ ತಿಳಿದವನು. ದೇವತೆಗಳು, ಮನುಷ್ಯರು ಮೊದಲಾದ ಎಲ್ಲಾ ಜೀವರುಗಳ ಜನ್ಮಕ್ಕೆ ಕಾರಣವಾದ ಕರ್ಮಗಳನ್ನೂ ತಿಳಿದವನು. ಈ ವಾಮದೇವಋಷಿಯು ಭಸ್ಮದಿಂದ ಅವಗುಂಠಿತವಾದ ಶರೀರವುಳ್ಳವನಾಗಿ, ಜಡೆಗಳನ್ನೂ ಧರಿಸಿರುವನು. ಪರಮಶಿವಜ್ಞಾನಿಯಾದುದರಿಂದ ಈ ವಾಮದೇವನಿಗೆ ವರ್ಣಾಶ್ರಮಧರ್ಮಗಳ ನಿರ್ಬಂಧವಿಲ್ಲ. ಯಾವ ವಿಧವಾದ ಅಪೇಕ್ಷೆಯೂ ಇವನಿಗಿಲ್ಲ. ಶೀತೋಷ್ಣ, ಸುಖದುಃಖಾದಿ ದ್ವಂದ್ವಧರ್ಮಗಳನ್ನು ಮೀರಿ, ಅಹಂಕಾರಸಂಬಂಧರಹಿತನಾಗಿ ಎರಡನೆಯ

ಭಸ್ಮಾವದಾತಸರ್ವಾಂಗೋ ಜಟಾಮಂಡಲಮಂಡಿತಃ ।
ನಿರಾಶ್ರಮೋ ನಿಃಸ್ಪೃಹಶ್ಚ ನಿರ್ದ್ವಂದ್ವೋ ನಿರಹಂಕೃತಿಃ ॥ ೧೨ ॥

ದಿಗಂಬರೋ ಮಹಾಜ್ಞಾನೀ ಮಹೇಶ್ವರ ಇವಾಪರಃ ।
ಶಿಷ್ಯಭೂತೈರ್ಮುನೀಂದ್ರೈಶ್ಚ ತಾದೃಶೈಃ ಪರಿವಾರಿತಃ ॥ ೧೩ ॥

ಪರ್ಯಟನ್ ಪೃಥಿವೀಮೇತಾಂ ಸ್ವಪಾದಸ್ಪರ್ಶಪುಣ್ಯತಃ ।
ಪವಿತ್ರಯನ್ಪರೇ ಧಾಮ್ನಿ ನಿಮಗ್ನಹೃದಯೋಽನ್ವಹಂ ॥ ೧೪ ॥

ಕುಮಾರಶಿಖರಂ ಮೇರೋರ್ದಕ್ಷಿಣಂ ಪ್ರಾವಿಶನ್ಮುದಾ ।
ಯತ್ರಾಸ್ತೇ ಭಗವಾನೀಶತನಯಶ್ಶಿಖಿವಾಹನಃ ॥ ೧೫ ॥

ಜ್ಞಾನಶಕ್ತಿಧರೋ ವೀರಸ್ಸರ್ವಾಸುರವಿಮರ್ದನಃ ।
ಗಜಾವಲ್ಲೀಸಮಾಯುಕ್ತಸ್ಸರ್ವೈರ್ದೇವೈರ್ನಮಸ್ಕೃತಃ ॥ ೧೬ ॥

ಮಹೇಶ್ವರನೋ ಎಂಬಂತೆ ದಿಗಂಬರನಾಗಿ ಮಹಾಜ್ಞಾನಿಯಾಗಿರುವನು. ತನ್ನಂತೆಯೇ ಇರುವ ಅನೇಕಜನ ಶಿಷ್ಯರಿಂದ ಕೂಡಿದ್ದನು.

೧೩–೧೪. ಈ ಪ್ರಕಾರದಿಂದ ಇರುವ ವಾಮದೇವಋಷಿಯು ತನ್ನ ಪಾದ ಸ್ಪರ್ಶದ ಪುಣ್ಯಮಾತ್ರದಿಂದಲೇ ಎಲ್ಲವನ್ನೂ ಪವಿತ್ರರನ್ನು ಮಾಡುತ್ತಿದ್ದನು. ಪರ ಬ್ರಹ್ಮನಲ್ಲಿ ಲೀನವಾದ ಮನಸ್ಸುಳ್ಳವನಾಗಿ, ಭೂಮಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಿರುವಾಗ ಒಂದು ಸಮಯದಲ್ಲಿ ಮೇರುಪರ್ವತದ ದಕ್ಷಿಣಭಾಗದಲ್ಲಿರುವ ಕುಮಾರಶಿಖರವೆಂಬಲ್ಲಿಗೆ ಬಂದನು.

೧೫–೧೬. ಆ ಕುಮಾರಗಿರಿಯಲ್ಲಿ ಜ್ಞಾನಶಕ್ತಿಯನ್ನು ಧರಿಸಿ ಮಯೂರ ವಾಹನನಾದ ಷಣ್ಮುಖಸ್ವಾಮಿಯು ವಾಸವಾಗಿರುವನು. ಆ ಷಣ್ಮುಖನು ಈಶಪುತ್ರನು. ಮಹಾಶೂರನು, ರಾಕ್ಷಸರೆಲ್ಲರನ್ನೂ ನಾಶಪಡಿಸುವ ಸಾಮರ್ಥ್ಯವುಳ್ಳವನು. ಗಜಾವಲ್ಲೀ ದೇವಿಯಿಂದ ಕೂಡಿ ದೇವತೆಗಳೆಲ್ಲರಿಂದಲೂ ನಮಸ್ಕರಿಸಲ್ಪಡುತ್ತಿರುವವನು. ಇಂತಹ ಷಡ್ಗುಣೈಶ್ವರ್ಯಸಂಪನ್ನನಾದ, ಷಣ್ಮುಖಸ್ವಾಮಿಯು ಅಲ್ಲಿ ವಾಸವಾಗಿರುತ್ತಿದ್ದನು.

ತತ್ರ ಸ್ಕಂದಸರೋ ನಾಮ ಸರಸ್ಸಾಗರಸನ್ನಿಭಂ ।
ಶಿಶಿರಸ್ವಾದುಪಾನೀಯಂ ಸ್ವಚ್ಛಾಗಾಧಬಹೂದಕಂ ॥ ೧೭ ॥

ಸರ್ವಾಶ್ಚರ್ಯಗುಣೋಪೇತಂ ವಿದ್ಯತೇ ಸ್ವಾಮಿಸನ್ನಿಧೌ ।
ತತ್ರ ಸ್ನಾತ್ವಾ ವಾಮದೇವಸ್ಸಹಶಿಷ್ಯೈರ್ಮಹಾಮುನಿಃ ॥ ೧೮ ॥

ಕುಮಾರಂ ಶಿಖರಾಸೀನಂ ಮುನಿವೃಂದನಿಷೇವಿತಂ ।
ಉದ್ಯದಾದಿತ್ಯಸಂಕಾಶಂ ಮಯೂರವರವಾಹನಂ ॥ ೧೯ ॥

ಚತುರ್ಭುಜಮುದಾರಾಂಗಂ ಮುಕುಟಾದಿವಿಭೂಷಿತಂ ।
ಶಕ್ತಿರತ್ನದ್ವಯೋಪಾಸ್ಯಂ ಶಕ್ತಿಕುಕ್ಕುಟಧಾರಿಣಂ ॥ ೨೦ ॥

ವರದಾಭಯಹಸ್ತಂ ಚ ದೃಷ್ಟ್ವಾ ಸ್ಕಂದಂ ಮುನೀಶ್ವರಃ ।
ಸಂಪೂಜ್ಯ ಪರಯಾ ಭಕ್ತ್ಯಾ ಸ್ತೋತುಂ ಸಮುಪಚಕ್ರಮೇ ॥ ೨೧ ॥

---

೧೭–೧೮. ಆ ಗಿರಿಯಲ್ಲಿ ಸ್ಕಂದಸರಸ್ಸೆಂಬದಾಗಿ ಹೆಸರುಳ್ಳ ಒಂದು ದೊಡ್ಡ ಸರೋವರವಿರುವುದು. ಅದು ಸಮುದ್ರಕ್ಕೆ ಸಮನಾಗಿಯೂ, ತಣ್ಣಗೆ ರುಚಿಕರವಾದ ನೀರಿನಿಂದ ಕೂಡಿ ಬಹಳ ಆಳವಾಗಿಯೂ, ನಿರ್ಮಲವಾಗಿಯೂ ಇರುವುದು. ಅದು ಕುಮಾರಸ್ವಾಮಿಯು ವಾಸವಿರುವ ಪ್ರದೇಶಕ್ಕೆ ಅತಿ ಸಮೀಪದಲ್ಲಿರುವುದು. ಇಂತಹ ಆ ಸರೋವರದಲ್ಲಿ ವಾಮದೇವಮಹರ್ಷಿಯು ತನ್ನ ಶಿಷ್ಯರಿಂದ ಕೂಡಿ ಸ್ನಾನ ಮಾಡಿದನು.

೧೯–೨೧. ಅನಂತರ ಆ ವಾಮದೇವಋಷಿಯು ಮುನಿಗಳ ಸಮೂಹದಿಂದ ಸೇವಿಸಲ್ಪಡುತ್ತಿರುವ ಕುಮಾರಸ್ವಾಮಿಯ ದರ್ಶನಮಾಡಿದನು. ಆ ಸ್ವಾಮಿಯು ಆ ಗಿರಿಯ ಶಿಖರದಲ್ಲಿ ಉದಿಸಿದ ಸೂರ್ಯನಿಗೆ ಸಮಾನ ಕಾಂತಿಯಿಂದ ಬೆಳಗುತ್ತಿರುವನು. ಉತ್ತಮವಾದ ನವಿಲಿನ ಮೇಲೆ ಕುಳಿತಿರುವನು. ಚತುರ್ಭುಜಗಳು, ವಿಸ್ತಾರವಾದ ಶರೀರಾವಯವಗಳು, ಕಿರೀಟವೇ ಮೊದಲಾದ ಆಭರಣಗಳು ಇವುಗಳಿಂದ ಒಪ್ಪುತ್ತಿರುವನು. ಶ್ರೇಷ್ಠವಾದ ಎರಡು ಶಕ್ತಿದೇವತೆಗಳಿಂದ ಸೇವಿಸಲ್ಪಡುತ್ತಿರುವನು, ಶಕ್ತ್ಯಾಯುಧವನ್ನೂ ಕೋಳಿಯನ್ನೂ ಧರಿಸಿ, ವರದ, ಅಭಯಹಸ್ತಗಳಿಂದ ಕೂಡಿರುವ ಕುಮಾರಸ್ವಾಮಿಯನ್ನು ದರ್ಶನಮಾಡಿ, ಉತ್ತಮವಾದ ಭಕ್ತಿಯಿಂದ ಪೂಜಿಸಿ ಸ್ತೋತ್ರಮಾಡಲುಪಕ್ರಮಿಸಿದನು.

॥ ವಾಮದೇವ ಉವಾಚ ॥

ಓಂ ನಮಃ ಪ್ರಣವಾರ್ಥಾಯ ಪ್ರಣವಾರ್ಥವಿಧಾಯಿನೇ ।
ಪ್ರಣವಾಕ್ಷರಬೀಜಾಯ ಪ್ರಣವಾಯ ನಮೋ ನಮಃ ॥ ೨೨ ॥

ವೇದಾಂತಾರ್ಥಸ್ವರೂಪಾಯ ವೇದಾಂತಾರ್ಥವಿಧಾಯಿನೇ ।
ವೇದಾಂತಾರ್ಥವಿದೇ ನಿತ್ಯಂ ವಿದಿತಾಯ ನಮೋ ನಮಃ ॥ ೨೩ ॥

ನಮೋ ಗುಹಾಯ ಭೂತಾನಾಂ ಗುಹಾಸು ನಿಹಿತಾಯ ಚ ।
ಗುಹ್ಯಾಯ ಗುಹ್ಯರೂಪಾಯ ಗುಹ್ಯಾಗಮವಿದೇ ನಮಃ ॥ ೨೪ ॥

ಅಣೋರಣೀಯಸೇ ತುಭ್ಯಂ ಮಹತೋऽಪಿ ಮಹೀಯಸೇ ।
ನಮಃ ಪರಾವರಜ್ಞಾಯ ಪರಮಾತ್ಮಸ್ವರೂಪಿಣೇ ॥ ೨೫ ॥

---

೨೨. ಓ ದೇವನೇ, ನೀನು ಪ್ರಣವಮಂತ್ರದ ಅರ್ಥರೂಪದಿಂದ ಇರುವೆ. ಪ್ರಣವಾರ್ಥಕ್ಕೆ ನೀನೇ ವಿಧಾಯಕನು. ಓಂಕಾರವೆಂಬ ಪ್ರಣವಾಕ್ಷರಕ್ಕೆ ನೀನು ಬೀಜ ಸ್ವರೂಪನು. ಅಷ್ಟೇಕೆ ? ನೀನೇ ಪ್ರಣವಸ್ವರೂಪನು. ಇಂತಹ ನಿನಗೆ ಅನೇಕ ನಮಸ್ಕಾರಗಳು.

೨೩. ನೀನು ವೇದಾಂತದ ಅರ್ಥದಲ್ಲಿ ಪ್ರತಿಪಾದಿಸಲ್ಪಡುವವನು. ವೇದಗಳ ಕೊನೆಯಾದ, ಉಪನಿಷತ್ತುಗಳ ಅರ್ಥವನ್ನು ನಿರ್ಣಯಮಾಡಿ ಹೇಳುವವನು· ವೇದಾಂತಗಳ ಅರ್ಥವನ್ನು ಸರಿಯಾಗಿ ತಿಳಿದಿರುವವನು. ನಿತ್ಯಜ್ಞಾನರೂಪದಿಂದಿರು ವವನು. ಇಂತಹ ನಿನಗೆ ಎಂದರೆ ಕುಮಾರಸ್ವಾಮಿಗೆ ನಮಸ್ಕಾರವು.

೨೪. ಗುಹನೆಂಬ ಹೆಸರಿನಿಂದ ಪ್ರಸಿದ್ಧನಾಗಿಯೂ, ಪ್ರಾಣಿಗಳಲ್ಲಿ ಗುಹೆಯ ರೂಪದಿಂದಿರುವ, ಬುದ್ಧಿಯಲ್ಲಿ ಅಡಗಿರುವವನಾಗಿಯೂ, ಗುಟ್ಟಾಗಿ ಗೂಢವಾದ ರೂಪದಿಂದಿರುವವನೂ, ಗೂಢವಾದ ಶಾಸ್ತ್ರಗಳನ್ನು ಬಲ್ಲವನೂ ಆದ ಕುಮಾರ ಸ್ವಾಮಿಗೆ ನಮಸ್ಕಾರವು.

೨೫. ಅಣುವಿಗಿಂತಲೂ, ಅಣುಪರಿಮಾಣರೂಪದಿಂದಲೂ, ದೊಡ್ಡ ಪದಾರ್ಥ ಕ್ಕಿಂತಲೂ, ಹೆಚ್ಚಾದ ಪರಿಮಾಣದಿಂದಲೂ, ಇದ್ದುಕೊಂಡು ಉಚ್ಚ, ನೀಚ ಭಾವ ಗಳನ್ನು ತಿಳಿದುಕೊಂಡು ಪರಮಾತ್ಮಸ್ವರೂಪದಿಂದಿರುವ ಕುಮಾರಸ್ವಾಮಿಗೆ ನಮ ಸ್ಕಾರವು.

ಸ್ಕಂದಾಯ ಸ್ಕಂದರೂಪಾಯ ಮಿಹಿರಾರುಣತೇಜಸೇ ।
ನಮೋ ಮಂದಾರಮಾಲೋದ್ಯನ್ಮುಕುಟಾದಿಭೃತೇ ಸದಾ　　॥ ೨೬ ॥

ಶಿವಶಿಷ್ಯಾಯ ಪುತ್ರಾಯ ಶಿವಸ್ಯ ಶಿವದಾಯಿನೇ ।
ಶಿವಪ್ರಿಯಾಯ ಶಿವಯೋರಾನಂದನಿಧಯೇ ನಮಃ　　॥ ೨೭ ॥

ಗಾಂಗೇಯಾಯ ನಮಸ್ತುಭ್ಯಂ ಕಾರ್ತಿಕೇಯಾಯ ಧೀಮತೇ ।
ಉಮಾಪುತ್ರಾಯ ಮಹತೇ ಶರಕಾನನಶಾಯಿನೇ　　॥ ೨೮ ॥

ಷಡಕ್ಷರಶರೀರಾಯ ಷಡ್ವಿದಾರ್ಥವಿಧಾಯಿನೇ ।
ಷಡಧ್ವಾತೀತರೂಪಾಯ ಷಣ್ಮುಖಾಯ ನಮೋ ನಮಃ　　॥ ೨೯ ॥

ದ್ವಾದಶಾಯತನೇತ್ರಾಯ ದ್ವಾದಶೋದ್ಯತಬಾಹವೇ ।
ದ್ವಾದಶಾಯುಧಧಾರಾಯ ದ್ವಾದಶಾತ್ಮನ್ನಮೋಽಸ್ತು ತೇ　　॥ ೩೦ ॥

---

೨೬. ಸ್ಕಂದನೆಂದು ಹೆಸರನ್ನು ಹೊಂದಿ, ಸ್ಕಂದರೂಪದಿಂದಿರುವವನೂ, ಸೂರ್ಯನಂತೆ ಕೆಂಪಾದ ತೇಜಸ್ಸನ್ನು ಧರಿಸಿರುವವನೂ, ಯಾವಾಗಲೂ ಮಂದಾರ ಪುಷ್ಪದ ಮಾಲಿಕೆಯನ್ನು ಕಿರೀಟದಲ್ಲಿ ಧರಿಸಿರುವವನೂ ಆದ ಕುಮಾರಸ್ವಾಮಿಗೆ ನಮಸ್ಕಾರವು.

೨೭. ಶಿವನಿಗೆ ಪುತ್ರಭಾವದಿಂದಲೂ, ಶಿಷ್ಯಭಾವದಿಂದಲೂ, ಇದ್ದುಕೊಂಡು, ಶಿವನ ಪ್ರೀತಿಗೆ ಪಾತ್ರನಾಗಿ ಪಾರ್ವತೀಪರಮೇಶ್ವರರಿಗೆ ಸಂತೋಷವನ್ನುಂಟುಮಾಡುತ್ತಾ, ಲೋಕಕ್ಕೆಲ್ಲಕ್ಕೂ ಮಂಗಳವನ್ನು ಕೊಡುವ ಕುಮಾರಸ್ವಾಮಿಗೆ ನಮಸ್ಕಾರವು.

೨೮-೨೯. ಗಂಗಾಪುತ್ರನೂ, ಬುದ್ಧಿವಂತನೂ, ಕೃತ್ತಿಕಾದೇವಿಯರ ಪುತ್ರನೂ ಪಾರ್ವತೀದೇವಿಗೆ ಮಗನೂ ಆದ, ಲೋಕಕ್ಕೆಲ್ಲಕ್ಕೂ ಪೂಜ್ಯನಾದ ಕುಮಾರಸ್ವಾಮಿಗೆ ನಮಸ್ಕಾರವು. ಶರವನದಲ್ಲಿ ಮಲಗಿರುವ ಕುಮಾರಸ್ವಾಮಿಗೆ ನಮಸ್ಕಾರವು. ಆರು ಅಕ್ಷರಗಳುಳ್ಳ ಮಂತ್ರದ ಆಕಾರವನ್ನು ಹೊಂದಿ, ಆರು ವಿಧವಾದ ಅರ್ಥವನ್ನು ಲೋಕಕ್ಕೆ ತಿಳಿಸುವವನಾಗಿಯೂ, ಆರು ಅಧ್ವಗಳನ್ನು ಮೀರಿರುವವನಾಗಿಯೂ ಇರುವ ಕುಮಾರಸ್ವಾಮಿಗೆ ನಮಸ್ಕಾರವು.

೩೦. ವಿಸ್ತಾರವಾದ ಹನ್ನೆರಡು ಕಣ್ಣುಗಳಿಂದಲೂ, ಉತ್ಸಾಹದಿಂದ ಕೂಡಿರುವ ಹನ್ನೆರಡು ತೋಳುಗಳಿಂದಲೂ ಕೂಡಿ, ಹನ್ನೆರಡು ಆಯುಧಗಳನ್ನು ಧರಿಸಿ ಹನ್ನೆರಡು ವಿಧವಾದ ರೂಪದಿಂದಿರುವ ಕುಮಾರಸ್ವಾಮಿಗೆ ನಮಸ್ಕಾರವು.

ಚತುರ್ಭುಜಾಯ ಶಾಂತಾಯ ಶಕ್ತಿಕುಕ್ಕುಟಧಾರಿಣೇ ।
ವರದಾಯ ವಿಹಸ್ತಾಯ ನಮೋಽಸುರವಿದಾರಿಣೇ ॥ ೩೧ ॥

ಗಜಾವಲ್ಲೀಕುಚಾಲಿಪ್ತಕುಂಕುಮಾಂಕಿತವಕ್ಷಸೇ ।
ನಮೋ ಗಜಾನನಾನಂದಮಹಿಮಾನಂದಿತಾತ್ಮನೇ ॥ ೩೨ ॥

ಬ್ರಹ್ಮಾದಿದೇವಮುನಿಕಿನ್ನರಗೀಯಮಾನ-
ಗಾಥಾವಿಶೇಷಶುಚಿಚಿಂತಿತಕೀರ್ತಿಧಾಮ್ನೇ ।
ವೃಂದಾರಕಾಮಲಕಿರೀಟವಿಭೂಷಣಸ್ರ-
ಕ್ಪೂಜ್ಯಾಭಿರಾಮಪದಪಂಕಜ ತೇ ನಮೋಽಸ್ತು ॥ ೩೩ ॥

ಇತಿ ಸ್ಕಂದಸ್ತವಂ ದಿವ್ಯಂ ವಾಮದೇವೇನ ಭಾಷಿತಂ ।
ಯಃ ಪಠೇಚ್ಛೃಣುಯಾದ್ವಾಪಿ ಸ ಯಾತಿ ಪರಮಾಂ ಗತಿಂ ॥ ೩೪ ॥

೩೧. ಉಪಶಾಂತನಾಗಿಯೂ, ನಾಲ್ಕು ತೋಳುಗಳುಳ್ಳವನಾಗಿಯೂ, ಶಕ್ತ್ಯಾಯುಧವನ್ನೂ, ಕುಕ್ಕುಟವನ್ನೂ ಧರಿಸಿಕೊಂಡು, ವರದಾಭಯ ಹಸ್ತಗಳಿಂದಿರುವವನಾಗಿ ರಾಕ್ಷಸರನ್ನು ನಾಶಮಾಡುವ ಕುಮಾರಸ್ವಾಮಿಗೆ ನಮಸ್ಕಾರವು.

೩೨. ಗಜಾವಲ್ಲೀದೇವಿಯ ಸ್ತನಗಳ ಕುಂಕುಮದಿಂದ ಚಿಹ್ನಿತವಾದ ವಕ್ಷಸ್ಥಳವುಳ್ಳವನಾದವನೂ, ಗಣಪತಿಗೆ ಸಂತೋಷವನ್ನುಂಟುಮಾಡುವ ಮಹಿಮೆಯಿಂದ ಕೂಡಿರುವನೂ ಆದ ಕುಮಾರಸ್ವಾಮಿಗೆ ನಮಸ್ಕಾರವು.

೩೩. ಬ್ರಹ್ಮನೇ ಮೊದಲಾದ ದೇವತೆಗಳೂ, ಋಷಿಗಳೂ, ಕಿನ್ನರರೂ, ಮೊದಲಾದವರು ಪರಿಶುದ್ಧವಾದ ಅರ್ಥವುಳ್ಳ, ನಿರತಿಶಯವಾದ ಪದ್ಯಗಳಿಂದ ಕುಮಾರಸ್ವಾಮಿಯನ್ನು ಸ್ತುತಿಸುತ್ತಿರುವರು. ಕೀರ್ತಿಗೆ ಸ್ಥಾನವಾಗಿರುವ ಇಂತಹ ಕುಮಾರಸ್ವಾಮಿಗೆ ನಮಸ್ಕಾರವು, ದೇವತೆಗಳ ನಿರ್ಮಲವಾದ ಕಿರೀಟದಲ್ಲಿರುವ ಪುಷ್ಪಮಾಲಿಕೆಗಳು ಕುಮಾರಸ್ವಾಮಿಯ ಮನೋಹರವಾದ ಪಾದಕಮಲಗಳನ್ನು ಅಲಂಕರಿಸುತ್ತಿರುವವು. ಇಂತಹ ಕುಮಾರಸ್ವಾಮಿಗೆ ನಮಸ್ಕಾರವು.

೩೪. ವಾಮದೇವಋಷಿಯು ಕುಮಾರಸ್ವಾಮಿಯನ್ನು ಸ್ತೋತ್ರಮಾಡಿದ ಈ ಸ್ತೋತ್ರವು ಬಹಳ ಉತ್ತಮವಾದದ್ದು. ಇದನ್ನು ಕೇಳಿದವನೂ, ಪಠಿಸಿದವನೂ ಪರಮ ಉತ್ತಮವಾದ ಗತಿಯನ್ನು ಹೊಂದುವನು.

ಮಹಾಪ್ರಜ್ಞಾಕರಂ ಹ್ಯೇತಚ್ಛಿವಭಕ್ತಿವಿವರ್ಧನಂ ।
ಆಯುರಾರೋಗ್ಯಧನಕೃತ್ಸರ್ವಕಾಮಪ್ರದಂ ಸದಾ ॥ ೩೫ ॥

ಇತಿ ಸ್ತುತ್ವಾ ವಾಮದೇವೋ ದೇವಂ ಸೇನಾಪತಿಂ ಪ್ರಭುಂ ।
ಪ್ರದಕ್ಷಿಣಾತ್ರಯಂ ಕೃತ್ವಾ ಪ್ರಣಮ್ಯ ಭುವಿ ದಂಡವತ್ ॥ ೩೬ ॥

ಸಾಷ್ಟಾಂಗಂ ಚ ಪುನಃ ಕೃತ್ವಾ ಪ್ರದಕ್ಷಿಣನಮಸ್ಕೃತಂ ।
ಅಭವತ್ಪಾರ್ಶ್ವತಸ್ತಸ್ಯ ವಿನಯಾವನತೋ ದ್ವಿಜಾಃ ॥ ೩೭ ॥

ವಾಮದೇವಕೃತಂ ಸ್ತೋತ್ರಂ ಪರಮಾರ್ಥವಿಜೃಂಭಿತಂ ।
ಶ್ರುತ್ವಾಭವತ್ಪ್ರಸನ್ನೋ ಹಿ ಮಹೇಶ್ವರಸುತಃ ಪ್ರಭುಃ ॥ ೩೮ ॥

ತಮುವಾಚ ಮಹಾಸೇನಃ ಪ್ರೀತೋಽಸ್ಮಿ ತವ ಪೂಜಯಾ ।
ಭಕ್ತ್ಯಾ ಸ್ತುತ್ಯಾ ಚ ಭದ್ರಂ ತೇ ಕಿಮದ್ಯ ಕರವಾಣ್ಯಹಂ ॥ ೩೯ ॥

೩೫. ಈ ಸ್ತೋತ್ರವು ನಿರ್ಮಲವಾದ ಜ್ಞಾನವನ್ನು ಹೆಚ್ಚುಮಾಡುವ ಶಕ್ತಿಯುಳ್ಳದ್ದಾಗಿರುವುದು. ಶಿವನಲ್ಲಿ ಭಕ್ತಿಯನ್ನು ಹೆಚ್ಚಿಸುವುದು. ಯಾವಾಗಲೂ ಆಯುಸ್ಸು, ಆರೋಗ್ಯ ಇವುಗಳನ್ನು ಹೆಚ್ಚಿಸುವುದಲ್ಲದೆ, ಬೇಕಾದ ಇಷ್ಟಾರ್ಥಗಳೆಲ್ಲವನ್ನೂ ಕೊಡುವುದು.

೩೬-೩೭. ವಾಮದೇವಋಷಿಯು ದೇವತೆಗಳಿಗೆ ಸೇನಾಪತಿಯಾದ ಷಣ್ಮುಖನನ್ನು ಹೀಗೆ ಸ್ತೋತ್ರಮಾಡಿ, ಪ್ರಭುವಾದ ಆ ಕುಮಾರಸ್ವಾಮಿಗೆ ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕರಿಸಿ, ಮತ್ತೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಆ ದೇವನ ಪಕ್ಕದಲ್ಲಿ ವಿನಯದಿಂದ ತಲೆಯನ್ನು ಬಗ್ಗಿಸಿಕೊಂಡು ನಿಂತನು.

೩೮-೪೧. ಮಹೇಶ್ವರನ ಪುತ್ರನೂ ಸರ್ವರಿಗೂ ಪ್ರಭುವೂ ಆದ ಆ ಕುಮಾರಸ್ವಾಮಿಯು, ವಾಮದೇವನು ಮಾಡಿದ ಉತ್ತಮಾರ್ಥಗರ್ಭಿತವಾದ ಈ ಸ್ತೋತ್ರವನ್ನು ಕೇಳಿ ತುಂಬಾ ಪ್ರಸನ್ನನಾದನು. ಅನಂತರ ವಾಮದೇವಋಷಿಯನ್ನು ಕುರಿತು “ ನಿನ್ನ ಪೂಜೆಯಿಂದ ಸಂತುಷ್ಟನಾಗಿರುವೆನು. ನಿನ್ನ ಭಕ್ತಿಗೂ, ನಿನ್ನ ಸ್ತೋತ್ರಕ್ಕೂ ಮೆಚ್ಚಿದೆನು. ನಿನಗೆ ಯಾವ ವಿಧವಾದ ಮಂಗಳವನ್ನು ಮಾಡಲಿ? ಎಲೈ ವಾಮದೇವಋಷಿಯೇ! ನೀನು ಯೋಗಿಗಳಲ್ಲಿ ಶ್ರೇಷ್ಠನಾಗಿರುವೆ. ನೀನು ಯಾವ ವಿಧವಾದ ಆಶೆಯೂ ಇಲ್ಲದವನು, ನಿಸ್ಪೃಹನು, ಪರಿಪೂರ್ಣನು ನಿಮ್ಮಂಥವರು ಈ ಲೋಕದಲ್ಲಿ ಬೇಡುವ ಪದಾರ್ಥವು ಯಾವುದೂ ಇಲ್ಲ. ಆದಾಗ್ಯೂ ನೀವು

ಮುನೇ ತ್ವಂ ಯೋಗಿನಾಂ ಮುಖ್ಯಃ ಪರಿಪೂರ್ಣಶ್ಚ ನಿಸ್ಸ್ಪೃಹಃ ।
ಭವಾದೃಶಾಂ ಹಿ ಲೋಕೇಽಸ್ಮಿನ್ಪ್ರಾರ್ಥನೀಯಂ ನ ವಿದ್ಯತೇ ॥ ೪೦ ॥

ತಥಾಪಿ ಧರ್ಮರಕ್ಷಾಯೈ ಲೋಕಾನುಗ್ರಹಕಾಂಕ್ಷಯಾ ।
ತ್ವಾದೃಶಾಃ ಸಾಧವಸ್ಸಂತೋ ವಿರಚಂತಿ ಮಹೀತಲೇ ॥ ೪೧ ॥

ಶ್ರೋತವ್ಯಮಸ್ತಿ ಚೇದ್ಬ್ರಹ್ಮನ್ ವಕ್ತುಮರ್ಹಸಿ ಸಾಂಪ್ರತಂ ।
ತದಿದಾನೀಮಹಂ ವಕ್ಷ್ಯೇ ಲೋಕಾನುಗ್ರಹಹೇತವೇ ॥ ೪೨ ॥

ಇತಿ ಸ್ಕಂದವಚಃ ಶ್ರುತ್ವಾ ವಾಮದೇವೋ ಮಹಾಮುನಿಃ ।
ಪ್ರಶ್ರಯಾವನತಃ ಪ್ರಾಹ ಮೇಘಗಂಭೀರಯಾ ಗಿರಾ ॥ ೪೩ ॥

॥ ವಾಮದೇವ ಉವಾಚ ॥

ಭಗವನ್ ಪರಮೇಶಸ್ತ್ವಂ ಪರಾಪರವಿಭೂತಿದಃ ।
ಸರ್ವಜ್ಞಸ್ಸರ್ವಕರ್ತಾ ಚ ಸರ್ವಶಕ್ತಿಧರಃ ಪ್ರಭುಃ ॥ ೪೪ ॥

---

ಧರ್ಮವನ್ನು ರಕ್ಷಿಸುವುದಕ್ಕಾಗಿಯೂ, ಲೋಕಕ್ಕೆ ಅನುಗ್ರಹವನ್ನು ಮಾಡುವ ಆಶೆಯಿಂದಲೂ, ಭೂಮಿಯಲ್ಲಿ ಸತ್ಪುರುಷರಾದ ಸಾಧುಗಳರೂಪದಿಂದ ಸಂಚರಿಸುತ್ತೀರಿ.

೪೨-೪೩. ಎಲೈ ಜ್ಞಾನಿಯಾದ ವಾಮದೇವಋಷಿಯೇ ! ನನ್ನಲ್ಲಿ ನೀನು ತಿಳಿಸಬೇಕಾದ ಅಂಶವೇನಾದರೂ ಇದ್ದಲ್ಲಿ ಸಂಕೋಚಪಡದೆ ಅದನ್ನು ಈಗ ನನಗೆ ತಿಳಿಸು. ಅದನ್ನು ಲೋಕದ ಅನುಗ್ರಹಕ್ಕಾಗಿ ಈಗ ಹೇಳುತ್ತೇನೆ'' ಎಂದು ಷಣ್ಮುಖನು ಹೇಳಲು ಆ ಮಾತನ್ನು ಕೇಳಿ ವಾಮದೇವಋಷಿಯು ವಿನಯದಿಂದ ನಮ್ರನಾಗಿ ಮೇಘದಂತೆ ಗಂಭೀರವಾದ ಧ್ವನಿಯಿಂದ ಇಂತೆಂದನು.

೪೪-೪೭. ಎಲೈ ಷಡ್ಗುಣೈಶ್ವರ್ಯಸಂಪನ್ನನಾದ ದೇವನೇ, ನೀನು ಭಕ್ತರಿಗೆ ಐಹಿಕ ಮತ್ತು ಪಾರಲೌಕಿಕವಾದ ಐಶ್ವರ್ಯಗಳನ್ನು ಅನುಗ್ರಹಿಸತಕ್ಕವನು. ಸರ್ವವನ್ನೂ ತಿಳಿದವನಾಗಿರುವೆ. ಎಲ್ಲವನ್ನೂ ನಿರ್ಮಿಸುವ ಸಾಮರ್ಥ್ಯವುಳ್ಳವನು. ಎಲ್ಲಾ ವಿಧವಾದ ಶಕ್ತಿಗಳೂ ನಿನ್ನಲ್ಲಿವೆ. ನೀನು ಎಲ್ಲರಿಗೂ ಪ್ರಭುವಾಗಿರುವೆ. ನಾವುಗಳು ಜೀವರೆನಿಸಿಕೊಂಡು ಪರಮೇಶ್ವರನಾದ ನಿನ್ನ ಸನ್ನಿಧಿಯಲ್ಲಿ ಮಾತನಾಡುವುದಕ್ಕೆ ಸಮರ್ಥರೇ ? ಆದರೂ ನಮ್ಮ ಸ್ವಭಾವವೇ ಇಷ್ಟರಮಟ್ಟಿನದಾಗಿರುವಾಗ ನನ್ನ ಸಂಗಡ ನೀನು ಮಾತಾಡಿರುವುದೇ ನನಗೆ ದೊಡ್ಡ ಅನುಗ್ರಹವಾಗಿರುವುದು. ಇದರಿಂದಲೇ ನಾನು ಕೃತಕೃತ್ಯನಾಗಿರುವೆನು. ನನಗೆ ಇರುವ ಅತ್ಯಲ್ಪವಾದ ಜ್ಞಾನ

**ಜೀವಾ ವಯಂ ತು ತೇ ವಕ್ತುಂ ಸನ್ನಿಧೌ ಪರಮೇಶಿತುಃ ।**
**ತಥಾಪ್ಯನುಗ್ರಹೋಽಯಂ ತೇ ಯಸ್ತ್ವಂ ವದಸಿ ಮಾಂ ಪ್ರತಿ ॥ ೪೫ ॥**

**ಕೃತಾರ್ಥೋಽಹಂ ಮಹಾಪ್ರಾಜ್ಞ ವಿಜ್ಞಾನಕಣಮಾತ್ರತಃ ।**
**ಪ್ರೇರಿತಃ ಪರಿಪೃಚ್ಛಾಮಿ ಕ್ಷಂತವ್ಯೋಽತಿಕ್ರಮೋ ಮಮ ॥ ೪೬ ॥**

**ಪ್ರಣವೋ ಹಿ ಪರಃ ಸಾಕ್ಷಾತ್ಪರಮೇಶ್ವರವಾಚಕಃ ।**
**ವಾಚ್ಯಃ ಪಶುಪತಿರ್ದೇವಃ ಪಶೂನಾಂ ಪಾಶಮೋಚಕಃ ॥ ೪೭ ॥**

**ವಾಚಕೇನ ಸಮಾಹೂತಃ ಪಶೂನ್ಮೋಚಯತೇ ಕ್ಷಣಾತ್ ।**
**ತಸ್ಮಾದ್ವಾಚಕತಾಸಿದ್ಧಿಃ ಪ್ರಣವೇನ ಶಿವಂ ಪ್ರತಿ ॥ ೪೮ ॥**

**ಓಮಿತೀದಂ ಸರ್ವಮಿತಿ ಶ್ರುತಿರಾಹ ಸನಾತನೀ ।**
**ಓಮಿತಿ ಬ್ರಹ್ಮ ಸರ್ವಂ ಹಿ ಬ್ರಹ್ಮೇತಿ ಚ ಸಮಬ್ರವೀತ್ ॥ ೪೯ ॥**

---

ಬಲದಿಂದ ಪ್ರೇರಿತನಾಗಿ ನಿನ್ನನ್ನು ಪ್ರಶ್ನೆ ಮಾಡುವೆನು. ನನ್ನ ಈ ಪ್ರಕಾರವಾದ ಸಾಹಸದಿಂದ ಮಾಡಿದ ಅತಿಕ್ರಮವನ್ನು ನೀನು ಕ್ಷಮಿಸಬೇಕು.

೪೭–೪೮. ಪ್ರಣವಮಂತ್ರವು ಅತ್ಯಂತ ಶ್ರೇಷ್ಠವಾದದ್ದು. ಅದು ಸಾಕ್ಷಾತ್ತಾಗಿ ಪರಮೇಶ್ವರನನ್ನೇ ಬೋಧಿಸುವುದು. ಪ್ರಣವಮಂತ್ರವು ವಾಚಕವೆನಿಸುವುದು. ಪಶುಗಳನ್ನು ಎಂದರೆ ಮಾನವರನ್ನು ಅವುಗಳ ಪಾಶಗಳಿಂದ (ಸಂಸಾರದಿಂದ) ಬಿಡುಗಡೆ ಮಾಡುವ ಪಶುಪತಿಯಾದ ದೇವದೇವನೇ ಪ್ರಣವಶಬ್ದಕ್ಕೆ ವಾಚ್ಯನೆನಿಸುವನು. ವಾಚಕವಾದ ಪ್ರಣವಶಬ್ದದಿಂದ ಪಶುಪತಿಯಾದ ಮಹಾದೇವನನ್ನು ಧ್ಯಾನಮಾಡಿದರೆ ಪಶುಗಳನ್ನು (ಮಾನವರನ್ನು) ಕ್ಷಣಕಾಲದ ಒಳಗಾಗಿ (ಸಂಸಾರಪಾಶದಿಂದ) ಬಿಡುಗಡೆ ಮಾಡುವನು. ಆದ್ದರಿಂದ ಪ್ರಣವಮಂತ್ರಕ್ಕೆ ಶಿವನಲ್ಲಿಯೇ ವಾಚಕತ್ವವು ದೃಢವಾಗಿರುವುದು ಎಂದರೆ ಪ್ರಣವಶಬ್ದಕ್ಕೆ ಶಿವನೇ ಮುಖ್ಯದೇವತೆಯಾಗಿ ಪ್ರತಿಪಾದಿಸಲ್ಪಟ್ಟಿರುವನು.

೪೯. ತೈತ್ತರೀಯ ಉಪನಿಷತ್ತಿನಲ್ಲಿ "ಓಮಿತಿ ಬ್ರಹ್ಮ। ಓಮಿತೀದಗ್ಂ ಸರ್ವಂ" ಎಂದು ಹೇಳಿರುವುದು. ಎಂದರೆ ಓಂಕಾರವೇ (ಪ್ರಣವವೇ) ಪರಬ್ರಹ್ಮವು ಅದೇ ವಿಶ್ವದಲ್ಲಿರುವ ಸಮಸ್ತ ಚರಾಚರವಸ್ತುಸ್ವರೂಪವಾಗಿರುವುದು. ನಾವು ನೋಡುವ ಅಥವಾ ನಮ್ಮ ಇಂದ್ರಿಯಗಳಿಗೆ ಗೋಚರವಾಗುವ ದೃಶ್ಯಾದೃಶ್ಯವಸ್ತುಗಳೆಲ್ಲವೂ ಓಂಕಾರಸ್ವರೂಪವಾದ ಪರಬ್ರಹ್ಮವೇ ಆಗಿರುವುದು. ಇದನ್ನು ಬಿಟ್ಟು ಬೇರೆ ಎರಡನೆಯ ವಸ್ತು ಯಾವುದೂ ಇಲ್ಲ ಎಂದು ಶ್ರುತಿಯು ಸಾರುತ್ತಿರುವುದು.

ದೇವಸೇನಾಪತೇ ತುಭ್ಯಂ ದೇವಾನಾಂ ಪತಯೇ ನಮಃ ।
ನಮೋ ಯತೀನಾಂ ಪತಯೇ ಪರಿಪೂರ್ಣಾಯ ತೇ ನಮಃ ॥ ೫೦ ॥

ಏವಂ ಸ್ಥಿತೇ ಜಗತ್ಯಸ್ಮಿಂಛಿವಾದನ್ಯನ್ನ ವಿದ್ಯತೇ ।
ಸರ್ವರೂಪಧರಃ ಸ್ವಾಮೀ ಶಿವೋ ವ್ಯಾಪೀ ಮಹೇಶ್ವರಃ ॥ ೫೧ ॥

ಸಮಷ್ಟಿವ್ಯಷ್ಟಿಭಾವೇನ ಪ್ರಣವಾರ್ಥಃ ಶ್ರುತೋ ಮಯಾ ।
ನ ಜಾತುಚಿನ್ಮಹಾಸೇನ ಸಂಪ್ರಾಪ್ತಸ್ತ್ವಾದೃಶೋ ಗುರುಃ ॥ ೫೨ ॥

ಅತಃ ಕೃತ್ವಾನುಕಂಪಾಂ ವೈ ತಮರ್ಥಂ ವಕ್ತುಮರ್ಹಸಿ ।
ಉಪದೇಶವಿಧಾನೇನ ಸದಾಚಾರಕ್ರಮೇಣ ಚ ॥ ೫೩ ॥

ಸ್ವಾಮ್ಯೇಕಃ ಸರ್ವಜಂತೂನಾಂ ಪಾಶಚ್ಛೇದಕರೋ ಗುರುಃ ।
ಅತಸ್ತ್ವತ್ಕೃಪಯಾ ಸೋಽರ್ಥಃ ಶ್ರೋತವ್ಯೋ ಹಿ ಮಯಾ ಗುರೋ ॥೫೪॥

---

೫೦-೫೨. ಎಲೈ ದೇವದೇವನೇ ದೇವಸೇನೆಗಳೆಲ್ಲಕ್ಕೂ, ದೇವತೆಗಳಿಗೂ ನೀನೇ ಅಧಿಪತಿಯಾಗಿರುವೆ. ನಿನಗೆ ನಮಸ್ಕಾರವು, ಯತಿಗಳೆಲ್ಲರಿಗೂ, ಅಧಿಪತಿಯಾಗಿರುವೆ, ಪರಿಪೂರ್ಣನಾಗಿರುವೆ ಇಂತಹ ನಿನಗೆ ನಮಸ್ಕಾರವು ಎಂದು ಶ್ರುತಿಯೇ ಹೇಳುತ್ತಿರುವದು. ಹೀಗಿರುವಾಗ ಈ ಲೋಕದಲ್ಲಿ ಶಿವನಿಗಿಂತಲೂ, ಬೇರೆಯಾದ ವಸ್ತುವೇ ಇಲ್ಲವು. ಶಿವನು ಎಲ್ಲಾ ವಿಧವಾದ ಆಕಾರಗಳನ್ನೂ ಧರಿಸಿ ಎಲ್ಲವನ್ನೂ ವ್ಯಾಪಿಸಿಕೊಂಡು ಮಹೇಶ್ವರನಾಗಿರುವನು. ನಾನು ಸಮಷ್ಟಿ (ಒಟ್ಟಿನಿಂದ) ವ್ಯಷ್ಟಿ (ಬೇರೆಬೇರೆಯರೂಪದಿಂದ) ಭಾವದಿಂದಿರುವ ಪ್ರಣವದ ಅರ್ಥವನ್ನು ಕೇಳಿರುವೆನು. ಆದರೆ ನಿನ್ನಂತೆ ಇರುವ ಗುರುವಿನಿಂದ ಉಪದೇಶ ಪಡೆದಿಲ್ಲ.

೫೩. ಆದ್ದರಿಂದ ನೀನು ನನ್ನಲ್ಲಿ ದಯವಿಟ್ಟು ಉಪದೇಶಮಾಡುವ ಕ್ರಮದಿಂದಲೂ, ಹಿಂದಿನಿಂದ ಬಂದಿರುವ ಸತ್ಪುರುಷರ ಆಚಾರಕ್ರಮದಿಂದಲೂ, ಪ್ರಣವ ಮಂತ್ರದ ಅರ್ಥವನ್ನು ನನಗೆ ವಿಸ್ತಾರವಾಗಿ ಬೋಧಿಸು.

೫೪. ಎಲೈ ಗುರುವಾದ ಮಹಾಸೇನನೇ, ಎಲ್ಲಾ ಪ್ರಾಣಿಗಳಿಗೂ, ಪಾಶವನ್ನು ನಾಶಮಾಡಿ ಸದ್ಗತಿಯನ್ನು ಉಂಟುಮಾಡುವ ಅಧಿಪತಿಯು ಗುರುವೇ ಹೊರತು ಬೇರೆಯವನು ಯಾರೂ ಇರುವುದಿಲ್ಲ. ಈ ಕಾರಣದಿಂದ ನನ್ನ ವಿಷಯದಲ್ಲಿ ನೀನು ಗುರುಭಾವವನ್ನು ವಹಿಸಿದರೆ ನಿನ್ನ ದಯೆಯಿಂದ ಆ ಪ್ರಣವಮಂತ್ರದ ಅರ್ಥವನ್ನು ನಾನು ಕೇಳುವುದಕ್ಕೆ ಅನುಕೂಲವಾಗುವುದು ಎಂದು ಪ್ರಾರ್ಥಿಸಿದನು.

**ಇತಿ ಸ ಮುನಿನಾ ಪೃಷ್ಟಃ ಸ್ಕಂದಃ ಪ್ರಣಮ್ಯ ಸದಾಶಿವಂ**
**ಪ್ರಣವವಪುಷಂ ಸಾಷ್ಟತ್ರಿಂಶತ್ಕಲಾವರಲಕ್ಷಿತಂ ।**
**ಸಹಿತಮುಮಯಾ ಶಶ್ವತ್ಪಾರ್ಶ್ವೇ ಮುನಿಪ್ರವರಾನ್ವಿತಂ**
**ಗದಿತುಮುಪಚಕ್ರಾಮ ಶ್ರೇಯಃ ಶ್ರುತಿಷ್ವಪಿ ಗೋಪಿತಂ ॥ ೫೫ ॥**

**ಇತಿ ಶ್ರೀ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ**
**ವಾಮದೇವಬ್ರಹ್ಮವರ್ಣನಂ ನಾಮೈಕಾದಶೋಽಧ್ಯಾಯಃ**

---

೫೫. ವಾಮದೇವಮುನಿಯು ಈ ಪ್ರಕಾರವಾಗಿ ಕುಮಾರಸ್ವಾಮಿಯನ್ನು ಪ್ರಶ್ನೆಮಾಡಲಾಗಿ ಕುಮಾರಸ್ವಾಮಿಯು, ಪ್ರಣವಮಂತ್ರರೂಪದಿಂದ ಇರುವವನೂ, ಮೂವತ್ತೆಂಟು ಉತ್ತಮವಾದ ಕಲೆಗಳಿಂದ ಕೂಡಿರುವವನೂ, ತನ್ನ ಪಾರ್ಶ್ವದಲ್ಲಿ ಋಷಿಗಳ ಸಮೂಹದಿಂದಲೂ, ಪಾರ್ವತೀದೇವಿಯಿಂದಲೂ, ಕೂಡಿರುವವನೂ ಆದ ಸದಾಶಿವನಿಗೆ ನಮಸ್ಕಾರಮಾಡಿ, ಶ್ರುತಿಗಳಲ್ಲಿಯೂ ಕೂಡ ರಹಸ್ಯವಾಗಿದ್ದ, ಉತ್ತಮವಾದ ಶ್ರೇಯಸ್ಸನ್ನುಂಟುಮಾಡುವ, ಪ್ರಣವಮಂತ್ರಾರ್ಥವನ್ನೂ ಅದರ ಉಪಾಸನಾಕ್ರಮವನ್ನೂ ಸಹ ವಾಮದೇವಋಷಿಗೆ ಹೇಳಲುಪಕ್ರಮಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ವಾಮದೇವಬ್ರಹ್ಮ ವರ್ಣನವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವಮಹಾಪುರಾಣೇ

## ಕೈಲಾಸಸಂಹಿತಾಯಾಂ

## ದ್ವಾದಶೋಽಧ್ಯಾಯಃ



॥ ಶ್ರೀಬ್ರಹ್ಮಣ್ಯ ಉವಾಚ ॥

**ಸಾಧು ಸಾಧು ಮಹಾಭಾಗ ವಾಮದೇವ ಮುನೀಶ್ವರ ।**
**ತ್ವಮತೀವ ಶಿವೇ ಭಕ್ತಶ್ಶಿವಜ್ಞಾನವತಾಂ ವರಃ ॥ ೧ ॥**

**ತ್ವಯಾ ತ್ವವಿದಿತಂ ಕಿಂಚಿನ್ನಾಸ್ತಿ ಲೋಕೇಷು ಕುತ್ರಚಿತ್ ।**
**ತಥಾಪಿ ತವ ವಕ್ಷ್ಯಾಮಿ ಲೋಕಾನುಗ್ರಹಕಾರಿಣಃ ॥ ೨ ॥**

---

## ಹನ್ನೆರಡನೆಯ ಅಧ್ಯಾಯ

೧-೩. ಸುಬ್ರಹ್ಮಣ್ಯೇಶ್ವರನು (ಸ್ಕಂದಸ್ವಾಮಿ) ಹೇಳಿದನು :—ಎಲೈ ಮುನಿ ಶ್ರೇಷ್ಠನಾದ ವಾಮದೇವನೇ, ನೀನು ಶಿವನಲ್ಲಿ ಬಹಳ ಭಕ್ತಿಯುಳ್ಳವನಾಗಿರುತ್ತೀಯೆ ಶಿವಜ್ಞಾನಿಗಳಲ್ಲಿ ಶ್ರೇಷ್ಠನಾಗಿರುವೆ. ನಿನಗೆ ತಿಳಿಯದಿರುವುದು ಹದಿನಾಲ್ಕು ಲೋಕಗಳಲ್ಲಿ ಯಾವುದೂ ಇಲ್ಲ. ಹೀಗಿದ್ದಾಗ್ಯೂ ನೀನು ಪ್ರಶ್ನೆಯನ್ನು ಮಾಡಿರುವುದು ಲೋಕಾನುಗ್ರಹಕ್ಕಾಗಿಯೇ ಆಗಿರುವುದರಿಂದ ಇದನ್ನು ನಿನಗೆ ನಾನು ಹೇಳುವೆನು. ಈ ಲೋಕದಲ್ಲಿ ಇರುವವರೆಲ್ಲರೂ ಪಶುಗಳೆನಿಸುವರು. ಅವರೆಲ್ಲರೂ ಉಪಯೋಗ

ಲೋಕೇऽಸ್ಮಿನ್ಸಕಲಸ್ಸರ್ವೇ ನಾನಾಶಾಸ್ತ್ರವಿಮೋಹಿತಾಃ ।
ವಂಚಿತಾಃ ಪರಮೇಶಸ್ಯ ಮಾಯಯಾತಿವಿಚಿತ್ರಯಾ ॥ ೩ ॥

ನ ಜಾನಂತಿ ಪರಂ ಸಾಕ್ಷಾತ್ಪ್ರಣವಾರ್ಥಂ ಮಹೇಶ್ವರಂ ।
ಸಗುಣಂ ನಿರ್ಗುಣಂ ಬ್ರಹ್ಮ ತ್ರಿದೇವಜನಕಂ ಪರಂ ॥ ೪ ॥

ದಕ್ಷಿಣಂ ಬಾಹುಮುದ್ಧೃತ್ಯ ಶಪಥಂ ಪ್ರಬ್ರವೀಮಿ ತೇ ।
ಸತ್ಯಂ ಸತ್ಯಂ ಪುನಸ್ಸತ್ಯಂ ಸತ್ಯಂ ಸತ್ಯಂ ಪುನಃ ಪುನಃ ॥ ೫ ॥

ಪ್ರಣವಾರ್ಥಶ್ಶಿವಃ ಸಾಕ್ಷಾತ್ಪ್ರಾಧಾನ್ಯೇನ ಪ್ರಕೀರ್ತಿತಃ ।
ಶ್ರುತಿಷು ಸ್ಮೃತಿಶಾಸ್ತ್ರೇಷು ಪುರಾಣೇಷ್ವಾಗಮೇಷು ಚ ॥ ೬ ॥

---

ವಿಲ್ಲದ ಅನೇಕ ಶಾಸ್ತ್ರಗಳನ್ನೇ ನಂಬಿ ಅವುಗಳಲ್ಲಿಯೇ ಮೋಹಿತರಾಗಿ ಮೂಢರಾಗಿರುವರು. ಮತ್ತು ಇವರೆಲ್ಲರೂ ಬಹಳ ಆಶ್ಚರ್ಯಕರವಾಗಿರುವ ಪರಮೇಶ್ವರನ ಮಾಯೆಯಿಂದ ವಂಚಿತರಾಗಿ ನಿಜಸ್ಥಿತಿಯನ್ನರಿಯದೆ ಶಿವಜ್ಞಾನರಹಿತರಾಗಿರುವರು.

೪. ಹೀಗಿರುವ ಕಾರಣ ಅವರೆಲ್ಲರೂ ಪ್ರಣವಮಂತ್ರಕ್ಕೆ ಸಾಕ್ಷಾತ್ತಾಗಿ ಅರ್ಥವಾಗಿರುವ ಎಂದರೆ ಪ್ರಣವಮಂತ್ರಪ್ರತಿಪಾದ್ಯನಾದ ಮಹೇಶ್ವರನನ್ನು ಚೆನ್ನಾಗಿ ತಿಳಿದುಕೊಂಡಿಲ್ಲ. ಆ ಮಹೇಶ್ವರನು ಸೃಷ್ಟಿಸ್ಥಿತಿಲಯಾದಿಕಾರ್ಯಗಳಲ್ಲಿ ನಿಯೋಜಿತರಾದ ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳಿಗೂ ಕಾರಣನಾಗಿ, ಸಗುಣ ಮತ್ತು ನಿರ್ಗುಣರೂಪದಿಂದಿರುವನು.

೫. ಈ ವಿಷಯದಲ್ಲಿ ನಾನು ನನ್ನ ಬಲತೋಳನ್ನು ಮೇಲಕ್ಕೆ ಎತ್ತಿ ದೃಢವಾಗಿ ಹೇಳುವೆನು. ಇದು ಸತ್ಯವು. ಇದು ನಿಶ್ಚಯವು. ಎಂದು ಪ್ರತಿಜ್ಞೆಯನ್ನೂ ಮಾಡಿ ಅನೇಕಸಾರಿ ಹೇಳುವೆನು.

೬. ವೇದಗಳಲ್ಲಿಯೂ, ಸ್ಮೃತಿಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ, ಪುರಾಣಗಳಲ್ಲಿಯೂ, ಆಗಮಗಳಲ್ಲಿಯೂ, ಕೂಡ ಪ್ರಣವಮಂತ್ರಕ್ಕೆ ಶಿವನೇ ಸಾಕ್ಷಾತ್ತಾಗಿ, ಮುಖ್ಯವಾಗಿ ಅರ್ಥವಾಗಿರುವನು. ಎಂದರೆ ಶಿವನನ್ನೇ ಪ್ರಣವಮಂತ್ರಕ್ಕೆ ಮುಖ್ಯದೇವತೆಯನ್ನಾಗಿ ವೇದಶಾಸ್ತ್ರಪುರಾಣಾಗಮಗಳು ಸಾರಿಹೇಳುತ್ತಿರುವವು.

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಯಸ್ಯ ವೈ ವಿದ್ವಾನ್ನ ಬಿಭೇತಿ ಕುತಶ್ಚನ ॥ ೭ ॥

ಯಸ್ಮಾಜ್ಜಗದಿದಂ ಸರ್ವಂ ವಿಧಿವಿಷ್ಣ್ವಿಂದ್ರಪೂರ್ವಕಂ ।
ಸಹಭೂತ್ರೇಂದ್ರಿಯಗ್ರಾಮೈಃ ಪ್ರಥಮಂ ಸಂಪ್ರಸೂಯತೇ ॥ ೮ ॥

ನ ಸಂಪ್ರಸೂಯತೇ ಯೋ ವೈ ಕುತಶ್ಚನ ಕದಾಚನ ।
ಯಸ್ಮಿನ್ನ ಭಾಸತೇ ವಿದ್ಯುನ್ನ ಚ ಸೂರ್ಯೋ ನ ಚಂದ್ರಮಾಃ ॥ ೯ ॥

ಯಸ್ಯ ಭಾಸಾ ವಿಭಾತೀದಂ ಜಗತ್ಸರ್ವಂ ಸಮಂತತಃ ।
ಸರ್ವೈಶ್ವರ್ಯೇಣ ಸಂಪನ್ನೋ ನಾಮ್ನಾ ಸರ್ವೇಶ್ವರಸ್ಸ್ವಯಂ ॥ ೧೦ ॥

---

೭. ಈ ಪರಮಾತ್ಮನಾದ ಶಿವನ ಸ್ವರೂಪವನ್ನು ಮಾತುಗಳಿಂದ ಎಂದರೆ ವಾಕ್ಯಗಳಿಂದ ಹೀಗೆಯೇ ಸರಿ ಎಂದು ವರ್ಣಿಸಲು ಸಾಧ್ಯವಿಲ್ಲ. ಅದೇಕೆ ? ಅವನ ಸ್ವರೂಪವನ್ನು ಮನಸ್ಸಿನಲ್ಲಿ ಊಹಿಸುವುದೂ ಸಾಧ್ಯವಿಲ್ಲ. ಮನಸ್ಸಿಗೂ ಆ ಶಕ್ತಿ ಸಾಮರ್ಥ್ಯಗಳಿಲ್ಲ. "ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನ" ಎಂದು ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವುದು. ಆದರೆ ಇಷ್ಟು ಮಾತ್ರ ಹೇಳಬಹುದು. ಆ ಶಿವನ ಸ್ವರೂಪವು ಕೇವಲ ಆನಂದಮಯವಾಗಿರುವುದು. ಅದನ್ನು ಸ್ವಲ್ಪಮಟ್ಟಿಗಾದರೂ ತಿಳಿದ ಜ್ಞಾನಿಗೆ ಜನ್ಮಮೃತ್ಯುಜರಾಮರಣಾದಿಸಂಸಾರ ಭಯವಿಲ್ಲ. ಏಕೆಂದರೆ ಅವಾಙ್ಮನಸಗೋಚರನಾದ ಪರಮೇಶ್ವರನನ್ನು ಸಾಕ್ಷಾತ್ಕಾರಮಾಡಿಕೊಂಡ ಜ್ಞಾನಿಯು ಪರಮೇಶ್ವರನೇ ಆಗುವುದರಿಂದ ಅಂತವನಿಗೆ ಯಾವ ವಿಚಾರದಲ್ಲಿಯೇ ಆಗಲಿ ಭಯವೆಂದರೇನು ? ಈ ಪ್ರಕಾರವಾದ ಆನಂದವನ್ನು ಅನುಭವಿಸುವ ಜ್ಞಾನಿಯು ಯಾರಿಂದಲೂ, ಯಾತರಿಂದಲೂ, ಭಯವನ್ನು ಹೊಂದದೆ ಇರುವನು.

೮. ಆ ಶಿವನಿಂದಲೇ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ಜಗತ್ತೆಲ್ಲವೂ, ಪಂಚಮಹಾಭೂತಗಳು ಮತ್ತು ಇಂದ್ರಿಯ ಸಮೂಹಗಳು ಇವುಗಳೊಡನೆ ಮೊಟ್ಟ ಮೊದಲು ನಿರ್ಮಿಸಲ್ಪಟ್ಟಿರುವುವು.

೯–೧೧. ಈ ಶಿವನು ಯಾವನ ಮೂಲಕವಾಗಿಯೂ, ಯಾವಾಗಲೂ ಹುಟ್ಟುವುದಿಲ್ಲ. ಎಂದರೆ ಇವನಿಗೆ ಕಾರಣಕರ್ತರು ಯಾರೂ ಇಲ್ಲ. ಜನ್ಮಾದಿ ವಿಕಾರವಿಲ್ಲ.

ಯೋ ವೈ ಮುಮುಕ್ಷುಭಿರ್ಧ್ಯೇಯಃ ಶಂಭುರಾಕಾಶಮಧ್ಯಗಃ ।
ಸರ್ವವ್ಯಾಪೀ ಪ್ರಕಾಶಾತ್ಮಾ ಭಾಸರೂಪೋ ಹಿ ಚಿನ್ಮಯಃ ॥ ೧೧ ॥

ಯಸ್ಯ ಪುಂಸಾಂ ಪರಾ ಶಕ್ತಿರ್ಭಾವಗಮ್ಯಾ ಮನೋಹರಾ ।
ನಿರ್ಗುಣಾ ಸ್ವಗುಣೈರೇವ ನಿಗೂಢಾ ನಿಷ್ಕಲಾ ಶಿವಾ ॥ ೧೨ ॥

ತದೀಯಂ ತ್ರಿವಿಧಂ ರೂಪಂ ಸ್ಥೂಲಂ ಸೂಕ್ಷ್ಮಂ ಪರಂ ತತಃ ।
ಧ್ಯೇಯಂ ಮುಮುಕ್ಷುಭಿರ್ನಿತ್ಯಂ ಕ್ರಮತೋ ಯೋಗಿಭಿರ್ಮುನೇ ॥ ೧೪ ॥

---

ಅದ್ಯಂತರಹಿತನು. ಈ ಶಿವನ ತೇಜಸ್ಸಿನಮುಂದೆ ಸೂರ್ಯನೂ, ಚಂದ್ರನೂ, ಮಿಂಚುಗಳೂ, ಎಲ್ಲವೂ ಪ್ರಕಾಶಹೀನಗಳಾಗುವವು. ಈ ಜಗತ್ತೆಲ್ಲವನ್ನೂ ಎಲ್ಲಾ ಕಡೆಯಲ್ಲಿಯೂ, ಈ ಶಿವನ ತೇಜಸ್ಸೇ ತಾನೇ ತಾನಾಗಿ ಬೆಳಗುತ್ತಿರುವುದು. ಈ ಶಿವನು ಎಲ್ಲಾ ವಿಧವಾದ ಐಶ್ವರ್ಯದಿಂದ ಕೂಡಿದವನಾಗಿರುವುದರಿಂದ ಎಂದರೆ ಷಡ್ಗುಣೈಶ್ವರ್ಯಸಂಪನ್ನನಾಗಿರುವದರಿಂದ ತಾನೇ ಎಲ್ಲರಿಗೂ ಅಧಿಪತಿಯೆನಿಸಿಕೊಂಡಿರುವನು. ಇವನು ಚಿದಾಕಾಶದ ಮಧ್ಯದಲ್ಲಿ ಪ್ರಕಾಶಿಸುತ್ತಿರುವವನಾಗಿ ಶಂಭುವೆನ್ನಿಸಿಕೊಂಡು ಮುಕ್ತಿಯನ್ನು ಹೊಂದಲಿಚ್ಛಿಸುವವರಿಂದ ಧ್ಯಾನಮಾಡಲ್ಪಡುತ್ತಿರುವನು. ಇವನು ಎಲ್ಲಾ ಪದಾರ್ಥಗಳಲ್ಲಿಯೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡು ಕೇವಲ ಪ್ರಕಾಶರೂಪದಿಂದ ಇರುವುದರಿಂದ ಕೇವಲ ಜ್ಞಾನ ಸ್ವರೂಪನಾಗಿರುವನು.

೧೨. ಈ ಶಿವನ ಉತ್ತಮವಾದ ಶಕ್ತಿಯು ಮನೋಹರವಾಗಿ, (ನಿರ್ಗುಣಾ) ಎಂದರೆ ಸತ್ವರಜಸ್ತಮೋ ಗುಣಗಳ ಸಂಬಂಧವಿಲ್ಲದ್ದೆನಿಸಿಕೊಂಡು ತನ್ನ ಗುಣಗಳಿಂದಲೇ ಗೂಢವಾಗಿರುತ್ತಾ (ನಿಷ್ಕಲ) ಕಲಾಸಂಬಂಧವಿಲ್ಲದ್ದಾಗಿ, ಮಂಗಳಕರವಾಗಿ ಇರುವುದು. ಇದನ್ನು ಯೋಗಿಗಳು ಧ್ಯಾನದಿಂದ ಮಾತ್ರ ತಿಳಿಯಲು ಸಾಧ್ಯವು.

೧೩-೧೪. ಈ ಶಿವನಿಗೆ ಸ್ಥೂಲ, ಸೂಕ್ಷ್ಮ ಮತ್ತು ಇವೆರಡನ್ನೂ ಮೀರಿದ ಪರ ಎಂದೆನಿಸಿಕೊಂಡಿರುವ ಮೂರು ವಿಧವಾದ ರೂಪಗಳಿರುವವು. ಮುಕ್ತಿಯನ್ನು ಹೊಂದಲಪೇಕ್ಷಿಸುವ ಯೋಗಿಗಳು ಈ ಪರರೂಪನ್ನು ಧ್ಯಾನಮಾಡಲು ತಕ್ಕದ್ದಾಗಿರುವುದು. ಈ ಶಿವನು ನಿಷ್ಕಲನು. ಎಲ್ಲಾ ದೇವತೆಗಳಿಗೂ ಮೊದಲನೆಯವನು.

ನಿಷ್ಕಲಸ್ಸರ್ವದೇವಾನಾಮಾದಿದೇವಸ್ಸನಾತನಃ ।
ಜ್ಞಾನಕ್ರಿಯಾಸ್ವಭಾವೋ ಯಃ ಪರಮಾತ್ಮೇತಿ ಗೀಯತೇ ॥ ೧೪ ॥

ತಸ್ಯ ದೇವಾಧಿದೇವಸ್ಯ ಮೂರ್ತಿಸ್ಸಾಕ್ಷಾತ್ಸದಾಶಿವಃ ।
ಪಂಚಮಂತ್ರತನುರ್ದೇವಃ ಕಲಾಪಂಚಕವಿಗ್ರಹಃ ॥ ೧೫ ॥

ಶುದ್ಧಸ್ಫಟಿಕಸಂಕಾಶಃ ಪ್ರಸನ್ನಃ ಶೀತಲದ್ಯುತಿಃ ।
ಪಂಚವಕ್ತ್ರೋ ದಶಭುಜಸ್ತ್ರಿಪಂಚನಯನಃ ಪ್ರಭುಃ ॥ ೧೬ ॥

ಈಶಾನಮುಕುಟೋಪೇತಃ ಪುರುಷಾಸ್ಯಃ ಪುರಾತನಃ ।
ಅಘೋರಹೃದಯೋ ವಾಮದೇವಗುಹ್ಯಪ್ರದೇಶವಾನ್ ॥ ೧೭ ॥

ಸದ್ಯಪಾದಶ್ಚ ತನ್ಮೂರ್ತಿಃ ಸಾಕ್ಷಾತ್ಸಕಲನಿಷ್ಕಲಃ ।
ಸರ್ವಜ್ಞತ್ವಾದಿಷಟ್ಶಕ್ತಿಷಡಂಗೀಕೃತವಿಗ್ರಹಃ ॥ ೧೮ ॥

---

ಯಾವಾಗಲೂ ನಾಶವಿಲ್ಲದವನಾಗಿರುವನು. ಇವನು ಜ್ಞಾನಸ್ವಭಾವ ಮತ್ತು ಕ್ರಿಯಾಸ್ವಭಾವವುಳ್ಳವನಾಗಿರುವುದರಿಂದ ಇವನನ್ನು ಪರಮಾತ್ಮನೆಂದು ಹೇಳುವರು.

೧೫-೧೯. ದೇವಾದಿದೇವನಾದ ಈ ಪರಮೇಶ್ವರನ ರೂಪಾಂತರವೇ ಸದಾಶಿವನೆಂದು ಹೆಸರನ್ನು ಹೊಂದಿರುವುದು. ಈ ಸದಾಶಿವನು ಐದು ವಿಧವಾದ ಮಂತ್ರಗಳ ಶರೀರವುಳ್ಳವನು. ಪಂಚಕಲಾತ್ಮಕವಾದ ಶರೀರದಿಂದ ಕೂಡಿ ಶುದ್ಧ ಸ್ಫಟಿಕದ ಕಾಂತಿಯಿಂದ ಬೆಳಗುತ್ತಿರುವನು. ಚಂದ್ರನಂತೆ ಶೀತಲವಾದ ಕಾಂತಿಯಿಂದ ನಯನಮನೋಹರನಾಗಿ ಒಪ್ಪುತ್ತಿರುವನು. ಈ ಶಿವನಿಗೆ ಐದು ಶಿರಸ್ಸುಗಳು, ಹತ್ತು ಭುಜಗಳು, ಹದಿನೈದು ಕಣ್ಣುಗಳು ಇರುವವು. ಈ ಪ್ರಭುವಾದ ಸದಾಶಿವನಿಗೆ ಈಶಾನನೆಂಬುವ ಆಕಾರವು (ಕಿರೀಟದಂತೆ ಮುಖ್ಯವಾಗಿಯೂ) ಕಿರೀಟವಾಗಿಯೂ, ತತ್ಪುರುಷನು ಮುಖವಾಗಿಯೂ, ಅಘೋರವೆಂಬ ಆಕಾರವು ಹೃದಯವಾಗಿಯೂ, ವಾಮದೇವನೆಂಬ ರೂಪವು ಗುಹ್ಯಪ್ರದೇಶವಾಗಿಯೂ, ಸದ್ಯೋಜಾತನೆಂಬ ರೂಪವು ಪಾದಗಳಾಗಿಯೂ ಇರುವ ಕಾರಣ ಈ ಸದಾಶಿವನೆಂಬ ಆಕಾರವು ಶಿವನ ಸಕಲ ಮತ್ತು ನಿಷ್ಕಲರೂಪದಿಂದ ಬೆಳಗುತ್ತಿರುವುದು. ಸರ್ವಜ್ಞತ್ವವೇ ಮೊದಲಾದ ಆರು ವಿಧವಾದ

ಶಬ್ದಾದಿಶಕ್ತಿಸ್ಫುರಿತಹೃತ್ಪಂಕಜವಿರಾಜಿತಃ ।
ಸ್ವಶಕ್ತ್ಯಾ ವಾಮಭಾಗೇ ತು ಮನೋನ್ಮನ್ಯಾ ವಿಭೂಷಿತಃ ॥ ೧೯ ॥

ಮಂತ್ರಾದಿಷಡ್ವಿಧಾರ್ಥಾನಾಮರ್ಥೋಽಪನ್ಯಾಸಮಾರ್ಗತಃ ।
ಸಮಷ್ಟಿವ್ಯಷ್ಟಿಭಾವಾರ್ಥಂ ವಕ್ಷ್ಯಾಮಿ ಪ್ರಣವಾತ್ಮಕಂ ॥ ೨೦ ॥

ಉಪದೇಶಕ್ರಮೋ ಹ್ಯಾದೌ ವಕ್ತವ್ಯಶ್ಶ್ರೂಯತಾಮಯಂ ।
ಚಾತುರ್ವರ್ಣ್ಯಂ ಹಿ ಲೋಕೇಽಸ್ಮಿನ್ಪ್ರಸಿದ್ಧಂ ಮಾನುಷೇ ಮುನೇ ॥ ೨೧ ॥

ತ್ರೈವರ್ಣಿಕಾನಾಮೇವಾತ್ರ ಶ್ರುತ್ಯಾಚಾರಸಮನ್ವಯಃ ।
ಶುಶ್ರೂಷಾಮಾತ್ರಸಾರಾ ಹಿ ಶೂದ್ರಾಃ ಶ್ರುತಿಬಹಿಷ್ಕೃತಾಃ ॥ ೨೨ ॥

---

ಶಕ್ತಿಯ ಅಂಗಗಳಿಂದ ಕೂಡಿರುವುದು. ಶಬ್ದವೇ ಮೊದಲಾದ ಶಕ್ತಿಗಳಿಂದ ಸ್ಫುಟವಾದ ಹೃದಯಕಮಲದಿಂದ ಪ್ರಕಾಶಿಸುತ್ತಿರುವುದು. ಆ ಸದಾಶಿವನ ಎಡಭಾಗದಲ್ಲಿ ಮನೋನ್ಮನೀ ಎಂಬ ಶಕ್ತಿಯು ಪ್ರಕಾಶಿಸುತ್ತಿರುವಳು.

೨೦. ಈಗ ನಾನು, ಮಂತ್ರವೇ ಮೊದಲಾದ ಆರು ವಿಧವಾದ ಅರ್ಥಗಳನ್ನು ಉಪನ್ಯಾಸಮಾಡಿ ಸಮಷ್ಟಿಯಾಗಿಯೂ (ಒಟ್ಟಾಗಿಯೂ) ವ್ಯಷ್ಟಿಯಾಗಿಯೂ (ಬೇರೆ ಬೇರೆಯಾಗಿಯೂ) ಪ್ರಣವಮಂತ್ರದ ಭಾವಾರ್ಥವನ್ನು ವಿವರಿಸುವೆನು. ಎಲ್ಲಕ್ಕೂ ಮೊದಲು ಪ್ರಣವಮಂತ್ರವನ್ನು ಉಪದೇಶ ತೆಗದುಕೊಳ್ಳುವ ಕ್ರಮವನ್ನು ಹೇಳುವೆನು ಕೇಳು.

೨೧-೨೨. ಈ ಮನುಷ್ಯಲೋಕದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಎಂಬ ನಾಲ್ಕು ವರ್ಣಗಳು ಪ್ರಸಿದ್ಧವಾಗಿರುವುವು. ಇವರುಗಳಲ್ಲಿ ಮೊದಲಿನ ಮೂರು ವರ್ಣದವರು ಮಾತ್ರ ವೇದೋಕ್ತ ಕರ್ಮಗಳನ್ನು ನಡೆಸಲು ಅಧಿಕಾರವನ್ನು ಹೊಂದಿರುವರು. ವೇದಮಾರ್ಗದಲ್ಲಿ ಅಧಿಕಾರವಿಲ್ಲದ ಶೂದ್ರರು ಯಾವಾಗಲೂ ಇತರ ಮೂರು ವರ್ಣದವರ ಶುಶ್ರೂಷೆಯನ್ನು ಮಾಡಲು ಮಾತ್ರ ಅಧಿಕಾರವನ್ನು ಹೊಂದಿರುವರು. ಈ ಶೂದ್ರರು ಹೊರತಾಗಿ ಉಳಿದ ಮೂರು ವರ್ಣದವರು ತಮ್ಮ

ತ್ರೈವರ್ಣಿಕಾನಾಂ ಸರ್ವೇಷಾಂ ಸ್ವಸ್ವಾಶ್ರಮರತಾತ್ಮನಾಂ ।
ಶ್ರುತಿಸ್ಮೃತ್ಯುದಿತೋ ಧರ್ಮೋಽನುಷ್ಠೇಯೋ ನಾಪರಃ ಕ್ವಚಿತ್ ॥ ೨೩ ॥

ಶ್ರುತಿಸ್ಮೃತ್ಯುದಿತಂ ಕರ್ಮ ಕುರ್ವನ್ಸಿದ್ಧಿಮವಾಪ್ಸ್ಯಸಿ ।
ಇತ್ಯುಕ್ತಂ ಪರಮೇಶೇನ ವೇದಮಾರ್ಗಪ್ರದರ್ಶಿನಾ ॥ ೨೪ ॥

ವರ್ಣಾಶ್ರಮಾಚಾರಪುಣ್ಯೈರಭ್ಯರ್ಚ್ಯ ಪರಮೇಶ್ವರಂ ।
ತತ್ಸಾಯುಜ್ಯಂ ಗತಾಸ್ಸರ್ವೇ ಬಹವೋ ಮುನಿಸತ್ತಮಾಃ ॥ ೨೫ ॥

ಬ್ರಹ್ಮಚರ್ಯೇಣ ಮುನಯೋ ದೇವಾ ಯಜ್ಞಕ್ರಿಯಾಧ್ವನಾ ।
ಪಿತರಃ ಪ್ರಜಯಾ ತೃಪ್ತಾ ಇತಿ ಹಿ ಶ್ರುತಿರಬ್ರವೀತ್ ॥ ೨೬ ॥

ಏವಂ ಋಣತ್ರಯಾನ್ಮುಕ್ತೋ ವಾನಪ್ರಸ್ಥಾಶ್ರಮಂ ಗತಃ ।
ಶೀತೋಷ್ಣಸುಖದುಃಖಾದಿಸಹಿಷ್ಣುರ್ವಿಜಿತೇಂದ್ರಿಯಃ ॥ ೨೭ ॥

---

ತಮ್ಮ ಆಶ್ರಮಕ್ಕೆ ಉಚಿತವಾದ ಧರ್ಮಗಳನ್ನು ಮಾತ್ರ ಆಚರಿಸಬೇಕು. ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಧರ್ಮವನ್ನು ಬಿಟ್ಟು ಅನ್ಯಧರ್ಮವನ್ನು ಎಂದಿಗೂ ಆಚರಿಸ ಬಾರದು.

೨೪-೨೫. ಶ್ರುತಿಸ್ಮೃತಿಯಲ್ಲಿ ಹೇಳಿರುವ ಧರ್ಮವನ್ನು ಕ್ರಮವಾಗಿ ಆಚರಿಸುವವನು, ಸರಿಯಾದ ರೀತಿಯಿಂದ ಆಚರಿಸುತ್ತಾ ಬಂದರೆ ಕ್ರಮವಾಗಿ ಸಿದ್ಧಿಯನ್ನು ಹೊಂದುವನು ಎಂದು ವೇದಮಾರ್ಗಪ್ರದರ್ಶಕನಾದ ಪರಮೇಶ್ವರನೇ ಹೇಳಿರುವನು. ಅನೇಕ ಋಷಿಗಳು ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಅನುಸರಿಸಿ ನಡೆಯುತ್ತಾ, ಪರಮೇಶ್ವರನನ್ನು ಪೂಜೆಮಾಡಿ ಅದರಿಂದ ಲಬ್ಧವಾದ ಪುಣ್ಯದಿಂದ ಶಿವಸಾಯುಜ್ಯರೂಪವಾದ ಮುಕ್ತಿಯನ್ನು ಹೊಂದಿರುವರು.

೨೬-೨೮. ಯಜುರ್ವೇದದ ತೈತ್ತಿರೀಯ ಸಂಹಿತೆಯ ಆರನೆಯ ಕಾಂಡದ ಮೂರನೆಯ ಅಧ್ಯಾಯದಲ್ಲಿ ಈ ರೀತಿ ಹೇಳಿರುವುದು. "ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣ ವಾ ಜಾಯತೇ ಬಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ" ಎಂದರೆ ದ್ವಿಜನಾದವನು ಹುಟ್ಟುವಾಗಲೇ ಮೂರು ಋಣಗಳು

**ತಪಸ್ವೀ ವಿಜಿತಾಹಾರೋ ಯಮಾದ್ಯಂ ಯೋಗಮಭ್ಯಸೇತ್ ।**
**ಯಥಾ ದೃಢತರಾ ಬುದ್ಧಿರವಿಚಾಲ್ಯಾ ಭವೇತ್ತಥಾ ॥ ೨೮ ॥**

**ಏವಂ ಕ್ರಮೇಣ ಶುದ್ಧಾತ್ಮಾ ಸರ್ವಕರ್ಮಾಣಿ ವಿನ್ಯಸೇತ್ ।**
**ಸಂನ್ಯಸ್ಯ ಸರ್ವಕರ್ಮಾಣಿ ಜ್ಞಾನಪೂಜಾಪರೋ ಭವೇತ್ ॥ ೨೯ ॥**

**ಸಾ ಹಿ ಸಾಕ್ಷಾಚ್ಛಿವೈಕ್ಯೇನ ಜೀವನ್ಮುಕ್ತಿಫಲಪ್ರದಾ ।**
**ಸರ್ವೋತ್ತಮಾ ಹಿ ವಿಜ್ಞೇಯಾ ನಿರ್ವಿಕಾರಾ ಯತಾತ್ಮನಾಂ ॥ ೩೦ ॥**

---

ಅವನನ್ನು ಅನುಸರಿಸಿ ಬರುವವು ಅವುಗಳನ್ನು ಪರಿಹಾರಮಾಡಬೇಕಾದುದು ಅವನ ಕರ್ತವ್ಯವು. ಆ ಋಣಗಳಾವುವೆಂದರೆ—ಋಷಿಋಣ, ದೇವಋಣ, ಪಿತೃಋಣ. ಈ ಋಣಗಳನ್ನು ಪರಿಹರಿಸಿಕೊಳ್ಳಬೇಕಾದರೆ ಬ್ರಹ್ಮಚರ್ಯವ್ರತನಿಷ್ಠನಾಗಿ ಗುರುಕುಲವಾಸದಿಂದ ವೇದಾಧ್ಯಯನವನ್ನು ಮಾಡಬೇಕು. ಅದರಿಂದ ಋಷಿಋಣವು ಪರಿಹಾರವಾಗುವುದು. ಗೃಹಸ್ಥನಾಗಿ ಯಜ್ಞಯಾಗಾದಿಗಳನ್ನು ಮಾಡುವುದರಿಂದ ದೇವಋಣವು ಪರಿಹಾರವಾಗುವುದು. ವಿವಾಹಿತ ಧರ್ಮಪತ್ನಿಯಲ್ಲಿ ಪ್ರಜೋತ್ಪಾದನೆ ಮಾಡುವುದರಿಂದ ಪಿತೃಋಣವು ಪರಿಹಾರವಾಗುವುದು. ಈ ಋಣತ್ರಯಗಳನ್ನು ಕಳೆದುಕೊಂಡು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು. ವನದಲ್ಲಿ ವಾಸಮಾಡುವಾಗ ಶೀತೋಷ್ಣಸುಖದುಃಖಾದಿದ್ವಂದ್ವಗಳನ್ನು ಸಹಿಸುತ್ತಾ ಜಿತೇಂದ್ರಿಯನಾಗಿಯೂ, ನಿಯತಾಹಾರನಾಗಿಯೂ ಇದ್ದು ಯಮಾದ್ಯಷ್ಟಾಂಗಸಹಿತವಾದ ಯೋಗವನ್ನು ಅಭ್ಯಾಸಮಾಡಬೇಕು.

೨೯. ಈ ಪ್ರಕಾರದಿಂದ ಯೋಗಾಭ್ಯಾಸ ಮಾಡಬೇಕು. ಇನ್ನೊಬ್ಬರಿಂದ ದಾರಿಯನ್ನು ತಪ್ಪಿಸಲು ಆಗದಿರುವ ಸ್ಥಿತಿಗೆ ಬುದ್ಧಿಯು ಬರುವವರಿಗೂ ಮತ್ತು ದೃಢವಾಗಿ ಒಂದೇಕಡೆ ನಿಲ್ಲುವವರೆಗೂ, ಎಂದರೆ ಏಕಾಗ್ರತೆ ಉಂಟಾಗುವವರೆಗೂ ಯೋಗಾಭ್ಯಾಸವನ್ನು ಮಾಡಿದರೆ ಕ್ರಮವಾಗಿ ಶುದ್ಧವಾದ ಮನಸ್ಸುಳ್ಳವನಾಗುವನು. ಇಂತಹ ಯೋಗಿಗೆ ಕರ್ಮಗಳ ಅವಶ್ಯಕತೆ ಇಲ್ಲ. ಸಂಧ್ಯಾದಿ ಕರ್ಮಗಳನ್ನು ಬಿಟ್ಟು ಬಿಡಬಹುದು. ಸಮಸ್ತ ಕರ್ಮಗಳನ್ನು ಬಿಟ್ಟು ಕೇವಲ ಪರಮಾತ್ಮ ಧ್ಯಾನವಲ್ಲಿಯೇ ಆಸಕ್ತನಾಗಿ ಮನಸ್ಸಿನಿಂದಲೇ ಶಿವನಿಗೆ ಪೂಜಾದಿಗಳನ್ನು ಅರ್ಪಿಸಬೇಕು.

೩೦. ಈ ಪ್ರಕಾರವಾದ ಜ್ಞಾನಪೂಜೆಯು ಸ್ಥಿರವಾದ ಮನಸ್ಸುಳ್ಳವರಿಗೆ ಸಾಕ್ಷಾತ್ತಾಗಿ ಶಿವನ ಸಾಯುಜ್ಯವನ್ನು ಉಂಟುಮಾಡಿ, ಜೀವನ್ಮುಕ್ತಿಯ ಸ್ಥಿತಿಯು

ತತ್ಪ್ರಕಾರಮಹಂ ವಕ್ಷ್ಯೇ ಲೋಕಾನುಗ್ರಹಕಾಮ್ಯಯಾ ।
ತವ ಸ್ನೇಹಾನ್ಮಹಾಪ್ರಾಜ್ಞ ಸಾವಧಾನತಯಾ ಶೃಣು ॥ ೩೧ ॥

ಸರ್ವಶಾಸ್ತ್ರಾರ್ಥತತ್ತ್ವಜ್ಞಂ ವೇದಾಂತಜ್ಞಾನಪಾರಗಂ ।
ಆಚಾರ್ಯಮುಪಗಚ್ಛೇತ್ಸ ಯತಿಂ ಮತಿಮತಾಂ ವರಂ ॥ ೩೨ ॥

ತತ್ಸಮೀಪಮುಪವ್ರಜ್ಯ ಯಥಾವಿಧಿ ವಿಚಕ್ಷಣಃ ।
ದೀರ್ಘದಂಡಪ್ರಣಾಮಾದ್ಯೈಸ್ತೋಷಯೇದ್ಯತ್ನತಸ್ಸುಧೀಃ ॥ ೩೩ ॥

ಯೋ ಗುರುಸ್ಸ ಶಿವಃ ಪ್ರೋಕ್ತೋ ಯಶ್ಶಿವಸ್ಸ ಗುರುಸ್ಸ್ಮೃತಃ ।
ಇತಿ ನಿಶ್ಚಿತ್ಯ ಮನಸಾ ಸ್ವವಿಚಾರಂ ನಿವೇದಯೇತ್ ॥ ೩೪ ॥

---

ಸ್ನಂಟುಮಾಡುವುದಲ್ಲದೇ ಮನಸ್ಸಿಗೆ ಯಾವ ವಿಧವಾದ ವಿಕಾರವೂ ಉಂಟಾಗದಿರುವಂತೆ ಮಾಡುವುದು. ಆದುದರಿಂದ ಈ ಜ್ಞಾನಪೂಜೆಯು ಎಲ್ಲಕ್ಕಿಂತಲೂ ಉತ್ತಮವಾಗಿರುವುದು.

೩೧. ಲೋಕಹಿತಾರ್ಥವಾಗಿ ಶಿವನ ಜ್ಞಾನಪೂಜೆಯನ್ನು ಮಾಡುವ ಕ್ರಮವನ್ನು ಹೇಳುವೆನು. ಎಲೈ ಪ್ರಾಜ್ಞನಾದ ವಾಮದೇವಮುನಿಯೇ, ನಾನು ಅದನ್ನು ನಿನ್ನಲ್ಲಿರುವ ಅತಿಶಯವಾದ ಪ್ರೀತಿಯಿಂದ ಹೇಳುವೆನು, ಸಾವಧಾನ ಮನಸ್ಸಿನಿಂದ ಕೇಳು.

೩೨–೩೩. ಶಿವನನ್ನು ಸರಿಯಾದ ಕ್ರಮದಿಂದ ಧ್ಯಾನಮಾಡಲು ಇಚ್ಛೆಯುಳ್ಳವನು, ಸರ್ವಶಾಸ್ತ್ರಾರ್ಥಗಳ ತತ್ತ್ವವನ್ನು ತಿಳಿದವನೂ, ವೇದಾಂತಜ್ಞಾನಪಾರಗನೂ ಆದ ಶ್ರೇಷ್ಠ ಯತಿಶ್ರೇಷ್ಠನನ್ನು ತನ್ನ ಗುರುವನ್ನಾಗಿ ಭಾವಿಸಿ ಅವನ ಸಮೀಪಕ್ಕೆ ಹೋಗಿ, ಅವನಿಗೆ ದಂಡಪ್ರಣಾಮವೇ ಮೊದಲಾದ ಶುಶ್ರೂಷೆಯನ್ನು ಶಾಸ್ತ್ರದಲ್ಲಿ ಹೇಳಿರುವ ಕ್ರಮದಂತೆ ಮಾಡಿ ಸರ್ವಪ್ರಯತ್ನದಿಂದಲೂ ಅವನನ್ನು ಸಂತೋಷಪಡಿಸಬೇಕು.

೩೪. ಗುರುವೇ ಸಾಕ್ಷಾಚ್ಛಿವನು, ಶಿವನೇ ಗುರುವು. ಅವರಿಗೆ ಭೇದವಿಲ್ಲ, ಎಂದು ಶಾಸ್ತ್ರವು ಹೇಳುವುದು. ಆದುದರಿಂದ ಶಿವನೇ ಗುರುವಾಗಿರುವನೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡು ಶಿವನಲ್ಲಿಡಬೇಕಾದ ಭಕ್ತಿಯನ್ನು ಗುರುವಿನಲ್ಲಿರಿಸಿ ತನ್ನ ವಿಚಾರವೆಲ್ಲವನ್ನೂ, ಆ ಗುರುವಿನ ಹತ್ತಿರ ಚೆನ್ನಾಗಿ ವಿವರಿಸಿ

ಲಬ್ಧ್ವಾನುಜ್ಞಾಸ್ತು ಗುರುಣಾ ದ್ವಾದಶಾಹಂ ಪಯೋವ್ರತೀ ।
ಶುಕ್ಲಪಕ್ಷೇ ಚತುರ್ಥ್ಯಾಂ ವಾ ದಶಮ್ಯಾಂ ವಾ ವಿಧಾನತಃ ॥ ೩೫ ॥

ಪ್ರಾತಃ ಸ್ನಾತ್ವಾ ವಿಶುದ್ಧಾತ್ಮಾ ಕೃತನಿತ್ಯಕ್ರಿಯಸ್ಸುಧೀಃ ।
ಗುರುಮಾಹೂಯ ವಿಧಿನಾ ನಾಂದೀಶ್ರಾದ್ಧಂ ಸಮಾರಭೇತ್ ॥ ೩೬ ॥

ವಿಶ್ವೇದೇವಾಃ ಸತ್ಯವಸುಸಂಜ್ಞಾವಂತಃ ಪ್ರಕೀರ್ತಿತಾಃ ।
ದೇವಶ್ರಾದ್ಧೇ ಬ್ರಹ್ಮವಿಷ್ಣುಮಹೇಶಾಃ ಕಥಿತಾಸ್ತ್ರಯಃ ॥ ೩೭ ॥

ಋಷಿಶ್ರಾದ್ಧೇ ತು ಸಂಪ್ರೋಕ್ತಾ ದೇವಕ್ಷೇತ್ರಮನುಷ್ಯಜಾಃ ।
ದೇವಶ್ರಾದ್ಧೇ ತು ವಸುರುದ್ರಾದಿತ್ಯಾಸ್ಸಂಪ್ರಕೀರ್ತಿತಾಃ ॥ ೩೮ ॥

---

ಹೇಳಬೇಕು. ಗುರುವಿನಿಂದ ಅಪ್ಪಣೆಯನ್ನು ಪಡೆದು ನಂತರ ಹನ್ನೆರಡು ದಿನ ಆಹಾರಕ್ಕಾಗಿ ಹಾಲು ಮಾತ್ರ ಸೇವಿಸಬೇಕು. ಈ ರೀತಿ ಹಾಲನ್ನು ಮಾತ್ರ ಆಹಾರಾರ್ಥವಾಗಿ ಸೇವಿಸುವುದಕ್ಕೆ ಪಯೋವ್ರತವೆಂದು ವೇದದಲ್ಲಿ ಹೇಳಿರುವುದು.

೩೫–೩೬. ಶುಕ್ಲಪಕ್ಷದ ಚತುರ್ಥಿಯಲ್ಲಾಗಲೀ, ದಶಮಿಯ ದಿನವಲ್ಲಾಗಲೀ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ಪರಿಶುದ್ಧನಾಗಿ ತನ್ನ ನಿತ್ಯಕರ್ಮಗಳೆಲ್ಲವನ್ನೂ ಮಾಡಿಕೊಂಡನಂತರ ಗುರುವನ್ನು ಕರೆದುಕೊಂಡು ಬಂದು ಶಾಸ್ತ್ರಕ್ರಮವಾಗಿ ನಾಂದೀಶ್ರಾದ್ಧವನ್ನು ಮಾಡಲು ಪ್ರಾರಂಭಿಸಬೇಕು.

೩೭–೩೮. ಈ ನಾಂದೀಶ್ರಾದ್ಧದಲ್ಲಿ ಸತ್ಯವಸು ಎಂದು ಹೆಸರುಳ್ಳವರು ವಿಶ್ವೇದೇವತೆಗಳಾಗಿರುವರು. ದೇವತೆಗಳನ್ನುದ್ದೇಶಿಸಿ ಮಾಡುವ ಶ್ರಾದ್ಧದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ಎಂಬ ತ್ರಿಮೂರ್ತಿಗಳು ದೇವತೆಗಳಾಗಿರುವರು. ಋಷಿಗಳು ನಡೆಸುವ ಶ್ರಾದ್ಧದಲ್ಲಿ ದೇವಕ್ಷೇತ್ರದಲ್ಲಿ ಮನುಷ್ಯರಿಂದ ಹುಟ್ಟಿದವರು ದೇವತೆಗಳಾಗಿರುವರು. ದೇವತೆಗಳನ್ನು ಉದ್ದೇಶಿಸಿ ಮಾಡುವ ಶ್ರಾದ್ಧದಲ್ಲಿ ವಸು, ರುದ್ರ, ಆದಿತ್ಯರು ದೇವತೆಗಳಾಗಿರುವರು.

ಚತ್ವಾರೋ ಮಾನುಷಶ್ರಾದ್ಧೇ ಸನಕಾದ್ಯಾ ಮುನೀಶ್ವರಾಃ ।
ಭೂತಶ್ರಾದ್ಧಂ ಪಂಚ ಮಹಾಭೂತಾನಿ ಚ ತತಃ ಪರಂ ॥ ೩೯ ॥

ಚಕ್ಷುರಾದೀಂದ್ರಿಯಗ್ರಾಮೋ ಭೂತಗ್ರಾಮಶ್ಚತುರ್ವಿಧಃ ।
ಪಿತೃಶ್ರಾದ್ಧೇ ಪಿತಾ ತಸ್ಯ ಪಿತಾ ತಸ್ಯ ಪಿತಾ ತ್ರಯಃ ॥ ೪೦ ॥

ಮಾತೃಶ್ರಾದ್ಧೇ ಮಾತೃಪಿತಾಮಹ್ಯೌ ಚ ಪ್ರಪಿತಾಮಹೀ ।
ಆತ್ಮಶ್ರಾದ್ಧೇ ತು ಚತ್ವಾರ ಆತ್ಮಾ ಪಿತೃಪಿತಾಮಹೌ ॥ ೪೧ ॥

ಪ್ರಪಿತಾಮಹನಾಮಾ ಚ ಸಪತ್ನೀಕಾಃ ಪ್ರಕೀರ್ತಿತಾಃ ।
ಮಾತಾಮಹಾತ್ಮಕಶ್ರಾದ್ಧೇ ತ್ರಯೋ ಮಾತಾಮಹಾದಯಃ ॥ ೪೨ ॥

ಪ್ರತಿಶ್ರಾದ್ಧಂ ಬ್ರಾಹ್ಮಣಾನಾಂ ಯುಗ್ಮಂ ಕೃತ್ವೋಪಕಲ್ಪಿತಾನ್ ।
ಆಹೂಯ ಪಾದೌ ಪ್ರಕ್ಷಾಲ್ಯ ಸ್ವಯಮಾಚಮ್ಯ ಯತ್ನತಃ ॥ ೪೩ ॥

---

೩೯–೪೦. ಮಾನುಷಶ್ರಾದ್ಧದಲ್ಲಿ ಸನಕನೇ ಮೊದಲಾದ ನಾಲ್ಕುಜನ ಮುನಿಶ್ರೇಷ್ಠರು ದೇವತೆಗಳಾಗಿರುವರು. ಕಣ್ಣು ಮೊದಲಾದ ಐದು ವಿಧವಾದ ಇಂದ್ರಿಯಗಳ ಸಮೂಹವು, ನಾಲ್ಕು ವಿಧವಾದ ಎಂದರೆ ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ ಎಂಬ ನಾಲ್ಕು ಭೂತಗ್ರಾಮಗಳೂ ಸೇರಿ ಪಂಚಮಹಾಭೂತಗಳು. ಆ ಭೂತಶ್ರಾದ್ಧದಲ್ಲಿ ಐದು ವಿಧವಾದ ಮಹಾಭೂತಗಳು ದೇವತೆಗಳಾಗಿರುವುವು. ಪಿತೃಗಳ ಶ್ರಾದ್ಧದಲ್ಲಿ ಶ್ರಾದ್ಧಮಾಡುವವನ ಮೂರು ತಲೆಯವರಿಗೂ, ಇರುವ ಪಿತೃ, ಪಿತಾಮಹ, ಪ್ರಪಿತಾಮಹ ಎಂಬ ಮೂರು ಜನರು ದೇವತೆಗಳಾಗಿರುವರು.

೪೧–೪೨. ಮಾತೃಶ್ರಾದ್ಧದಲ್ಲಿ ಮಾತೃ, ಪಿತಾಮಹಿ, ಪ್ರಪಿತಾಮಹೀ ಎಂಬ ಮೂರು ಜನರು ದೇವತೆಗಳಾಗಿರುವರು. ಆತ್ಮಶ್ರಾದ್ಧದಲ್ಲಿ ತಾನು, ತನ್ನ ತಂದೆ, ಪಿತಾಮಹ, ಪ್ರಪಿತಾಮಹ ಇವರು ನಾಲ್ಕು ಜನರು ದೇವತೆಗಳಾಗಿರುವರು. ಈ ಶ್ರಾದ್ಧದಲ್ಲಿ ಇವರನ್ನು ಸಪತ್ನೀಕರನ್ನಾಗಿಯೇ ಪೂಜಿಸಬೇಕು. ಮಾತಾಮಹ ಶ್ರಾದ್ಧದಲ್ಲಿ ಮಾತಾಮಹನೇ ಮೊದಲಾದ ಮೂರು ಜನರು ದೇವತೆಗಳಾಗಿರುವರು.

೪೩. ಪ್ರತಿಯೊಂದು ಶ್ರಾದ್ಧದಲ್ಲಿಯೂ, ಇಬ್ಬರಿಬ್ಬರು ಬ್ರಾಹ್ಮಣರನ್ನು ಗೊತ್ತುಮಾಡಿಕೊಂಡು ಪ್ರಯತ್ನಪೂರ್ವಕವಾಗಿ ಅವರನ್ನು ಕರೆದುಕೊಂಡು ಬಂದು ಅವರ ಪಾದಗಳನ್ನು ತೊಳೆದು ತಾನೂ ಶುದ್ಧಾಚಮನವನ್ನು ಮಾಡಬೇಕು.

ಸಮಸ್ತಸಂಪತ್ಸಮವಾಪ್ತಿಹೇತವಃ
ಸಮುತ್ಥಿತಾಪತ್ಕುಲಧೂಮಕೇತವಃ ।
ಅಪಾರಸಂಸಾರಸಮುದ್ರಸೇತವಃ
ಪುನಂತು ಮಾಂ ಬ್ರಾಹ್ಮಣಪಾದರೇಣವಃ　　　　　　॥ ೪೪ ॥

ಆಪದ್ಘನಧ್ವಾಂತಸಹಸ್ರಭಾನವಃ
ಸಮೀಹಿತಾರ್ಥಾರ್ಪಣಕಾಮಧೇನವಃ ।
ಸಮಸ್ತತೀರ್ಥಾಂಬುಪವಿತ್ರಮೂರ್ತಯೋ
ರಕ್ಷಂತು ಮಾಂ ಬ್ರಾಹ್ಮಣಪಾದಪಾಂಸವಃ　　　　　　॥ ೪೫ ॥

ಇತಿ ಜಪ್ತ್ವಾ ನಮಸ್ಕೃತ್ಯ ಸಾಷ್ಟಾಂಗಂ ಭುವಿ ದಂಡವತ್ ।
ಸ್ಥಿತ್ವಾ ತು ಪ್ರಾಙ್ಮುಖಃ ಶಂಭೋಃ ಪಾದಾಬ್ಜಯುಗಲಂ ಸ್ಮರನ್　॥ ೪೬ ॥

---

೪೪-೪೫. ಅನಂತರ ನಿಮಂತ್ರಿತರಾದ ಬ್ರಾಹ್ಮಣರನ್ನು ಈ ಶ್ಲೋಕಗಳನ್ನು ಹೇಳುತ್ತಾ ನಮಸ್ಕರಿಸಬೇಕು. ಈ ಬ್ರಾಹ್ಮಣರ ಪಾದಧೂಳಿಯು ಎಲ್ಲಾ ವಿಧವಾದ ಸಂಪತ್ತನ್ನು ಹೊಂದುವುದಕ್ಕೆ ಕಾರಣವಾಗಿರುವುದು. ವಿಪತ್ತುಗಳ ಸಮೂಹವನ್ನು ನಾಶಮಾಡುವುದರಲ್ಲಿ ಧೂಮಕೇತುವಿನಂತಿರುವದು. ದಡವಿಲ್ಲದಿರುವ ಸಂಸಾರವೆಂಬ ಸಮುದ್ರವನ್ನು ದಾಟಲು ಸೇತುವೆಯಾಗಿರುವದು. ಇಂತಹ ಬ್ರಾಹ್ಮಣರ ಪಾದ ರೇಣುಗಳು ನನ್ನನ್ನು ಪರಿಶುದ್ಧನನ್ನಾಗಿ ಮಾಡಲಿ. ದೊಡ್ಡ ಕಗ್ಗತ್ತಲೆಯಂತೆ ಇರುವ ವಿಪತ್ತುಗಳನ್ನು ನಾಶಮಾಡುವುದರಲ್ಲಿ ಸೂರ್ಯನಂತಿರುವ ಈ ಪಾದರೇಣು ಗಳು ನಮಗೆ ಬೇಕಾದ ಇಷ್ಟಗಳನ್ನು ಕೊಡುವ ವಿಷಯದಲ್ಲಿ, ಕಾಮಧೇನುವಿನಂತೆ ಇರುವವು. ಎಲ್ಲಾ ವಿಧವಾದ ತೀರ್ಥೋದಕಗಳ ರೂಪವನ್ನು ಧರಿಸಿ ಪವಿತ್ರವಾದ ಆಕಾರದಿಂದಿರುವ ಈ ಬ್ರಾಹ್ಮಣರ ಪಾದರೇಣುಗಳು ನನ್ನನ್ನು ರಕ್ಷಿಸಲಿ ಎಂದು ಅರ್ಥವನ್ನು ಕೊಡುವ ಈ ಮಂತ್ರವನ್ನು ಜಪಿಸಬೇಕು.

೪೬. ಹೀಗೆ ಮಂತ್ರವನ್ನು ಹೇಳಿದ ಮೇಲೆ, ಭೂಮಿಯಲ್ಲಿ ದಂಡಾಕಾರ ದಿಂದ ನಮಸ್ಕರಿಸಿ ಪೂರ್ವಮುಖನಾಗಿ ನಿಂತುಕೊಂಡು ಶಿವನ ಪಾದಕಮಲಗಳನ್ನು ಸ್ಮರಿಸಬೇಕು.

ಸಪವಿತ್ರಕರಶ್ಶುದ್ಧ ಉಪವೀತೀ ದೃಢಾಸನಃ ।
ಪ್ರಾಣಾಯಾಮತ್ರಯಂ ಕುರ್ಯಾದುಚ್ಚ್ಚಾರ್ಯ ತಿಥ್ಯಾದಿಕಂ ಪುನಃ ॥ ೪೭ ॥

ಮತ್ಸಂನ್ಯಾಸಾಂಗಭೂತಂ ಯದ್ವಿಶ್ವೇದೇವಾದಿಕಂ ತಥಾ ।
ಶ್ರಾದ್ಧಮಷ್ಟವಿಧಂ ಮಾತಾಮಹಾಂತಂ ಪಾರ್ವಣೇನ ವೈ ॥ ೪೮ ॥

ವಿಧಾನೇನ ಕರಿಷ್ಯಾಮಿ ಯುಷ್ಮದಾಜ್ಞಾಪುರಸ್ಸರಂ ।
ಏವಂ ವಿಧಾಯ ಸಂಕಲ್ಪಂ ದರ್ಭಾನುತ್ತರತಸ್ತ್ಯಜೇತ್ ॥ ೪೯ ॥

ಉಪಸ್ಪೃಶ್ಯಾಪ ಉತ್ಥಾಯ ವರಣಕ್ರಮಮಾಚರೇತ್ ।
ಪವಿತ್ರಪಾಣಿಃ ಸಂಸ್ಪೃಶ್ಯ ಪಾಣೀ ಬ್ರಾಹ್ಮಣಯೋರ್ವದೇತ್ ॥ ೫೦ ॥

ವಿಶ್ವೇದೇವಾರ್ಥ ಇತ್ಯಾದಿ ಭವದ್ಭ್ಯಾಂ ಕ್ಷಣ ಇತ್ಯಪಿ ॥ ೫೧ ॥

೪೭-೪೯. ಪವಿತ್ರವನ್ನು ಕೈಯ್ಯಲ್ಲಿ ಧರಿಸಿ, ಉಪವೀತವನ್ನು ಬಲಕ್ಕೆ ಹಾಕಿಕೊಂಡು ದೃಢವಾದ ಆಸನದಲ್ಲಿ ಕುಳಿತು, ಮೂರು ಪ್ರಾಣಾಯಾಮಗಳನ್ನು ಮಾಡಿದ ನಂತರ ತಿಥಿಯೇ ಮೊದಲಾದವುಗಳನ್ನು ಪುನಃ ಉಚ್ಚರಿಸಿ, ನಾನು ಸಂನ್ಯಾಸವನ್ನು ತೆಗೆದುಕೊಳ್ಳುವ ಕರ್ಮಕ್ಕೆ ಅಂಗವಾದ ವಿಶ್ವೇದೇವಶ್ರಾದ್ಧವೇ ಮೊದಲಾದ ಮಾತಾಮಹಾಂತವಾದ ಎಂಟು ವಿಧವಾದ ಶ್ರಾದ್ಧವನ್ನು ಪಾರ್ವಣವಿಧಾನದಿಂದ ನಿಮ್ಮ ಆಜ್ಞಾಪೂರ್ವಕವಾಗಿ ಮಾಡುವೆನು ಎಂದು ಸಂಕಲ್ಪವನ್ನು ಮಾಡಿ ದರ್ಭೆಗಳನ್ನು ಉತ್ತರದಿಕ್ಕಿನಲ್ಲಿ ಹಾಕಬೇಕು.

೫೦-೫೧. ಅನಂತರ ಕೈಯ್ಯನ್ನು ತೊಳೆದುಕೊಂಡು ಮೇಲಕ್ಕೆ ಎದ್ದು, ಆಯಾಯ ಪಿತೃದೇವತೆಗಳನ್ನು ವರಣಮಾಡುವ ಕ್ರಮವನ್ನು ಪ್ರಾರಂಭಿಸಬೇಕು. ಪವಿತ್ರವನ್ನು ಹಾಕಿಕೊಂಡಿರುವ ಕೈಯ್ಯಿನಿಂದ ಆ ಬ್ರಾಹ್ಮಣರ ಕೈಯನ್ನು ಹಿಡಿದುಕೊಂಡು ವಿಶ್ವೇದೇವರಿಗೋಸ್ಕರವಾಗಿ ನಿಮ್ಮಿಂದ ಕ್ಷಣವು ಅನುಗ್ರಹಿಸಲ್ಪಡಬೇಕು. ಎಂಬ ಮಂತ್ರದಿಂದ ವರಣವನ್ನು ಕೊಡಬೇಕು. ಈ ಕ್ರಮದಿಂದಲೇ ಬಾಕಿಯ ಶ್ರಾದ್ಧದಲ್ಲಿಯೂ ವರಣವನ್ನು ಕೊಡಬೇಕು.

ಪ್ರಸಾದನೀಯ ಇತ್ಯಂತಂ ಸರ್ವತ್ರೈವಂ ವಿಧಿಕ್ರಮಃ ।
ಏವಂ ಸಮಾಪ್ಯ ವರಣಂ ಮಂಡಲಾನಿ ಪ್ರಕಲ್ಪಯೇತ್ ॥ ೫೨ ॥

ಉದಗಾರಭ್ಯ ದಶ ಚ ಕೃತ್ವಾಭ್ಯರ್ಚನಮಕ್ಷತೈಃ ।
ತೇಷು ಕ್ರಮೇಣ ಸಂಸ್ಥಾಪ್ಯ ಬ್ರಾಹ್ಮಣಾನ್ಪಾದಯೋಃ ಪುನಃ ॥ ೫೩ ॥

ವಿಶ್ವೇದೇವಾದಿನಾಮಾನಿ ಸಸಂಬೋಧನಮುಚ್ಚರೇತ್ ।
ಇದಂ ವಃ ಪಾದ್ಯಮಿತಿ ಸಕುಶಪುಷ್ಪಾಕ್ಷತೋದಕೈಃ ॥ ೫೪ ॥

ಪಾದ್ಯಂ ದತ್ತ್ವಾ ಸ್ವಯಮಪಿ ಕ್ಷಾಲಿತಾಂಘ್ರಿರುದಙ್ಮುಖಃ ।
ಆಚಮ್ಯ ಯುಗ್ಮಕ್ಲಪ್ತಾಂಸ್ತಾನಾಸನೇಷೂಪವೇಶ್ಯ ಚ ॥ ೫೫ ॥

ವಿಶ್ವೇದೇವಸ್ವರೂಪಸ್ಯ ಬ್ರಾಹ್ಮಣಸ್ಯೇದಮಾಸನಂ ।
ಇತಿ ದರ್ಭಾಸನಂ ದತ್ತ್ವಾ ದರ್ಭಪಾಣಿಸ್ಸ್ವಯಂ ಸ್ಥಿತಃ ॥ ೫೬ ॥

ಅಸ್ಮಿನ್ನಾಂದೀಮುಖಶ್ರಾದ್ಧೇ ವಿಶ್ವೇದೇವಾರ್ಥ ಇತ್ಯಪಿ ।
ಭವದ್ಭ್ಯಾಂ ಕ್ಷಣ ಇತ್ಯುಕ್ತ್ವಾ ಕ್ರಿಯತಾಮಿತಿ ಸಂವದೇತ್ ॥ ೫೭ ॥

---

೫೨-೫೬. ಈ ಪ್ರಕಾರದಿಂದ ವರಣವನ್ನು ಮುಗಿಸಿದನಂತರ ಮಂಡಲಗಳನ್ನು ಮಾಡಬೇಕು. ಉತ್ತರದಿಕ್ಕನ್ನು ಪ್ರಾರಂಭಸಿಕೊಂಡು ಮಂತ್ರಾಕ್ಷತೆಗಳಿಂದ ಪತ್ತು ಮಂಡಲಗಳಿಗೂ ಪೂಜೆಯನ್ನು ಮಾಡಿ ಅವುಗಳಲ್ಲಿ ಕ್ರಮವಾಗಿ ಬ್ರಾಹ್ಮಣರ ಪಾದಗಳನ್ನಿರಿಸಿ ವಿಶ್ವೇದೇವರುಗಳ ಹೆಸರಿನ ಮುಂದೆ ಸಂಬೋಧನ ವಿಭಕ್ತಿಯನ್ನು ಸೇರಿ "ವಿಶ್ವೇದೇವಾಃ ಇದಂ ವಃ ಪಾದ್ಯಂ" ಎಂದು ಹೇಳುತ್ತಾ, ದರ್ಭೆಯೂ, ಅಕ್ಷತೆಯೂ ಸೇರಿರುವ ನೀರಿನಿಂದ ಪಾದ್ಯವನ್ನು ಕೊಟ್ಟು, ಅನಂತರ ತಾನೂ ಕಾಲನ್ನು ತೊಳೆದುಕೊಂಡು, ಉತ್ತರಮುಖವಾಗಿ ಕುಳಿತು ಆಚಮನವನ್ನು ಮಾಡಬೇಕು. ಬಳಿಕ ಆ ಬ್ರಾಹ್ಮಣರುಗಳನ್ನು ಆಸನದಲ್ಲಿಕೂಡಿಸಿ "ವಿಶ್ವೇದೇವಸ್ವರೂಪಸ್ಯ ಬ್ರಾಹ್ಮಣಸ್ಯೇದಮಾಸನಂ" ಎಂದರೆ ವಿಶ್ವೇದೇಪಸ್ವರೂಪದಿಂದ ಇರುವ ಬ್ರಾಹ್ಮಣರಿಗೆ ಇದು ಆಸನವು ಎಂದು ದರ್ಭಾಸನವನ್ನು ಕೊಟ್ಟು, ತಾನು ಕೈಯ್ಯಲ್ಲಿ ದರ್ಭೆಯನ್ನು ಧರಿಸಿ ನಿಂತುಕೊಂಡು ಮುಂದಿನ ಕೆಲಸವನ್ನು ಮಾಡದೇಕು.

೫೭-೫೯. ಈ ನಾಂದೀಮುಖಶ್ರಾದ್ಧದಲ್ಲಿ ಕರ್ತೃವು ಬ್ರಾಹ್ಮಣರನ್ನುದ್ದೇಶಿಸಿ "ಭವದ್ಭಿಃ ಕ್ಷಣಃ ಕ್ರಿಯತಾಂ" ಎಂದು ಹೇಳಬೇಕು. ಅವರು "ಓಂ ತಥಾ" ಎಂದು

ಪ್ರಾಪ್ನುತಾಮಿತಿ ಸಂಪ್ರೋಚ್ಯ ಭವಂತಾವಿತಿ ಸಂವದೇತ್ ।
ವದೇತಾಂ ಪ್ರಾಪ್ನುಯಾವೇತಿ ತೌ ಚ ಬ್ರಾಹ್ಮಣಪುಂಗವೌ ॥ ೫೮ ॥

ಸಂಪೂರ್ಣಮಸ್ತು ಸಂಕಲ್ಪಸಿದ್ಧಿರಸ್ತ್ವಿತಿ ತಾನ್ಪ್ರತಿ ।
ಭವಂತೋಽನುಗೃಹ್ಣಂತ್ವಿತಿ ಪ್ರಾರ್ಥಯೇದ್ದ್ವಿಜಪುಂಗವಾನ್ ॥ ೫೯ ॥

ತತಶ್ಶುದ್ಧಕದಲ್ಯಾದಿಪಾತ್ರೇಷು ಕ್ಷಾಲಿತೇಷು ಚ ।
ಅನ್ನಾದಿಭೋಜ್ಯದ್ರವ್ಯಾಣಿ ದತ್ತ್ವಾ ದರ್ಭೈಃ ಪೃಥಕ್ಪೃಥಕ್ ॥ ೬೦ ॥

ಪರಿಸ್ತೀರ್ಯ ಸ್ವಯಂ ತತ್ರ ಪರಿಷಿಚ್ಯೋದಕೇನ ಚ ।
ಹಸ್ತಾಭ್ಯಾಮವಲಂಬ್ಯಾಥ ಪಾತ್ರಂ ಪ್ರತ್ಯೇಕಮಾದರಾತ್ ॥ ೬೧ ॥

ಪೃಥಿವೀ ತೇ ಪಾತ್ರಮಿತ್ಯಾದಿ ಕೃತ್ವಾ ತತ್ರ ವ್ಯವಸ್ಥಿತಾನ್ ।
ದೇವಾದೀಂಶ್ಚ ಚತುರ್ಥ್ಯಂತಾನನೂದ್ಯಾಕ್ಷತಸಂಯುತಾನ್ ॥ ೬೨ ॥

ಉದಗ್ಗೃಹಿತ್ವಾ ಸ್ವಾಹೇತಿ ದೇವಾರ್ಥೇಽನ್ನಂ ಯಜೇತ್ಪುನಃ ।
ನ ಮಮೇತಿ ವದೇದಂತೇ ಸರ್ವತ್ರಾಯಂ ವಿಧಿಕ್ರಮಃ ॥ ೬೩ ॥

---

ಪ್ರತ್ಯುತ್ತರ ಹೇಳುವರು. ಅನಂತರ "ಪ್ರಾಪ್ನವಂತು ಭವಂತಃ" ಎಂದು ಹೇಳಬೇಕು. "ಪ್ರಾಪ್ನುವಾಮ" ಎಂದು ಅವರು ಹೇಳುವರು. ಮತ್ತೆ "ಸಂಕಲ್ಪಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು'' ಎಂದು ಹೇಳಬೇಕು. ಅವರು "ಅಸ್ತು ಸಂಕಲ್ಪಸಿದ್ಧಿಃ'' ಎಂದು ಹೇಳುವರು. "ಭವಂತೋಽನುಗೃಹ್ಣಂತು'' ಎಂದು ಪ್ರಾರ್ಥಿಸಬೇಕು. ಅದಕ್ಕೆ ಅವರು "ಅನುಗೃಹ್ಣಾಮ" ಎನ್ನುವರು.

೬೦-೬೩. ಅನಂತರ ಪರಿಶುದ್ಧವಾದ ಚೆನ್ನಾಗಿ ತೊಳೆದಿರುವ ಬಾಳೆಯ ಎಲೆಯೇ ಮೊದಲಾದ ಎಲೆಗಳಲ್ಲಿ ಅನ್ನವೇ ಮೊದಲಾದ ಉಚಿತ ಪದಾರ್ಥಗಳನ್ನಿರಿಸಿ ದರ್ಭೆಗಳಿಂದ ಬೇರೆಬೇರೆಯಾಗಿ ಪರಿಸ್ತರಣಮಾಡಿ, ನೀರಿನಿಂದ ಪರಿಷೇಚನೆವನ್ನು ಮಾಡಿ, ತನ್ನ ಕೈಗಳಿಂದ ಪಾತ್ರೆಗಳನ್ನು ಹಿಡಿದುಕೊಂಡು ಆದರದಿಂದ ಆಯಾಯ ಪಾತ್ರೆಗಳನ್ನು "ಪೃಥಿವೀ ತೇ ಪಾತ್ರಂ" ಎಂಬ ಮಂತ್ರದಿಂದ ಆಯಾಯ ಪಾತ್ರೆಗಳಿಗೆ ನಿರ್ದಿಷ್ಟವಾದ ದೇವತಾಪದಗಳಿಗೆ ಚತುರ್ಥೀವಿಭಕ್ತಿಯನ್ನು ಸೇರಿಸಿ ಹೇಳಿ, ದಾನ ಮಾಡಬೇಕು. ಅನಂತರ ಉತ್ತರದಿಕ್ಕಿನಲ್ಲಿ ದರ್ಭೆಯನ್ನೂ ಅಕ್ಷತೆಯನ್ನೂ ಹಿಡಿದು ಕೊಂಡು, ಆಯಾಯ ದೇವತೆಗಳನ್ನುದ್ದೇಶಿಸಿ "ಸ್ವಾಹಾ ನ ಮಮ" ಎಂದು ಹೇಳಿ ದಾನಮಾಡಬೇಕು. ಈ ಕ್ರಮವು ಎಲ್ಲಾಕಡೆಯಲ್ಲಿಯೂ ಇರುವುದು.

ಯತ್ಪಾದಪದ್ಮಸ್ಮರಣಾದ್ಯಸ್ಯ ನಾಮಜಪಾದಪಿ ।
ನ್ಯೂನಂ ಕರ್ಮ ಭವೇತ್ಪೂರ್ಣಂ ತಂ ವಂದೇ ಸಾಂಬಮೀಶ್ವರಂ ॥ ೬೪ ॥

ಇತಿ ಜಪ್ತ್ವಾ ತತೋ ಬ್ರೂಯಾನ್ಮಯಾ ಕೃತಮಿದಂ ಪುನಃ ।
ನಾಂದೀಮುಖಶ್ರಾದ್ಧಮಿತಿ ಯಥೋಕ್ತಂ ಚ ವದೇತ್ತತಃ ॥ ೬೫ ॥

ಅಸ್ತ್ವಿತಿ ಬ್ರೂತೇತಿ ಚ ತಾನ್ಪ್ರಸಾದ್ಯ ದ್ವಿಜಪುಂಗವಾನ್ ।
ವಿಸೃಜ್ಯ ಸ್ವಕರಸ್ಥೋದಂ ಪ್ರಣಮ್ಯ ಭುವಿ ದಂಡವತ್ ॥ ೬೬ ॥

ಉತ್ಥಾಯ ಚ ತತೋ ಬ್ರೂಯಾದಮೃತಂ ಭವತು ದ್ವಿಜಾನ್ ।
ಪ್ರಾರ್ಥಯೇಚ್ಚ ಪರಂ ಪ್ರೀತ್ಯಾ ಕೃತಾಂಜಲಿರುದಾರಧೀಃ ॥ ೬೭ ॥

ಶ್ರೀರುದ್ರಂ ಚಮಕಂ ಸೂಕ್ತಂ ಪೌರುಷಂ ಚ ಯಥಾವಿಧಿ ।
ಚಿತ್ತೇ ಸದಾಶಿವಂ ಧ್ಯಾತ್ವಾ ಜಪೇದ್ಬ್ರಹ್ಮಾಣಿ ಪಂಚ ಚ ॥ ೬೮ ॥

---

೬೪. ಅನಂತರ ಯಾವದೇವನ ಪಾದಪದ್ಮಗಳ ಸ್ಮರಣದಿಂದಲೂ ಯಾವ ದೇವನ ನಾಮಜಪದಿಂದಲೂ, ಕರ್ಮದಲ್ಲಿ ನ್ಯೂನತೆಯಿದ್ದರೂ ಪರಿಪೂರ್ಣವಾಗುವುದೋ ಅಂತಹ ಮಹಿಮೆಯುಳ್ಳ ಪರಮೇಶ್ವರನಿಗೆ ನಮಸ್ಕರಿಸುವೆನು.

೬೫-೬೬. ಹೀಗೆಂದು ಮಂತ್ರವನ್ನು ಜಪಮಾಡಿದನಂತರ "ಮಯಾಕೃತಮಿದಂ ನಾಂದೀಮುಖಶ್ರಾದ್ಧಂ ಯಥೋಕ್ತಮಸ್ತು" ನಾನು ನಡೆಸಿರುವ ಈ ನಾಂದೀಮುಖಶ್ರಾದ್ಧವು ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ ಪೂರ್ಣವಾಗಲಿ ಎಂದು ಹೇಳಬೇಕು. ಅದಕ್ಕೆ ಆ ಬ್ರಾಹ್ಮಣರು "ಯಥೋಕ್ತಮಸ್ತು" ಆಗಲಿ ಎಂದು ಹೇಳುವರು. ಹೀಗೆ ಆ ಬ್ರಾಹ್ಮಣರ ಉತ್ತರರೂಪವಾದ ಅನುಗ್ರಹವು ಆದನಂತರ ತನ್ನ ಕೈಯ್ಯಿನಲ್ಲಿರುವ ನೀರನ್ನು ಬಿಟ್ಟು ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕರಿಸಬೇಕು.

೬೭-೬೮. ಅನಂತರ ಮೇಲಕ್ಕೆ ಎದ್ದು ಆ ಬ್ರಾಹ್ಮಣರಸಂಗಡ "ಅಮೃತಂ ಭವತು" ಎಂದು ಪ್ರಾರ್ಥನೆಯನ್ನು ಮಾಡಬೇಕು. ಬ್ರಾಹ್ಮಣಭೋಜನಕಾಲದಲ್ಲಿ ಉದಾರಬುದ್ಧಿಯುಳ್ಳವನಾಗಿ ಕೈಮುಗಿದುಕೊಂಡು ಅತ್ಯಾದರದಿಂದ ಶಾಸ್ತ್ರಕ್ರಮವನ್ನನುಸರಿಸಿ, ಮನಸ್ಸಿನಲ್ಲಿ ಸದಾಶಿವನನ್ನು ಧ್ಯಾನಮಾಡುತ್ತಾ, ಶ್ರೀರುದ್ರ, ಚಮಕ, ಪುರುಷಸೂಕ್ತ ಮತ್ತು ಪಂಚಬ್ರಹ್ಮಮಂತ್ರಗಳು, ರುದ್ರಸೂಕ್ತ ಇವುಗಳನ್ನು ಜಪಮಾಡಬೇಕು.

ಭೋಜನಾಂತೇ ರುದ್ರಸೂಕ್ತಂ ಕ್ಷಮಾಪಯ್ಯ ದ್ವಿಜಾನ್ಪುನಃ ।
ತನ್ಮಂತ್ರೇಣ ತತೋ ದದ್ಯಾದುತ್ತರಾಪೋಶನಂ ಪುರಃ ॥ ೧೯ ॥

ಪ್ರಕ್ಷಾಲಿತಾಂಘ್ರಿರಾಚಮ್ಯ ಪಿಂಡಸ್ಥಾನಂ ವ್ರಜೇತ್ತತಃ ।
ಆಸೀನಃ ಪ್ರಾಙ್ಮುಖೋ ಮೌನೀ ಪ್ರಾಣಾಯಾಮತ್ರಯಂ ಚರೇತ್ ॥೨೦॥

ನಾಂದೀಮುಖೋಕ್ತಶ್ರಾದ್ಧಾಂಗಂ ಕರಿಷ್ಯೇ ಪಿಂಡದಾನಕಂ ।
ಇತಿ ಸಂಕಲ್ಪ್ಯ ದಕ್ಷಾದಿ ಸಮಾರಭ್ಯೋದಕಾಂತಿಕಂ ॥ ೨೧ ॥

ನವ ರೇಖಾಃ ಸಮಾಲಿಖ್ಯ ಪ್ರಾಗಗ್ರಾನ್ದ್ವಾದಶ ಕ್ರಮಾತ್ ।
ಸಂಸ್ತೀರ್ಯ ದರ್ಭಾನ್ದಕ್ಷಾದಿದೇವಾದಿಸ್ಥಾನಪಂಚಕಂ ॥ ೨೨ ॥

ತೂಷ್ಣೀಂ ದದ್ಯಾತ್ಸಾಕ್ಷತೋದಂ ತ್ರಿಷು ಸ್ಥಾನೇಷು ಚ ಕ್ರಮಾತ್ ।
ಸ್ಥಾನೇಷ್ವನ್ಯೇಷು ಮಾತೃಷು ಮಾರ್ಜಯಂಸ್ತಾಸ್ತತಃ ಪರಂ ॥ ೨೩ ॥

ಅತ್ರೇತಿ ಪಿತರಃ ಪಶ್ಚಾತ್ಸಾಕ್ಷತೋದಂ ಸಮರ್ಚ್ಯ ಚ ।
ದದ್ಯಾತ್ತತಃ ಕ್ರಮೇಣೈವ ದೇವಾದಿಸ್ಥಾನಪಂಚಕೇ ॥ ೨೪ ॥

---

೧೯–೨೫. ಬ್ರಾಹ್ಮಣರಿಗೆ ಭೋಜನವಾದನಂತರ, ಆ ಬ್ರಾಹ್ಮಣರ ಕ್ಷಮೆಯನ್ನು ಕೇಳಿ ಆಯಾಯ ಮಂತ್ರದಿಂದ ಆ ಬ್ರಾಹ್ಮಣರಿಗೆ ಉತ್ತರಾಪೋಶನವನ್ನು ಹಾಕಬೇಕು. ಅನಂತರದಲ್ಲಿ ತಾನು ಕೈಕಾಲುಗಳನ್ನು ತೊಳೆದುಕೊಂಡು ಪಿಂಡವನ್ನು ಕೊಡುವ ಪ್ರದೇಶಕ್ಕೆ ಹೋಗಬೇಕು. ಅಲ್ಲಿ ಪೂರ್ವಮುಖನಾಗಿ ಕುಳಿತುಕೊಂಡು, ಮೌನದಿಂದ ಮೂರುಸಲ ಪ್ರಾಣಾಯಾಮವನ್ನು ಮಾಡಿ ನಾಂದೀಮುಖ ಶ್ರಾದ್ಧದ ಅಂಗವಾದ ಪಿಂಡದಾನವನ್ನು ಮಾಡುವೆನು ಎಂದು ಸಂಕಲ್ಪಮಾಡಿ ಬಲಗಡೆಯಿಂದ ಪ್ರಾರಂಭಿಸಿ ಉತ್ತರದಕೊನೆಯವರಿಗೂ ಪೂರ್ವದಿಕ್ಕಿಗೆ ಕೊನೆಯು ಆಗುವಂತೆ ಒಂಭತ್ತುಗೆರೆಗಳನ್ನು ಬರೆದು ಅದರಲ್ಲಿ ಹನ್ನೆರಡು ದರ್ಭೆಗಳನ್ನು ಹಾಕಿ ಬಲಗಡೆಯಿಂದ ದೇವತೆಗಳ ಐದು ಸ್ಥಾನಗಳಿಗೂ, ಮೂರು ಪಿತೃಸ್ಥಾನಗಳಿಗೂ, ಮೂರು ಮಾತೃಸ್ಥಾನಗಳಿಗೂ ಅಕ್ಷತೆ ಮತ್ತು ನೀರನ್ನು ಮಂತ್ರವಿಲ್ಲದೆ ಹಾಕಬೇಕು. ಅನಂತರ ಆ ಸ್ಥಳಕ್ಕೆ ಪೂಜೆಮಾಡಿ ಕ್ರಮವಾಗಿ ದೇವತೆಗಳೇ ಆದಿಯಾಗಿ ಐದು

ತತ್ತದ್ದೇವಾದಿನಾಮಾನಿ ಚತುರ್ಥ್ಯಂತಾನ್ಯುದೀರ್ಯ ಚ ।
ಪಿಂಡತ್ರಯಂ ತತೋ ದದ್ಯಾತ್ಪ್ರತ್ಯೇಕಂ ಸ್ಥಾನಪಂಚಕೇ ॥ ೭೫ ॥

ಸ್ವಗೃಹ್ಯೋಕ್ತೇನ ಮಾರ್ಗೇಣ ದದ್ಯಾತ್ಪಿಂಡಾನ್ಪೃಥಕ್ಪೃಥಕ್ ।
ದದ್ಯಾದಿದಂ ಸಾಕ್ಷತಂ ಚ ಪಿತೃಸಾದ್ಗುಣ್ಯಹೇತವೇ ॥ ೭೬ ॥

ಧ್ಯಾಯೇತ್ಸದಾಶಿವಂ ದೇವಂ ಹೃದಯಾಂಭೋಜಮಧ್ಯತಃ ।
ತತ್ಪಾದಪದ್ಮಸ್ಮರಣಾದಿತಿ ಶ್ಲೋಕಂ ಪಠನ್ ಪುನಃ ॥ ೭೭ ॥

ನಮಸ್ಕೃತ್ಯ ಬ್ರಾಹ್ಮಣೇಭ್ಯೋ ದಕ್ಷಿಣಾಂ ಚ ಸ್ವಶಕ್ತಿತಃ ।
ದತ್ವಾ ಕ್ಷಮಾಪಯ್ಯ ಚ ತಾನ್ವಿಸೃಜ್ಯ ಚ ತತಃ ಕ್ರಮಾತ್ ॥ ೭೮ ॥

ಪಿಂಡಾನುತ್ಸೃಜ್ಯ ಗೋಗ್ರಾಸಂ ದದ್ಯಾನ್ನೋ ಚೇಜ್ಜಲೇ ಕ್ಷಿಪೇತ್ ।
ಪುಣ್ಯಾಹವಾಚನಂ ಕೃತ್ವಾ ಭುಂಜೀತ ಸ್ವಜನೈಸ್ಸಹ ॥ ೭೯ ॥

---

ಸ್ಥಾನಗಳಿಗೂ, ಅವರವರ ನಾಮಗಳನ್ನು ಚತುರ್ಥೀವಿಭಕ್ತ್ಯಂತವಾಗಿ ಹೇಳಿ ತನ್ನ ಗೃಹ್ಯಸೂತ್ರದಲ್ಲಿ ಹೇಳಿರುವ ಕ್ರಮಕ್ಕನುಸಾರವಾಗಿ ಮೂರು ಪಿಂಡಗಳನ್ನು ಹಾಕಬೇಕು. ಅನಂತರ ಅಕ್ಷತೋದಕವನ್ನು ಹಾಕಬೇಕು.

೭೬–೭೯. ಅನಂತರ ಪಿತೃಗಳಿಗೆ ಉದ್ದೇಶಮಾಡಿದ ಶ್ರಾದ್ಧದಸಾದ್ಗುಣ್ಯಕ್ಕಾಗಿ "ಯತ್ಪಾದಪದ್ಮಸ್ಮರಣಾತ್" ಎಂಬ ಶ್ಲೋಕವನ್ನು ಜಪಿಸುತ್ತಾ ತನ್ನ ಹೃದಯ ಕಮಲದ ಮಧ್ಯದಲ್ಲಿ ಶಿವನನ್ನು ಧ್ಯಾನಮಾಡಬೇಕು. ಬ್ರಾಹ್ಮಣರಿಗೆ ದಕ್ಷಿಣೆಯನ್ನು ತನ್ನ ಶಕ್ತ್ಯನುಸಾರವಾಗಿ ಕೊಟ್ಟು ಅವರ ಕ್ಷಮೆಯನ್ನು ಕೇಳಿದ ನಂತರ ಅವರನ್ನು ವಿಸರ್ಜನೆಮಾಡಬೇಕು. ಕ್ರಮವಾಗಿ ಪಿಂಡಗಳನ್ನು ವಿಸರ್ಜನೆಮಾಡಿದನಂತರ, ಗೋಗ್ರಾಸವನ್ನಾಗಲೀ ಮಾಡಬೇಕು. ಅಥವಾ ನೀರಿನಲ್ಲಿಯಾದರೂ ಅವುಗಳನ್ನು ಹಾಕಬೇಕು. ಅನಂತರ ಪುಣ್ಯಾಹವಾಚನೆಯನ್ನು ಮಾಡಿ ತನ್ನ ಇಷ್ಟ ಜನಗಳೊಡನೆ ಭೋಜನವನ್ನು ಮಾಡಬೇಕು.

ಅನ್ಯೇದ್ಯುಃ ಪ್ರಾತರುತ್ಥಾಯ ಕೃತನಿತ್ಯಕ್ರಿಯಸ್ಸುಧೀಃ ।
ಉಪೋಷ್ಯ ಕ್ಷೌರಕರ್ಮಾದಿ ಕಕ್ಷೋಪಸ್ಥವಿವರ್ಜಿತಂ ॥ ೮೦ ॥

ಕೇಶಶ್ಮಶ್ರುನಖಾನೇವ ಕರ್ಮಾವಧಿ ವಿಸೃಜ್ಯ ಚ ।
ಸಮುಚ್ಚಿಕೇಶಾನ್ವಿಧಿವತ್ಕ್ಷೌರಯಿತ್ವಾ ವಿಧಾನತಃ ॥ ೮೧ ॥

ಸ್ನಾತ್ವಾ ಧೌತಪಟಶ್ಶುದ್ಧೋ ದ್ವಿರಾಚಮ್ಯಾಥ ವಾಗ್ಯತಃ ।
ಭಸ್ಮ ಸಂಧಾರ್ಯ ವಿಧಿನಾ ಕೃತ್ವಾ ಪುಣ್ಯಾಹವಾಚನಂ ॥ ೮೨ ॥

ತೇನ ಸಂಪ್ರೋಕ್ಷ್ಯ ಸಂಪ್ರಾಪ್ಯ ಶುದ್ಧದೇಹಸ್ವಭಾವತಃ ।
ಹೋಮದ್ರವ್ಯಾರ್ಥಮಾಚಾರ್ಯದಕ್ಷಿಣಾರ್ಥಂ ವಿಹಾಯ ಚ ॥ ೮೩ ॥

ದ್ರವ್ಯಜಾತಂ ಮಹೇಶಾಯ ದ್ವಿಜೇಭ್ಯಶ್ಚ ವಿಶೇಷತಃ ।
ಭಕ್ತೇಭ್ಯಶ್ಚ ಪ್ರದಾಯಾಥ ಶಿವಾಯ ಗುರುರೂಪಿಣೇ ॥ ೮೪ ॥

---

೮೦-೮೧. ಮಾರನೆಯದಿನ ಬೆಳಗ್ಗೆ ಎದ್ದು ತನ್ನ ನಿತ್ಯಕರ್ಮಗಳೆಲ್ಲವನ್ನೂ, ಮಾಡಿಕೊಂಡು, ಉಪವಾಸವಿದ್ದು, ಕಕ್ಷ, ಉಪಸ್ಥ ಇವೆರಡು ಹೊರತಾಗಿ, ಉಳಿದ ಕೇಶ, ಶ್ಮಶ್ರು, ನಖ ಇವುಗಳನ್ನೂ, ಕೇಶಗಳೆಲ್ಲವನ್ನೂ, ಶಾಸ್ತ್ರಕ್ರಮಕ್ಕನುಸಾರವಾಗಿ ಕ್ಷೌರಮಾಡಿಸಿಕೊಳ್ಳಬೇಕು.

೮೨. ಅನಂತರ ಸ್ನಾನಮಾಡಿ ಶುದ್ಧವಾದ ವಸ್ತ್ರಗಳನ್ನು ಧರಿಸಿ ವಾಙ್ನಿಯಮವುಳ್ಳವನಾಗಿ ಪರಿಶುದ್ಧನಾಗಿ ಎರಡುಸಾರಿ ಆಚಮನವನ್ನು ಮಾಡಿ ಭಸ್ಮವನ್ನು ಶಾಸ್ತ್ರಕ್ಕನುಸಾರವಾಗಿ ಧರಿಸಿ ಪುಣ್ಯಾಹವಾಚನೆಯನ್ನು ಮಾಡಬೇಕು.

೮೩-೮೬. ಆ ಪುಣ್ಯಾಹವಾಚನೆಯನ್ನು ಮಾಡಿದ ನೀರಿನಿಂದ ದೇಹವು ಪರಿಶುದ್ಧವಾಗುವುದಕ್ಕಾಗಿ ಪ್ರೋಕ್ಷಿಸಿಕೊಳ್ಳಬೇಕು. ಹೋಮಕ್ಕೆ ಬೇಕಾಗುವ ಹೋಮದ್ರವ್ಯಗಳನ್ನೂ, ಆಚಾರ್ಯನಿಗೆ ಕೊಡಬೇಕಾಗುವ ದಕ್ಷಿಣೆಯನ್ನು ಬಿಟ್ಟು, ಉಳಿದಿರುವ ದ್ರವ್ಯವೆಲ್ಲವನ್ನೂ, ಶಿವನಿಗೂ, ಬ್ರಾಹ್ಮಣರಿಗೂ, ತನ್ನನ್ನು ಆಶ್ರಯಿಸಿರುವವರಿಗೂ, ಗುರುರೂಪದಿಂದಿರುವ ಶಿವನಿಗೂ ಕೊಡಬೇಕು. ವಸ್ತ್ರವೇ ಮೊದಲಾದ ದಕ್ಷಿಣೆಯನ್ನು ಕೊಟ್ಟು, ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕಾರವನ್ನು ಮಾಡಿ, ಉಡಿದಾರ, ಕೌಪೀನ, ವಸ್ತ್ರ ದಂಡ ಚೆನ್ನಾಗಿ ತೊಳದಿರುವ ಹೋಮದ್ರವ್ಯಗಳು,

ವಸ್ತ್ರಾದಿದಕ್ಷಿಣಾಂ ದತ್ವಾ ಪ್ರಣಮ್ಯ ಭುವಿ ದಂಡವತ್ ।
ದೋರಕೌಪೀನವಸನಂ ದಂಡಾದ್ಯಂ ಕ್ಷಾಲಿತಂ ಭುವಿ　　॥ ೮೫ ॥

ಆದಾಯ ಹೋಮದ್ರವ್ಯಾಣಿ ಸಮಿಧಾದೀನಿ ಚ ಕ್ರಮಾತ್ ।
ಸಮುದ್ರತೀರೇ ನದ್ಯಾಂ ವಾ ಪರ್ವತೇ ವಾ ಶಿವಾಲಯೇ　　॥ ೮೬ ॥

ಅರಣ್ಯೇ ಚಾಪಿ ಗೋಷ್ಠೇ ವಾ ವಿಚಾರ್ಯ ಸ್ಥಾನಮುತ್ತಮಂ ।
ಸ್ಥಿತ್ವಾಚಮ್ಯ ತತಃ ಪೂರ್ವಂ ಕೃತ್ವಾ ಮಾನಸಮಂಜರೀಂ　　॥ ೮೭ ॥

ಬ್ರಾಹ್ಮಣೋಂಕಾರಸಹಿತಂ ನಮೋ ಬ್ರಹ್ಮಣ ಇತ್ಯಪಿ ।
ಜಪಿತ್ವಾ ತ್ರಿಸ್ತತೋ ಬ್ರೂಯಾದಗ್ನಿಮೀಳೇ ಪುರೋಹಿತಂ　　॥ ೮೮ ॥

ಅಥ ಮಹಾವ್ರತಮಿತಿ ಅಗ್ನಿರ್ವೈ ದೇವನಾಮತಃ ।
ತಥೈತಸ್ಯ ಸಮಾಮ್ನಾಯಮಿಷೇ ತ್ವೋರ್ಜೇ ತ್ವಾ ವೇತಿ ತತ್　　॥ ೮೯ ॥

ಅಗ್ನ ಆಯಾಹಿ ವೀತಯೇ ಶನ್ನೋ ದೇವಿರಭೀಷ್ಟಯೇ ।
ಪಶ್ಚಾತ್ಪ್ರೋಚ್ಯ ಮಯರಸತಜಭನಲಗೈಃ ಸಹ　　॥ ೯೦ ॥

ಸಂಮಿತಂ ಚ ತತಃ ಪಂಚಸಂವತ್ಸರಮಯಂ ತತಃ ।
ಸಮಾಮ್ನಾಯಸ್ಸಮಾಮ್ನಾತಃ ಅಥ ಶಿಕ್ಷಾಂ ವದೇತ್ಪುನಃ ।
ಪ್ರವಕ್ಷ್ಯಾಮಿತ್ಯದೀರ್ಯಾಥ ವೃದ್ಧಿರಾದೈಚ್ಚ ಸಂವದೇತ್　　॥ ೯೧ ॥

---

ಸಮಿತ್ತು ಇವೇ ಮೊದಲಾದುವುಗಳನ್ನೂ, ತೆಗೆದುಕೊಂಡು ಕ್ರಮವಾಗಿ ಸಮುದ್ರತೀರ, ನದೀತೀರ, ಪರ್ವತ, ಶಿವದೇವಸ್ಥಾನ, ಹಸುಗಳನ್ನು ಕಟ್ಟುವ ಗೋಶಾಲೆ, ಇವುಗಳಲ್ಲಿ ಯಾವುದಾದರೊಂದು ಉತ್ತಮವಾದ ಪ್ರದೇಶವನ್ನು ವಿಚಾರಿಸಿಕೊಂಡು ಅಲ್ಲಿಗೆ ಹೋಗಿ ಸೇರಬೇಕು.

೮೭–೯೨. ಆ ಪ್ರದೇಶದಲ್ಲಿ ಮೊದಲು ಬ್ರಹ್ಮಯಜ್ಞವನ್ನು ಮಾಡಬೇಕು. ಓಂಕಾರವನ್ನು ಮೊದಲು ಮಾಡಿಕೊಂಡು “ ಓಂ ನಮೋಬ್ರಹ್ಮಣೇ ” ಎಂಬ ಮಂತ್ರವನ್ನು ಮೂರುಸಾರಿ ಹೇಳಿ, ಅನಂತರ “ ಅಗ್ನಿಮಿಳೇಪುರೋಹಿತಂ, ಅಥಮಹಾವ್ರತಂ, ಅಗ್ನಿರ್ವೈದೇವಾನಾಂ, ಅಥೈತಸ್ಯಸಮಮ್ನಾಯಃ, ಇಷೇತ್ವೋರ್ಜೇತ್ವಾ, ಅಗ್ನ ಆಯಾಹಿವೀತಯೇ, ಶಂನೋದೇವೀರಭಿಷ್ಟಯೇ, ಮ ಯ ರ ಸ ತ ಜ ಭ ನ ಲ ಗ

ಅಥಾತೋ ಧರ್ಮಜಿಜ್ಞಾಸೇತ್ಯುಚ್ಚಾರ್ಯ ಪುನರಂಜಸಾ ।
ಅಥಾತೋ ಬ್ರಹ್ಮಜಿಜ್ಞಾಸಾ ವೇದಾದೀನಪಿ ಸಂಜಪೇತ್ ॥ ೯೨ ॥

ಬ್ರಹ್ಮಾಣಮಿಂದ್ರಂ ಸೂರ್ಯಂ ಚ ಸೋಮಂ ಚೈವ ಪ್ರಜಾಪತಿಂ ।
ಆತ್ಮಾನಮಂತರಾತ್ಮಾನಂ ಜ್ಞಾನಾತ್ಮಾನಮತಃ ಪರಂ ॥ ೯೩ ॥

ಪರಮಾತ್ಮಾನಮಪಿ ಚ ಪ್ರಣವಾದ್ಯಂ ನಮೋಂತಕಂ ।
ಚತುರ್ಥ್ಯಂತಂ ಜಪಿತ್ವಾಥ ಸಕ್ತುಮುಷ್ಟಿಂ ಪ್ರಗೃಹ್ಯ ಚ ॥ ೯೪ ॥

ಪ್ರಾಶ್ಯಾಥ ಪ್ರಣವೇನೈವ ದ್ವಿರಾಚಮ್ಯಾಥ ಸಂಸ್ಪೃಶೇತ್ ।
ನಾಭಿಂ ಮಂತ್ರಾನ್ಸ್ವಕ್ಷ್ಯಮಾಣಂ ಪ್ರಣವಾದ್ಯಾನ್ನಮೋಂತಕಾನ್ ॥ ೯೫ ॥

ಆತ್ಮಾನಮಂತರಾತ್ಮಾನಂ ಜ್ಞಾನಾತ್ಮಾನಂ ಪರಂ ಪುನಃ ।
ಆತ್ಮಾನಂ ಚ ಸಮುಚ್ಚಾರ್ಯ ಪ್ರಜಾಪತಿಮತಃ ಪರಂ ॥ ೯೬ ॥

---

ಸವಿತ್ರಾತಂ, ಪಂಚಸಂವತ್ಸರಮಯಂ, ಸಮಾಮ್ನಾಯಸ್ಸಮಾಮ್ನಾತಃ, ಅಥಶಿಕ್ಷಾಂ ಪ್ರವಕ್ಷ್ಯಾಮಿ, ವೃದ್ಧಿರಾದೈಚ್, ಅಥಾತೋಧರ್ಮಜಿಜ್ಞಾಸಾ, ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಮಂತ್ರಗಳನ್ನು ಹೇಳಿದ ನಂತರ ವೇದಾಧ್ಯಯನವನ್ನು ಮಾಡಬೇಕು.

೯೩-೯೬. ಬ್ರಹ್ಮ, ಇಂದ್ರ, ಸೂರ್ಯ, ಸೋಮ, ಪ್ರಜಾಪತಿ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ, ಈ ದೇವತೆಗಳನ್ನು ಹೇಳುವ ಮಂತ್ರಗಳಿಗೆ ಮೊದಲು ಪ್ರಣವಮಂತ್ರವನ್ನೂ, ಕೊನೆಗೆ ಈ ದೇವತೆಗಳ ಹೆಸರಿಗೆ ಚತುರ್ಥೀ ವಿಭಕ್ತಿಯೂ, ನಮಃ ಎಂಬುದು ಕೊನೆಗೆ ಬರುವಂತೆ ಸೇರಿಸಿ ಹೇಳುತ್ತಾ ಎಂದರೆ ಓಂ ಬ್ರಹ್ಮಣೇನಮಃ, ಓಂ ಇಂದ್ರಾಯ ನಮಃ ಇತ್ಯಾದಿ). ಒಂದು ಹಿಡಿ ಕಲಸಿದ ಹಿಟ್ಟನ್ನು ತೆಗೆದುಕೊಂಡು ತಿನ್ನಬೇಕು. ಅನಂತರ ಪ್ರಣವಮಂತ್ರದಿಂದ ಎರಡು ಸಾರಿ ಆಚಮನವನ್ನು ಮಾಡಿ ತನ್ನ ನಾಭಿಯನ್ನು ಮುಟ್ಟಿಕೊಂಡು ಪ್ರಣವವೇ ಮೊದಲಾಗಿ ನಮಃ ಎಂಬುದು ಕೊನೆಗೆ ಬರುವಂತೆ, ಆತ್ಮಾ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ, ಪ್ರಜಾಪತಿ ಈ ದೇವತೆಗಳನ್ನು ಹೇಳುವ ಮಂತ್ರಗಳಿಗೆ ಸ್ವಾಹಾ ಎಂಬುದನ್ನೂ ಚತುರ್ಥಿವಿಭಕ್ತಿಯನ್ನೂ ಸೇರಿಸಿ ಹೇಳಬೇಕು.

ಸ್ವಾಹಾಂತಾನ್ಪ್ರಜಪೇತ್ಪಶ್ಚಾತ್ಪಯೋದಧಿಘೃತಂ ಪೃಥಕ್ ।
ತ್ರಿವಾರಂ ಪ್ರಣವೇನೈವ ಪ್ರಾಶ್ಯಾಚಮ್ಯ ದ್ವಿಧಾ ಪುನಃ ॥ ೯೭ ॥

ಪ್ರಾಗಾಸ್ಯ ಉಪವಿಶ್ಯಾಥ ದೃಢಚಿತ್ತಃ ಸ್ಥಿರಾಸನಃ ।
ಯಥೋಕ್ತವಿಧಿನಾ ಸಮ್ಯಕ್ ಪ್ರಾಣಾಯಾಮತ್ರಯಂ ಚರೇತ್ ॥ ೯೮ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಸನ್ಯಾಸವಿಧಿವರ್ಣನಂ ನಾಮ ದ್ವಾದಶೋಽಧ್ಯಾಯಃ

---

೯೭-೯೮. ಅನಂತರ ಹಾಲು, ಮೊಸರು, ತುಪ್ಪ ಇವನ್ನು ಬೇರೆಬೇರೆಯಾಗಿ ಮೂರುಸಾರಿ ಪ್ರಣವಮಂತ್ರದಿಂದ ಪ್ರಾಶನೆಮಾಡಬೇಕು. ಬಳಿಕ ಎರಡು ಸಾರಿ ಆಚಮನವನ್ನು ಮಾಡಿ ದೃಢವಾದ ಮನಸ್ಸಿನಿಂದ ಸ್ಥಿರವಾದ ಆಸನವನ್ನು ಹಾಕಿಕೊಂಡು ಪೂರ್ವಮುಖವಾಗಿ ಕುಳಿತು ಶಾಸ್ತ್ರಕ್ಕೆ ಅನುಸಾರವಾಗಿ ಮೂರು ಪ್ರಾಣಾಯಾಮಗಳನ್ನು ಮಾಡಬೇಕು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಸಂನ್ಯಾಸವರ್ಣನವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ಕೈಲಾಸಸಂಹಿತಾಯಾಂ

## ತ್ರಯೋದಶೋಽಧ್ಯಾಯಃ

॥ ಸುಬ್ರಹ್ಮಣ್ಯ ಉವಾಚ ॥

**ಅಥ ಮಧ್ಯಾಹ್ನಸಮಯೇ ಸ್ನಾತ್ವಾ ನಿಯತಮಾನಸಃ ।**
**ಗಂಧಪುಷ್ಪಾಕ್ಷತಾದೀನಿ ಪೂಜಾದ್ರವ್ಯಾಣ್ಯುಪಾಹರೇತ್ ॥ ೧ ॥**

**ನೈರ್ಋತ್ಯೇ ಪೂಜಯೇದ್ದೇವಂ ವಿಘ್ನೇಶಂ ದೇವಪೂಜಿತಂ ।**
**ಗಣಾನಾಂ ತ್ವೇತಿ ಮಂತ್ರೇಣಾವಾಹಯೇತ್ಸುವಿಧಾನತಃ ॥ ೨ ॥**

---

### ಹದಿಮೂರನೆಯ ಅಧ್ಯಾಯವು

೧-೩. ಸುಬ್ರಹ್ಮಣ್ಯೇಶ್ವರನಿಂತೆಂದನು :—ಅನಂತರ ಮಧ್ಯಾಹ್ನಕಾಲದಲ್ಲಿ ಸ್ನಾನಮಾಡಿ ನಿಯತವಾದ ಮನಸ್ಸುಳ್ಳವನಾಗಿ, ಗಂಧ, ಹೂವು, ಅಕ್ಷತೆ ಇವೇ ಮೊದಲಾದ ಪೂಜಾದ್ರವ್ಯಗಳನ್ನು ಸಿದ್ಧಪಡಿಸಿಕೊಳ್ಳಬೇಕು. ನೈಋತ್ಯದಿಕ್ಕಿನಲ್ಲಿ ದೇವತೆಗಳಿಂದ ಪೂಜಿತನಾದ ವಿಘ್ನರಾಜನನ್ನು ಗಣಾನಾಂತ್ವಾ ಎಂಬ ಮಂತ್ರದಿಂದ ಆವಾಹನೆಯನ್ನು ಮಾಡಬೇಕು. ಈ ಗಣೇಶನನ್ನು ಕೆಂಪು ಬಣ್ಣವುಳ್ಳವನನ್ನಾಗಿಯೂ ದೊಡ್ಡ ಶರೀರವುಳ್ಳವನನ್ನಾಗಿಯೂ, ದಿವ್ಯಾಭರಣಭೂಷಿತನನ್ನಾಗಿ ಇರುವಂತೆಯೂ, ಪಾಶ, ಅಂಕುಶ, ಕಬ್ಬಿನಜಲ್ಲೇ, ವರದಹಸ್ತ ಇವುಗಳನ್ನು

ರಕ್ತವರ್ಣಂ ಮಹಾಕಾಯಂ ಸರ್ವಾಭರಣಭೂಷಿತಂ ।
ಪಾಶಾಂಕುಶಾಕ್ಷಾಭೀಷ್ಟಂ ಚ ದಧಾನಂ ಕರಪಂಕಜೈಃ ॥ ೩ ॥

ಏವಮಾವಾಹ್ಯ ಸಂಧ್ಯಾಯ ಶಂಭುಪುತ್ರಂ ಗಜಾನನಂ ।
ಅಭ್ಯರ್ಚ್ಯ ಪಾಯಸಾಪೂಪನಾಲಿಕೇರಗುಡಾದಿಭಿಃ ॥ ೪ ॥

ನೈವೇದ್ಯಮುತ್ತಮಂ ದದ್ಯಾತ್ತಾಂಬೂಲಾದಿಮಥಾಪರಂ ।
ಪರಿತೋಷ್ಯ ನಮಸ್ಕೃತ್ಯ ನಿರ್ವಿಘ್ನಂ ಪ್ರಾರ್ಥಯೇತ್ತತಃ ॥ ೫ ॥

ಔಪಾಸನಾಗ್ನೌ ಕರ್ತವ್ಯಂ ಸ್ವಗೃಹ್ಯೋಕ್ತವಿಧಾನತಃ ।
ಆಜ್ಯಭಾಗಾಂತಮಾಗ್ನೇಯಂ ಮುಖತಂತ್ರಮತಃ ಪರಂ ॥ ೬ ॥

ಭೂಃ ಸ್ವಾಹೇತಿ ತ್ರ್ಯೃಚಾ ಪೂರ್ಣಾಹುತಿಂ ಹುತ್ವಾ ಸಮಾಪ್ಯ ಚ ।
ಗಾಯತ್ರೀಂ ವಾ ಜಪೇದ್ಯಾವದಪರಾಹ್ಣಮತಂದ್ರಿತಃ ॥ ೭ ॥

---

ಕೈಯಿಂದ ಧರಿಸಿಕೊಂಡಿರುವಹಾಗೆಯೂ ಧ್ಯಾನಮಾಡಿ ಆವಾಹನೆಯನ್ನು ಮಾಡಬೇಕು.

೪–೫. ಶಿವಪುತ್ರನಾದ ಗಜಾನನನ್ನು ಹೀಗೆ ಆವಾಹನೆಮಾಡಿ ಚೆನ್ನಾಗಿ ಧ್ಯಾನಮಾಡಿ ಪೂಜಿಸಿ, ಪಾಯಸ, ಅಪೂಪ, ತೆಂಗಿನಕಾಯಿ, ಬೆಲ್ಲ ಇವೇ ಮೊದಲಾದ ನೈವೇದ್ಯಗಳನ್ನು ತಾಂಬೂಲವೇ ಮೊದಲಾದುವುಗಳೊಡನೆ ಸಮರ್ಪಿಸಿ ಸಂತೋಷಪಡಿಸಬೇಕು. ನಮಸ್ಕಾರವನ್ನು ಮಾಡಿ, ವಿಘ್ನವಾಗದಿರಲಿ ಎಂದು ಪ್ರಾರ್ಥನೆಮಾಡಿಕೊಳ್ಳಬೇಕು.

೬-೭. ಅನಂತರ ತನ್ನ ಗೃಹ್ಯಸೂತ್ರದಲ್ಲಿ ಹೇಳಿರುವ ಕ್ರಮದಿಂದ, ಔಪಾಸನಾಗ್ನಿಯಲ್ಲಿ ಆಜ್ಯಭಾಗಾನ್ತವಾಗಿ, ಹೋಮಸಂಬಂಧವಾದ ಕಾರ್ಯಕಲಾಪಗಳನ್ನು ನಡೆಸಬೇಕು. ಭೂಃಸ್ವಾಹಾ ಮೊದಲಾದ ಮೂರು ಮಂತ್ರಗಳಿಂದ ಪೂರ್ಣಾಹುತಿಯನ್ನು ಹೋಮಮಾಡಿ ಆ ಹೋಮಕ್ರಮವೆಲ್ಲವನ್ನೂ ಮುಗಿಸಿ ಅಪರಾಹ್ಣಬರುವವರೆಗೂ ನಿಶ್ಚಲಚಿತ್ತನಾಗಿ ಗಾಯತ್ರೀಜಪವನ್ನು ಮಾಡುತ್ತಿರಬೇಕು.

ಅಥ ಸಾಯಂತನೀಂ ಸಂಧ್ಯಾಮುಪಾಸ್ಯ ಸ್ನಾನಪೂರ್ವಕಂ ।
ಸಾಯಮೌಪಾಸನಂ ಹುತ್ವಾ ಮೌನೀ ವಿಜ್ಞಾಪಯೇದ್ಗುರುಂ ॥ ೮ ॥

ಶ್ರಪಯಿತ್ವಾ ಚರುಂ ತಸ್ಮಿನ್ಸಮಿದನ್ನಾಜ್ಯಭೇದತಃ ।
ಜುಹುಯಾದ್ರೌದ್ರಸೂಕ್ತೇನ ಸದ್ಯೋಜಾತಾದಿಪಂಚಭಿಃ ॥ ೯ ॥

ಬ್ರಹ್ಮಭಿಶ್ಚ ಮಹಾದೇವಂ ಸಾಂಬಂ ವಹ್ನೌ ವಿಭಾವಯೇತ್ ।
ಗೌರೀರ್ಮಿಮಾಯಮಂತ್ರೇಣ ಹುತ್ವಾ ಗೌರೀಮನುಸ್ಮರನ್ ॥ ೧೦ ॥

ತತೋಽಗ್ನಯೇ ಸ್ವಿಷ್ಟಕೃತೇ ಸ್ವಾಹೇತಿ ಜುಹುಯಾತ್ಸಕೃತ್ ।
ಹುತ್ವೋಪರಿಷ್ಟಾತ್ತಂತ್ರಂ ತು ತತೋಽಗ್ನೇರುತ್ತರೇ ಬುಧಃ ॥ ೧೧ ॥

ಸ್ಥಿತ್ವಾಸನೇ ಜಪೇನ್ಮೌನೀ ಚೈಲಾಜಿನಕುಶೋತ್ತರೇ ।
ಆಬ್ರಾಹ್ಮಂ ಚ ಮುಹೂರ್ತಂ ತು ಗಾಯತ್ರೀಂ ದೃಢಮಾನಸಃ ॥ ೧೨ ॥

---

೮-೧೦. ಸಾಯಂಕಾಲವಾದಮೇಲೆ ಪುನಃ ಸ್ನಾನವನ್ನು ಮಾಡಿ ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಿ, ಸಾಯಂಕಾಲದಲ್ಲಿ ಮಾಡಬೇಕಾದ ಔಪಾಸನವನ್ನು ಹೋಮಮಾಡಬೇಕು. ಯಾರಸಂಗಡಲೂ ಮಾತನಾಡದೆ ಮೌನದಿಂದಿದ್ದು ತನ್ನ ಗುರುವಿನ ಸಮೀಪದಲ್ಲಿ ವಿಜ್ಞಾಪನೆಯನ್ನು ಮಾಡಿಕೊಂಡನಂತರ, ಆ ಅಗ್ನಿಯಲ್ಲಿಯೇ ಚರುವನ್ನೂ, ಸಮಿತ್ತನ್ನೂ, ಆಜ್ಯವನ್ನೂ ಬೇರೆಬೇರೆಯಾಗಿ ರುದ್ರಸೂಕ್ತ, ಸದ್ಯೋಜಾತಾದಿ ಐದು ಮಂತ್ರಗಳು, ಇವುಗಳಿಂದ ಜಗನ್ಮಾತೆಯಿಂದ ಸಹಿತನಾಗಿರುವ ಮಹಾದೇವನನ್ನು ಉದ್ದೇಶಿಸಿ ಅಗ್ನಿಯಲ್ಲಿ ಧ್ಯಾನಮಾಡಿ ಹೋಮವನ್ನು ಮಾಡಬೇಕು.

೧೧-೧೨. ಅನಂತರ ಅಗ್ನಯೇ ಸ್ವಿಷ್ಟಕೃತೇ ಸ್ವಾಹಾ ಎಂಬ ಮಂತ್ರದಿಂದ ಸ್ವಿಷ್ಟಕೃದ್ಧೋಮವನ್ನು ಒಂದೇಸಾರಿ ಹೋಮಮಾಡಿ ಮುಂದೆ ಮಾಡಬೇಕಾದ ತಂತ್ರಗಳೆಲ್ಲವನ್ನೂ ಮಾಡಿದನಂತರ ಅಗ್ನಿಯ ಉತ್ತರದಿಕ್ಕಿನಲ್ಲಿ ದರ್ಭೆ, ಅಜಿನ, ಚೇಲ ಇವುಗಳಿಂದ ಆಸನವನ್ನು ಹಾಕಿಕೊಂಡು ಕುಳಿತು ಬ್ರಾಹ್ಮ ಮುಹೂರ್ತ ಬರುವವರೆಗೂ, ದೃಢವಾದ ಮನಸ್ಸುಳ್ಳವನಾಗಿ ಗಾಯತ್ರಿಯನ್ನು ಜಪಮಾಡಬೇಕು.

ತತಃ ಸ್ನಾತ್ವಾ ತ್ವಶಕ್ತಶ್ಚೇದ್ಭಸ್ಮಸ್ನಾನಾ ವಾ ವಿಧಾನತಃ |
ಶ್ರಪಯಿತ್ವಾ ಚರುಂ ತಸ್ಮಿನ್ನಗ್ನಾವೇವಾಭಿಘಾರಿತಂ ॥ ೧೩ ॥

ಉದಗುದ್ವಾಸ್ಯ ಬ್ರರ್ಹಿಷ್ಯಾಸಾದ್ಯಾಜ್ಯೇನ ಚರುಂ ತತಃ |
ಅಭಿಘಾರ್ಯ ವ್ಯಾಹೃತೀಶ್ಚ ರೌದ್ರಸೂಕ್ತಂ ಚ ಪಂಚ ಚ ॥ ೧೪ ॥

ಜಪೇದ್ಬ್ರಹ್ಮಾಣಿ ಸಂಧಾರ್ಯ ಚಿತ್ತಂ ಶಿವಪದಾಂಬುಜೇ |
ಪ್ರಜಾಪತಿಮಥೇಂದ್ರಂ ಚ ವಿಶ್ವೇದೇವಾಸ್ತತಃ ಪರಂ ॥ ೧೫ ॥

ಬ್ರಹ್ಮಾಣಂ ಸಚತುರ್ಥ್ಯಂತಂ ಸ್ವಾಹಾಂತಾನ್ ಪ್ರಣವಾದಿಕಾನ್ |
ಸಂಜಪ್ಯ ವಾಚಯಿತ್ವಾಽಥ ಪುಣ್ಯಾಹಂ ಚ ತತಃ ಪರಂ ॥ ೧೬ ॥

ಪರಸ್ತಾತ್ತಂತ್ರಮಗ್ನಯೇ ಸ್ವಾಹೇತ್ಯಗ್ನಿಮುಖಾವಧಿ |
ನಿರ್ವರ್ತ್ಯ ಪಶ್ಚಾತ್ಪ್ರಾಣಾಯ ಸ್ವಾಹೇತ್ಯಾರಭ್ಯ ಪಂಚಭಿಃ ॥ ೧೭ ॥

---

೧೩-೧೭. ಅನಂತರ ಪುನಃ ಸ್ನಾನಮಾಡಬೇಕು. ಶಕ್ತಿಯಿಲ್ಲದಿದ್ದರೆ ಶಾಸ್ತ್ರ ಕ್ರಮವಾಗಿ ಭಸ್ಮಸ್ನಾನವನ್ನು ಮಾಡಿ ಆ ಅಗ್ನಿಯಲ್ಲಿಯೇ ಚರುವನ್ನು ಸಿದ್ಧಪಡಿಸಿ ದರ್ಭೆಯಿಂದ ಆಜ್ಯಾಭಿಘಾರವನ್ನು ಮಾಡಿ, ದರ್ಭೆಯನ್ನು ಉತ್ತರದಿಕ್ಕಿಗೆ ಎಸೆದು ಆಜ್ಯವನ್ನು ಬರ್ಹಿಸ್ಸಿನಲ್ಲಿ ಇರಿಸಿಕೊಂಡು ಮತ್ತೆ ಆಜ್ಯದಿಂದ ಚರುವನ್ನು ಅಭಿ ಘಾರಮಾಡಿ, ವ್ಯಾಹೃತಿಮಂತ್ರಗಳು, ರುದ್ರಸೂಕ್ತ, ಪಂಚಬ್ರಹ್ಮಮಂತ್ರಗಳು ಇವು ಗಳನ್ನು ಜಪಮಾಡಿ, ಶಿವನ ಪಾದಕಮಲಗಳಲ್ಲಿ, ಮನಸ್ಸನ್ನು ಧ್ಯಾನಮಾಡುತ್ತಾ ಪ್ರಜಾಪತಿ, ಇಂದ್ರ, ವಿಶ್ವೇದೇವತೆಗಳು, ಬ್ರಹ್ಮಾ, ಪ್ರಣವಮಂತ್ರ ಈ ದೇವತೆಗಳ ಮಂತ್ರಗಳಿಗೆ ಸ್ವಾಹಾ ಎಂಬುದೂ, ಚತುರ್ಥೀವಿಭಕ್ತಿಯೂ, ಕೊನೆಗೆ ಬರುವಹಾಗೆ ಮಂತ್ರಗಳನ್ನು ಹೇಳಿ ಹೋಮಮಾಡಬೇಕು. ಅನಂತರ ಪುಣ್ಯಾಹವನ್ನು ಮಾಡಿ, ಮುಂದೆ ನಡೆಸಬೇಕಾದ ತಂತ್ರಗಳೆಲ್ಲವನ್ನೂ ಅಗ್ನಯೇಸ್ವಾಹಾ ಎಂಬುದೇ ಮೊದ ಲಾದುವುಗಳನ್ನು ಅಗ್ನಿಮುಖದವರಿಗೂಮಾಡಿ ಅನಂತರ ಪ್ರಾಣಾಯಸ್ವಾಹಾ ಎಂಬುದು ಮೊದಲುಗೊಂಡು ಐದುಮಂತ್ರಗಳಿಂದ ಆಜ್ಯದಿಂದ ಕೂಡಿರುವ ಚರುವಿ ನಿಂದ ಅಗ್ನಿಯಲ್ಲಿ ಹೋಮಮಾಡಿ ಬಳಿಕ ಸ್ವಿಷ್ಟಕೃದ್ಧೋಮವನ್ನು ಮಾಡಬೇಕು.

ಸಾಜ್ಯೇನ ಚರುಣಾ ಪಶ್ಚಾದಗ್ನಿಂ ಸ್ವಿಷ್ಟಕೃತಂ ಹುನೇತ್ ।
ಪುನಸ್ಚ ಪ್ರಜಪೇತ್ಸೂಕ್ತಂ ರೌದ್ರಂ ಬ್ರಹ್ಮಾಣಿ ಪಂಚ ಚ ॥ ೧೮ ॥

ಮಹೇಶಾದಿ ಚತುರ್ವ್ಯೂಹಮಂತ್ರಾಂಶ್ಚ ಪ್ರಜಪೇತ್ಪುನಃ ।
ಹುತ್ವೋಪರಿಷ್ಟಾತ್ತಂತ್ರಂ ತು ಸ್ವಶಾಖೋಕ್ತೇನ ವರ್ತ್ಮನಾ ॥ ೧೯ ॥

ತತ್ತದ್ದೇವಾನ್ಸಮುದ್ದಿಶ್ಯ ಸಾಂಗಂ ಕುರ್ಯಾದ್ವಿಚಕ್ಷಣಃ ।
ಏವಮಗ್ನಿಮುಖಾದ್ಯಂ ಯತ್ಕರ್ಮತಂತ್ರಂ ಪ್ರವರ್ತಿತಂ ॥ ೨೦ ॥

ಅತಃ ಪರಂ ಪ್ರಜುಹುಯಾದ್ವಿರಜಾಹೋಮಮಾತ್ಮನಃ ।
ಷಡ್ವಿಂಶತ್ತತ್ತ್ವರೂಪೇಽಸ್ಮಿನ್ದೇಹೇ ಲೀನಸ್ಯ ಶುದ್ಧಯೇ ॥ ೨೧ ॥

ತತ್ತ್ವಾನ್ಯೇತಾನಿ ಮದ್ದೇಹೇ ಶುಧ್ಯಂತಾಮಿತ್ಯನುಸ್ಮರನ್ ।
ತತ್ರಾತ್ಮತತ್ತ್ವಶುಧ್ಯರ್ಥಂ ಮಂತ್ರೈರಾರುಣಕೇತುಕೈಃ ॥ ೨೨ ॥

ಪಠ್ಯಮಾನೈಃ ಪೃಥಿವ್ಯಾದಿಪುರುಷಾಂತಂ ಕ್ರಮಾನ್ಮುನೇ ।
ಸಾಜ್ಯೇನ ಚರುಣಾ ಮೌನೀ ಶಿವಪಾದಾಂಬುಜಂ ಸ್ಮರನ್ ॥ ೨೩ ॥

೧೮-೧೯. ಪುನಃ ರುದ್ರಸೂಕ್ತವನ್ನೂ, ಪಂಚಬ್ರಹ್ಮಮಂತ್ರಗಳನ್ನೂ, ಮಹೇಶ್ವರನೇ ಮೊದಲಾದ ನಾಲ್ಕು ವ್ಯೂಹದ ಮಂತ್ರಗಳನ್ನೂ ಜಪಮಾಡಿಕೊಂಡು ತನ್ನ ಶಾಖೆಯಲ್ಲಿ ಹೇಳಿರುವ ಕ್ರಮದಿಂದ ಮುಂದಿನ ತಂತ್ರಗಳೆಲ್ಲವನ್ನೂ ಮುಗಿಸಿ ಹೋಮಮಾಡಿ, ಆಯಾಯ ದೇವತೆಗಳನ್ನೂ, ಅಂಗದೇವತೆಗಳನ್ನೂ ಉದ್ದೇಶ ಮಾಡಿ ಹೋಮಮಾಡಬೇಕು.

೨೦-೨೨. ಹೀಗೆಯೇ ಅಗ್ನಿಮುಖವೇ ಮೊದಲಾದ ತತ್ತತ್ಕರ್ಮಗಳನ್ನು ಮಾಡಿದನಂತರ ವಿರಜಾಹೋಮ ಮಂತ್ರಗಳಿಂದ ಹೋಮವನ್ನು ಮಾಡಿ ಇಪ್ಪತ್ತಾರು ತತ್ತ್ವಗಳ ರೂಪದಿಂದ ಇರುವ ಈ ಶರೀರದಲ್ಲಿ ಅಡಗಿರುವ ಜೀವನಶುದ್ಧಿಗಾಗಿ, ಈ ಶರೀರದಲ್ಲಿ ಈ ತತ್ತ್ವಗಳೆಲ್ಲವೂ ಶುದ್ಧಿಯನ್ನು ಹೊಂದಲಿ ಎಂದು ಸ್ಮರಿಸುತ್ತಾ ಆ ಆತ್ಮ ತತ್ತ್ವದ ಶುದ್ಧಿಗಾಗಿ ಆರುಣಕೇತುಕಮಂತ್ರಗಳನ್ನು ಜಪಿಸಬೇಕು.

೨೩. ಎಲೈ ಋಷಿಯೇ ಕೇಳು :—ಪೃಥಿವಿಯೇ ಮೊದಲಾಗಿ ಪುರುಷಾಂತವಾಗಿ ಇರುವ ಮಂತ್ರಗಳೊಡನೆ ಕ್ರಮವಾಗಿ ತುಪ್ಪದೊಡನೆ ಚರುವನ್ನು, ಯಾರ ಸಂಗಡಲೂ ಮಾತನಾಡದೆ ಶಿವನ ಪಾದಕಮಲಗಳನ್ನು ಸ್ಮರಿಸುತ್ತಾ ಆಯಾಯ ಮಂತ್ರಗಳಿಂದ ಹೋಮವನ್ನು ಮಾಡಬೇಕು.

ಪೃಥಿವ್ಯಾದಿ ಚ ಶಬ್ದಾದಿ ವಾಗಾದ್ಯಪಂಚಕಂ ಪುನಃ ।
ಶ್ರೋತ್ರಾದ್ಯಂ ಚ ಶಿರಃ ಪಾರ್ಶ್ವಪೃಷ್ಠೋದರ ಚತುಷ್ಟಯಂ ॥ ೨೪ ॥

ಜಙ್ಘಾಂ ಚ ಯೋಜಯೇತ್ಪಶ್ಚಾತ್ತ್ವಗಾದ್ಯಂ ಧಾತುಸಪ್ತಕಂ ।
ಪ್ರಾಣಾದ್ಯಂ ಪಂಚಕಂ ಪಶ್ಚಾದನ್ನಾದ್ಯಂ ಕೋಶಪಂಚಕಂ ॥ ೨೫ ॥

ಮನಶ್ಚಿತ್ತಂ ಚ ಬುದ್ಧಿಶ್ಚಾಹಂಕೃತಿಃ ಖ್ಯಾತಿರೇವ ಚ ।
ಸಂಕಲ್ಪಂ ತು ಗುಣಾಃ ಪಶ್ಚಾತ್ಪ್ರಕೃತಿಃ ಪುರುಷಸ್ತತಃ ॥ ೨೬ ॥

ಪುರುಷಸ್ಯ ತು ಭೋಕ್ತೃತ್ವಂ ಪ್ರತಿಪನ್ನಸ್ಯ ಭೋಜನೇ ।
ಅಂತರಂಗತಯಾ ತತ್ತ್ವಪಂಚಕಂ ಪರಿಕೀರ್ತಿತಂ ॥ ೨೭ ॥

ನಿಯತಿಃ ಕಾಲರಾಗಶ್ಚ ವಿದ್ಯಾ ಚ ತದನಂತರಂ ।
ಕಲಾ ಚ ಪಂಚಕಮಿದಂ ಮಾಯೋತ್ಪನ್ನಂ ಮುನೀಶ್ವರ ॥ ೨೮ ॥

---

೨೪-೨೭. ಮತ್ತು ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವ "ಪೃಥಿವ್ಯಾಪಸ್ತೇಜೋ" ಎಂಬ ಅನುವಾಕದ (ತೈ. ಉ. ೪-೬೬) ಮಂತ್ರಗಳನ್ನೂ "ಪ್ರಾಣಾಪಾನವ್ಯಾನೋದಾನ" ಎಂಬ ಅನುವಾಕದ (ತೈ. ಉ. ೪-೬೫) ಮಂತ್ರಗಳನ್ನೂ ಚರ್ವಾಜ್ಯಪುರಸ್ಸರವಾಗಿ ಪ್ರತ್ಯೇಕನಾಗಿ ಹೋಮಮಾಡಬೇಕು. ಪೃಥಿವಿಯೇ ಮೊದಲಾದ ಪಂಚಕ, ಶಬ್ದವೇ ಮೊದಲಾದ ತನ್ಮಾತ್ರಪಂಚಕ, ವಾಗಿಂದ್ರಿಯವೇ ಮೊದಲಾದ ಜ್ಞಾನೇಂದ್ರಿಯಪಂಚಕಗಳು, ಶ್ರೋತ್ರವೇ ಮೊದಲಾದ ಕರ್ಮೇಂದ್ರಿಯಪಂಚಕವೂ, ಶಿರಃ ಪಾರ್ಶ್ವ, ಪೃಷ್ಠ, ಉದರ, ಜಂಘ ಎಂಬ ಶಾರೀರಪಂಚಕ, ತ್ವಗಾದಿಧಾತುಸಪ್ತಕ, ಪ್ರಾಣಾದಿಪಂಚಕ, ಅನ್ನಮಯಾದಿಕೋಶಪಂಚಕ, ಮನಸ್ಸು, ಚಿತ್ತ, ಬುದ್ಧಿ, ಅಹಂಕಾರ, ಖ್ಯಾತಿ, ಸಂಕಲ್ಪವೆಂಬ ಪಂಚಕ, ಗುಣಗಳು, ಪ್ರಕೃತಿ ಪುರುಷರು, ಭೋಗಡಲು ಸಿದ್ಧನಾಗಿರುವ ಪುರುಷನಿಗೆ ಅಂತರಂಗವಾಗಿ ತತ್ತ್ವಪಂಚಕವೂ ಇವುಗಳೆಲ್ಲವೂ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುವು.

೨೮-೨೯. ನಿಯತಿ ಕಾಲ ರಾಗ ವಿದ್ಯಾ ಕಲಾ ಎಂಬ ಐದು ತತ್ತ್ವಗಳೂ, ಮಾಯೆಯಿಂದ ಹುಟ್ಟಿದವುಗಳು. ಎಲೈ ಮುನೀಶ್ವರನೇ ಕೇಳು. ಮಾಯೆಯನ್ನು ಪ್ರಕೃತಿಯೆಂಬವಾಗಿ ತಿಳಿಯತಕ್ಕದ್ದು ಎಂದು ಮಾಯೆಯ ವಿಷಯವನ್ನು

ಮಾಯಾಂ ತು ಪ್ರಕೃತಿಂ ವಿದ್ಯಾದಿತಿ ಮಾಯಾ ಶ್ರುತೀರಿತಾ ।
ತಜ್ಜಾನ್ಯೇತಾನಿ ತತ್ತ್ವಾನಿ ಶ್ರುತ್ಯುಕ್ತಾನಿ ನ ಸಂಶಯಃ ॥ ೨೯ ॥

ಕಾಲಸ್ವಭಾವೋ ನಿಯತಿರಿತಿ ಚ ಶ್ರುತಿರಬ್ರವೀತ್ ।
ಏತತ್ಪಂಚಕಮೇವಾಸ್ಯ ಪಂಚಕಂ ಚಕ್ರಮುಚ್ಯತೇ ॥ ೩೦ ॥

ಅಜಾನನ್ಪಂಚತತ್ತ್ವಾನಿ ವಿದ್ವಾನಪಿ ಚ ಮೂಢಧೀಃ ।
ನಿಪತತ್ಯಾಧಸ್ತಾತ್ಪ್ರಕೃತೇರುಪರಿಷ್ಟಾತ್ಪುಮಾನಯಂ ॥ ೩೧ ॥

ಕಾಕಾಕ್ಷಿನ್ಯಾಯಮಾಶ್ರಿತ್ಯ ವರ್ತತೇ ಪಾರ್ಶ್ವತೋಽನ್ವಹಂ ।
ವಿದ್ಯಾತತ್ತ್ವಮಿದಂ ಪ್ರೋಕ್ತಂ ಶುದ್ಧವಿದ್ಯಾಮಹೇಶ್ವರಾ ॥ ೩೨ ॥

ಸದಾಶಿವಶ್ಚ ಶಕ್ತಿಶ್ಚ ಶಿವಶ್ಚೇದಂ ತು ಪಂಚಕಂ ।
ಶಿವತತ್ತ್ವಮಿದಂ ಬ್ರಹ್ಮನ್ಪ್ರಜ್ಞಾನಬ್ರಹ್ಮವಾಗ್ಯತಃ ॥ ೩೩ ॥

---

ತಿಳಿಸುವ ಶ್ರುತಿಯು ಹೇಳುವುದು. ಆದ್ದರಿಂದ ಈ ತತ್ತ್ವಗಳು ಮಾಯೆಯಿಂದ ಹುಟ್ಟಿದವುಗಳೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದ ಈ ವಿಷಯದಲ್ಲಿ ಸಂಶಯ ವಿರುವುದಿಲ್ಲ.

೩೦–೩೧. ಕಾಲಸ್ವಭಾವವು ನಿಯತಿ ಎನ್ನಿಸಿಕೊಳ್ಳುವುದೆಂದು ವೇದವು ಹೆಳುವುದು. ಈ ಮಾಯೆಗೆ ಸಂಬಂಧವಾದ ಈ ಪಂಚಕವನ್ನೂ ಈ ಶಿವನಿಗೆ ಸಂಬಂಧಪಟ್ಟ ಚಕ್ರಪಂಚಕವೆಂದು ಹೇಳುವರು. ತಾನು ಜ್ಞಾನಿಯಾದಾಗ್ಯೂ ಈ ಐದು ತತ್ತ್ವಗಳನ್ನು ತಿಳಿಯದೇ ಇದ್ದರೆ ಮೂಢನೆನಿಸುವನು. ಅವನಿಗೆ ಅಧೋ ಗತಿಯುಂಟಾಗುವುದು. ಪ್ರಕೃತಿಗಿಂತ ಮೇಲುಕಡೆಯಲ್ಲಿ ಕಾಕಾಕ್ಷಿನ್ಯಾಯದಿಂದ ಚಿದ್ರೂಪನಾದ ಶಿವನ ಪಕ್ಕದಲ್ಲಿ ಪುರುಷನು (ಪುರುಷತತ್ತ್ವವು) ಪ್ರತಿದಿನವೂ ಇರು ವನು. ಇದಕ್ಕೆ ವಿದ್ಯಾತತ್ತ್ವವೆಂದು ಹೆಸರು.

೩೨-೩೩. ಎಲೈ ಬ್ರಾಹ್ಮಣನೇ ಕೇಳು. ಶುದ್ಧವಿದ್ಯಾ, ಮಹೇಶ್ವರ, ಸದಾ ಶಿವ ಶಕ್ತಿ ಶಿವ ಎಂಬ ಈ ಪಂಚಕವು ಪ್ರಜ್ಞಾನಂಬ್ರಹ್ಮವೆಂದೆನಿಸಿರುವುದರಿಂದ ಶಿವ ತತ್ತ್ವವೆನಿಸಿಕೊಳ್ಳುವುದು.

ಪೃಥಿವ್ಯಾದಿಶಿವಾಂತಂ ಯತ್ತತ್ತ್ವಜಾತಂ ಮುನೀಶ್ವರ ।
ಸ್ವಕಾರಣಲಯದ್ವಾರಾ ಶುದ್ಧಿರಸ್ಯ ವಿಧೀಯತಾಂ ॥ ೩೪ ॥

ಏಕಾದಶಾನಾಂ ಮಂತ್ರಾಣಾಂ ಪರಸ್ಮೈಪದಪೂರ್ವಕಂ ।
ಶಿವಜ್ಯೋತಿಶ್ಚತುರ್ಥ್ಯಂತಮಿದಂ ಪದಮಥೋಚ್ಚರೇತ್ ॥ ೩೫ ॥

ನ ಮಮೇತಿ ವದೇತ್ಪಶ್ಚಾದುದ್ದೇಶತ್ಯಾಗ ಈರಿತಃ ।
ಅತಃ ಪರಂ ವಿವಿದ್ಯೈತಿ ಕಪೋತಕಾಯೇತಿ ಮಂತ್ರಯೋಃ ॥ ೩೬ ॥

ವ್ಯಾಪಕಾಯ ಪದಸ್ಯಾಂತೇ ಪರಮಾತ್ಮನ ಇತ್ಯಪಿ ।
ಶಿವಜ್ಯೋತಿಶ್ಚತುರ್ಥ್ಯಂತಂ ವಿಶ್ವಭೂತಪದಂ ಪುನಃ ॥ ೩೭ ॥

ಘಸನೋತ್ಸುಕಶಬ್ದಶ್ಚ ಚತುರ್ಥ್ಯಂತಮಥೋ ವದೇತ್ ।
ಪರಸ್ಮೈಪದಮುಚ್ಚಾರ್ಯ ದೇವಾಯಪದಮುಚ್ಚರೇತ್ ॥ ೩೮ ॥

ಉತ್ತಿಷ್ಠಸ್ವೇತಿ ಮಂತ್ರಸ್ಯ ವಿಶ್ವರೂಪಾಯಶಬ್ದತಃ ।
ಪುರುಷಾಯಪದಂ ಬ್ರೂಯಾದೋಂ ಸ್ವಾಹೇತ್ಯಸ್ಯ ಸಂವದೇತ್ ॥ ೩೯ ॥

---

೩೪–೪೦. ಎಲೈ ಮುನೀಶ್ವರನೇ ಕೇಳು :—ಪೃಥಿವೀತತ್ತ್ವವನ್ನು ಮೊದಲುಗೊಂಡು ಶಿವತತ್ತ್ವದ ಕೊನೆಯವರೆವಿಗೂ ಇರುವ ತತ್ತ್ವಸಮೂಹಗಳು ತಮ್ಮ ಕಾರಣಪದಾರ್ಥಗಳೊಡನೆ (ಕಾರಣಪದಾರ್ಥಗಳಲ್ಲಿ) ಲಯವನ್ನು ಹೊಂದುವುದರಿಂದ ಅದರಂತೆ ಭಾವಿಸಿ ಈ ತತ್ತ್ವಗಳಿಗೆ ಶುದ್ಧಿಯನ್ನು ಮಾಡಬೇಕು. ಈ ಹನ್ನೊಂದು ಮಂತ್ರಗಳಿಗೂ "ಪರಸ್ಮೈ ಪದಪೂರ್ವಕವಾಗಿಯೂ ಶಿವಜ್ಯೋತಿಪದದ ಚತುರ್ಥೀವಿಭಕ್ತ್ಯಂತವಾಗಿಯೂ ಉಚ್ಚರಿಸಿ "ನ ಮಮ" ಎಂದು ಉದ್ದೇಶತ್ಯಾಗವನ್ನು ಹೇಳಬೇಕು. ಹೇಗೆಂದರೆ—"ವಿವಿಧ್ಯೈ ಸ್ವಾಹಾ । ಪರಮಾತ್ಮನ ಇದಂ ನ ಮಮ" "ಕಪೋತಕಾಯ ಸ್ವಾಹಾ । ವ್ಯಾಪಕಾಯ ಪರಮಾತ್ಮನ ಇದಂ ನ ಮಮ" "ಶಿವಜ್ಯೋತಿಷೇ ಸ್ವಾಹಾ । ಶಿವಜ್ಯೋತಿಷ ಇದಂ ನ ಮಮ" "ಶಿವಜ್ಯೋತಿಷೇ ವಿಶ್ವಭೂತಘಸನೋತ್ಸುಕಾಯ ಪರಸ್ಮೈದೇವಾಯಸ್ವಾಹಾ । ತ್ರೈಲೋಕ್ಯವ್ಯಾಪಿನೇ ಪರಮಾತ್ಮನೇ ದೇವಾಯೇದಂ ನ ಮಮ । "ಓಂ ಉತ್ತಿಷ್ಠಸ್ವ ವಿಶ್ವರೂಪಾಯ ಪುರುಷಾಯಸ್ವಾಹಾ । ತ್ರೈಲೋಕ್ಯವ್ಯಾಪಿನೇ ಪರಮಾತ್ಮನೇ ಶಿವಾಯ

ಲೋಕತ್ರಯಪದಸ್ಯಾಂತೇ ವ್ಯಾಪಿನೇ ಪರಮಾತ್ಮನೇ ।
ಶಿವಾಯೇದಂ ನ ಮಮ ಚ ಪದಂಬ್ರೂಯಾದತಃ ಪರಂ ॥ ೪೦ ॥

ಸ್ವಶಾಖೋಕ್ತಪ್ರಕಾರೇಣ ಪುರಸ್ತಾತ್ತಂತ್ರಕರ್ಮ ಚ ।
ನಿರ್ವರ್ತ್ಯ ಸರ್ಪಿಷಾ ಮಿಶ್ರಂ ಚರುಂ ಪ್ರಾಶ್ಯ ಪುರೋಧಸೇ ॥ ೪೧ ॥

ಪ್ರದದ್ಯಾದ್ದಕ್ಷಿಣಾಂ ತಸ್ಮೈ ಹೇಮಾದಿಪರಿಬೃಂಹಿತಾಂ ।
ಬ್ರಹ್ಮಾಣಮುದ್ವಾಸ್ಯ ತತಃ ಪ್ರಾತರೌಪಾಸನಂ ಹುನೇತ್ ॥ ೪೨ ॥

ಸಂಮಾಂಸಿಂಚಂತು ಮರುತ ಇತಿ ಮಂತ್ರಂ ಜಪೇನ್ನರಃ ।
ಯಾತೇ ಅಗ್ನ ಇತ್ಯನೇನ ಮಂತ್ರೇಣಾಗ್ನೌ ಪ್ರತಾಪ್ಯ ಚ ॥ ೪೩ ॥

ಹಸ್ತಮಗ್ನೌ ಸಮಾರೋಪ್ಯ ಸ್ವಾತ್ಮನ್ಯದ್ವೈತಧಾಮನಿ ।
ಪ್ರಾಭಾತಿಕೀಂ ತತಃ ಸಂಧ್ಯಾಮುಪಾಸ್ಯಾದಿತ್ಯಮುಪ್ಯಥ ॥ ೪೪ ॥

ಉಪಸ್ಥಾಯ ಪ್ರವಿಶ್ಯಾಪ್ಸು ನಾಭಿದಘ್ನಂ ಪ್ರವೇಶಯನ್ ।
ತನ್ಮಂತ್ರಾನ್ಪ್ರಜಪೇತ್ಪ್ರೀತ್ಯಾ ನಿಶ್ಚಲಾತ್ಮಾ ಸಮುತ್ಸುಕಃ ॥ ೪೫ ॥

---

ಇದಂ ನ ಮಮ" ಎಂದು ಮಂತ್ರಗಳನ್ನು ಆಯಾಯ ಉದ್ದೇಶತ್ಯಾಗದೊಡನೆ ಹೇಳಿ ಹೋಮಮಾಡಬೇಕು.

೪೧–೪೩. ತನ್ನ ಶಾಖಾನುಸಾರವಾಗಿ ಮುಂದಿನ ಹೋಮಕರ್ಮಗಳೆಲ್ಲ ವನ್ನೂ ನೆರವೇರಿಸಿ, ಆಜ್ಯದಿಂದ ಕೂಡಿರುವ ಚರುವನ್ನು ಪ್ರಾಶನೆಮಾಡಿ ಪುರೋಹಿತ ನಿಗೆ ಚಿನ್ನದಿಂದ ಸಹಿತದಾದ ದಕ್ಷಿಣೆಯನ್ನು ಕೊಟ್ಟು ಬ್ರಹ್ಮನನ್ನು ಉದ್ವಾಸನೆ ಮಾಡಿ ಅನಂತರ ಪ್ರಾತಃಕಾಲದ ಔಪಾಸನವನ್ನು ಮಾಡಬೇಕು. "ಸಂ ಮಾಂ ಸಿಂ ಚಂತು ಮರುತಃ" ಎಂಬ ಮಂತ್ರವನ್ನು ಜಪಿಸಿ "ಯಾತೇ ಅಗ್ನೇ" ಎಂಬ ಮಂತ್ರದಿಂದ ಅಗ್ನಿಯಲ್ಲಿ ತನ್ನ ಕೈಯ್ಯನ್ನು ಕಾಯಿಸಿ, ಶಿವಾದ್ವೈತಭಾವದಿಂದ ಇರುವ ತನ್ನಲ್ಲಿ ಸಮಾರೋಪಣೆಯನ್ನು ಮಾಡಿಕೊಳ್ಳಬೇಕು.

೪೪-೪೫. ಅನಂತರದಲ್ಲಿ ಪ್ರಾತಃಕಾಲದ ಸಂಧ್ಯಾವಂದನೆಯನ್ನು ಮಾಡಿ ಆದಿತ್ಯೋಪಸ್ಥಾನವನ್ನು ಮಾಡಿದನಂತರ, ತನ್ನ ನಾಭಿಯವರಿಗೆ ಆಳವಾಗಿರುವ ನೀರಿನಲ್ಲಿ ಇಳಿದು ದೃಢವಾದ ಮನಸ್ಸುಳ್ಳವನಾಗಿ ಆಯಾಯ ಮಂತ್ರಗಳನ್ನು ಜಪಿಸಬೇಕು.

ಆಹಿತಾಗ್ನಿಸ್ತು ಯಃ ಕುರ್ಯಾತ್ಪ್ರಾಜಾಪತ್ಯೇಷ್ಟಿಮಾಹಿತೇ ।
ಶ್ರೌತೇ ವೈಶ್ವಾನರೇ ಸಮ್ಯಕ್ ಸರ್ವವೇದಸದಕ್ಷಿಣಾಂ ॥ ೪೬ ॥

ಅಥಾಗ್ನಿಮಾತ್ಮನ್ಯಾರೋಪ್ಯ ಬ್ರಾಹ್ಮಣಃ ಪ್ರವ್ರಜೇದ್ಗೃಹಾತ್ ।
ಸಾವಿತ್ರೀಪ್ರಥಮಂ ಪಾದಂ ಸಾವಿತ್ರೀಮಿತ್ಯುದೀರ್ಯ ಚ ॥ ೪೭ ॥

ಪ್ರವೇಶಯಾಮಿ ಶಬ್ದಾಂತೇ ಭೂರೋಮಿತಿ ಚ ಸಂವದೇತ್ ।
ದ್ವಿತೀಯಂ ಪಾದಮುಚ್ಚಾರ್ಯ ಸಾವಿತ್ರೀಮಿತಿ ಪೂರ್ವವತ್ ॥ ೪೮ ॥

ಪ್ರವೇಶಯಾಮಿ ಶಬ್ದಾಂತೇ ಭುವರೋಮಿತಿ ಸಂವದೇತ್ ।
ತೃತೀಯಂ ಪಾದಮುಚ್ಚಾರ್ಯ ಸಾವಿತ್ರೀಮಿತ್ಯತಃ ಪರಂ ॥ ೪೯ ॥

ಪ್ರವೇಶಯಾಮಿ ಶಬ್ದಾಂತೇ ಸುವರೋಮಿತ್ಯುದೀರಯೇತ್ ।
ತ್ರಿಪಾದಮುಚ್ಚರೇತ್ಪೂರ್ವಂ ಸಾವಿತ್ರೀಮಿತ್ಯತಃ ಪರಂ ॥ ೫೦ ॥

ಪ್ರವೇಶಯಾಮಿ ಶಬ್ದಾಂತೇ ಭೂರ್ಭುವಸ್ಸುವರೋಮಿತಿ ।
ಉದೀರಯೇತ್ಪರಂ ಪ್ರೀತ್ಯಾ ನಿಶ್ಚಲಾತ್ಮಾ ಮುನೀಶ್ವರ ॥ ೫೧ ॥

---

೪೬. ಆಹಿತಾಗ್ನಿಯಾದವನು ತನ್ನ ಶ್ರೌತಾಗ್ನಿಯಲ್ಲಿ ಸರ್ವವೇದಸದಕ್ಷಿಣವೆಂದು ಹೆಸರಿನಿಂದಿರುವ ಪ್ರಾಜಾಪತ್ಯೇಷ್ಟಿಯನ್ನು ಮಾಡಿ ಅಗ್ನಿಯನ್ನು ತನ್ನಲ್ಲಿ ಸಮಾರೋಪಣೆಯನ್ನು ಮಾಡಿಕೊಂಡು ತನ್ನ ಮನೆಯಿಂದ ಹೊರಕ್ಕೆ ಹೊರಡಬೇಕು.

೪೭–೫೧. ಎಲೈ ಋಷೀಶ್ವರನೇ ಕೇಳು. ಸಾವಿತ್ರಿಯ ಮೊದಲನೆಯ ಪಾದವನ್ನು ಹೇಳಿದನಂತರ "ಸಾವಿತ್ರೀಂ ಪ್ರವೇಶಯಾಮಿ ಭೂರೋಂ" ಎಂದು ಹೇಳಬೇಕು. ಎರಡನೆಯ ಪಾದವನ್ನು ಹೇಳಿದನಂತರ "ಸಾವಿತ್ರೀಂಪ್ರವೇಶಯಾಮಿ ಭುವರೋಂ" ಎಂದು ಹೇಳಬೇಕು. ಮೂರನೆಯ ಪಾದವನ್ನು ಹೇಳಿದನಂತರ "ಸಾವಿತ್ರೀಂಪ್ರವೇಶಯಾಮಿ ಸುವರೋಂ" ಎಂದು ಹೇಳಬೇಕು. ಮೂರು ಪಾದಗಳನ್ನೂ ಒಟ್ಟು ಹೇಳಿದನಂತರ "ಸಾವಿತ್ರೀಂ ಪ್ರವೇಶಯಾಮಿ ಭೂರ್ಭುವಸ್ಸುವರೋಂ" ಎಂದು ಬಹಳ ದೃಢವಾದ ಮನಸ್ಸಿನಿಂದ ಹೇಳಬೇಕು.

ಇಯಂ ಭಗವತೀ ಸಾಕ್ಷಾಚ್ಛಂಕರಾರ್ಧಶರೀರಿಣೀ ।
ಪಂಚವಕ್ತ್ರಾ ದಶಭುಜಾ ತ್ರಿಪಂಚನಯನೋಜ್ಜ್ವಲಾ ॥ ೫೨ ॥

ನವರತ್ನಕಿರೀಟೋದ್ಯಚ್ಚಂದ್ರಲೇಖಾವತಂಸಿನೀ ।
ಶುದ್ಧಸ್ಫಟಿಕಸಂಕಾಶಾ ದಶಾಯುಧಧರಾ ಶುಭಾ ॥ ೫೩ ॥

ಹಾರಕೇಯೂರಕಟಕಕಿಂಕಿಣೀನೂಪುರಾದಿಭಿಃ ।
ಭೂಷಿತಾವಯವಾ ದಿವ್ಯವಸನಾ ರತ್ನಭೂಷಣಾ ॥ ೫೪ ॥

ವಿಷ್ಣುನಾ ವಿಧಿನಾ ದೇವಋಷಿರ್ಗಂಧರ್ವನಾಯಕೈಃ ।
ಮಾನವೈಶ್ಚ ಸದಾ ಸೇವ್ಯಾ ಸರ್ವಾತ್ಮವ್ಯಾಪಿನೀ ಶಿವಾ ॥ ೫೫ ॥

ಸದಾಶಿವಸ್ಯ ದೇವಸ್ಯ ಧರ್ಮಪತ್ನೀ ಮನೋಹರಾ ।
ಜಗದಂಬಾ ತ್ರಿಜನನೀ ತ್ರಿಗುಣಾ ನಿರ್ಗುಣಾಪ್ಯಜಾ ॥ ೫೬ ॥

೫೨-೫೪. ಈ ಸಾವಿತ್ರೀದೇವಿಯು ಷಡ್ಗುಣೈಶ್ವರ್ಯದಿಂದ ಕೂಡಿದವಳು. ಸಾಕ್ಷಾತ್ತಾಗಿ ಶಿವನ ಶರೀರದಲ್ಲಿ ಅರ್ಧಭಾಗವನ್ನು ಹೊಂದಿರುವಳು. ನವರತ್ನಮಯವಾದ ಕಿರೀಟದಲ್ಲಿ ಹೊಳೆಯುತ್ತಿರುವ ಚಂದ್ರರೇಖೆಯನ್ನು ಆಭರಣವಾಗಿ ಧರಿಸಿರುವಳು. ಶುದ್ಧವಾದ ಸ್ಫಟಿಕದಂತಿರುವ ಕಾಂತಿಯುಳ್ಳವಳು. ಹತ್ತುವಿಧವಾದ ಆಯುಧಗಳನ್ನು ಧರಿಸಿ ಮಂಗಳಕರವಾಗಿರುವಳು. ಹಾರ ಬಾಹುಪುರಿ ಕಟಕ (ಕಡಗ) ಕಿರಿಗೆಜ್ಜೆ ನೂಪುರ ಇವೇ ಮೊದಲಾದ ಆಭರಣಗಳಿಂದ ಅಲಂಕೃತಳಾಗಿ ಉತ್ತಮವಾದ ವಸ್ತ್ರವನ್ನು ಧರಿಸಿಕೊಂಡು ರತ್ನಖಚಿತವಾದ ಆಭರಣವನ್ನು ಹಾಕಿಕೊಂಡಿರುವಳು.

೫೫-೫೬. ವಿಷ್ಣು ಬ್ರಹ್ಮ ದೇವತೆಗಳು ಋಷಿಗಳು ಗಂಧರ್ವಶ್ರೇಷ್ಠರು ಇವರುಗಳಿಂದಲೂ ಮನುಷ್ಯರಿಂದಲೂ ಯಾವಾಗಲೂ ಸೇವಿಸಲ್ಪಡುತ್ತಾ ಎಲ್ಲರಲ್ಲಿಯೂ ವ್ಯಾಪಿಸಿ ಶಿವರೂಪದಿಂದಿರುವಳು. ದೇವನಾದ ಸದಾಶಿವನಿಗೆ ಈ ದೇವಿಯು ಮನೋಹರಳಾದ ಧರ್ಮಪತ್ನಿಯಾಗಿರುವಳು. ಇವಳೇ ಜಗನ್ಮಾತೆಯು. ಬ್ರಹ್ಮ ವಿಷ್ಣು ರುದ್ರರೆಂಬ ತ್ರಿಮೂರ್ತಿಗಳಿಗೂ ಜನನಿಯು. ಸಗುಣ ಮತ್ತು ನಿರ್ಗುಣ

ಇತ್ಯೇವಂ ಸಂವಿಚಾರ್ಯಾರ್ಥ ಗಾಯತ್ರೀಂ ಪ್ರಜಪೇತ್ಸುಧೀಃ ।
ಆದಿದೇವೀಂ ಚ ತ್ರಿಪದಾಂ ಬ್ರಾಹ್ಮಣತ್ವಾದಿದಾಮುಜಾಂ ॥ ೫೭ ॥

ಯೋ ಹ್ಯನ್ಯಥಾ ಜಪೇತ್ಪಾಪೋ ಗಾಯತ್ರೀಂ ಶಿವರೂಪಿಣೀಂ ।
ಸ ಪಚ್ಯತೇ ಮಹಾಘೋರೇ ನರಕೇ ಕಲ್ಪಸಂಖ್ಯಯಾ ॥ ೫೮ ॥

ಸಾ ವ್ಯಾಹೃತಿಭ್ಯಸ್ಸಂಜಾತಾ ತಾಸ್ವೇವ ವಿಲಯಂ ಗತಾ ।
ತಾಶ್ಚ ಪ್ರಣವಸಂಭೂತಾ ಪ್ರಣವೇ ವಿಲಯಂ ಗತಾಃ ॥ ೫೯ ॥

ಪ್ರಣವಸ್ಸರ್ವವೇದಾದಿಃ ಪ್ರಣವಃ ಶಿವವಾಚಕಃ ।
ಮಂತ್ರಾಧಿರಾಜರಾಜಶ್ಚ ಮಹಾಬೀಜಂ ಮನುಃ ಪರಃ ॥ ೬೦ ॥

ಶಿವೋ ವಾ ಪ್ರಣವೋ ಹ್ಯೇಷ ಪ್ರಣವೋ ವಾ ಶಿವಃ ಸ್ಮೃತಃ ।
ವಾಚ್ಯವಾಚಕಯೋರ್ಭೇದೋ ನಾತ್ಯಂತಂ ವಿದ್ಯತೇ ಯತಃ ॥ ೬೧ ॥

---

ರೂಪದಿಂದ ಇರುವವಳಾದರೂ ಜನನಮರಣಗಳು ಇಲ್ಲದಿರುವವಳು ಎಂದು ಈ ದೇವಿಯ ಸ್ವರೂಪವನ್ನು ತಿಳಿದು, ಆದಿದೇವಿಯಾಗಿಯೂ, ಮೂರುಪಾದದಿಂದಿರುವವಳೂ, ಬ್ರಾಹ್ಮಣ ಜನ್ಮವೇ ಮೊದಲಾದ ಜನ್ಮಗಳನ್ನು ಕೊಡುವವಳೂ, ನಿತ್ಯಳೂ ಆದ ಈ ಗಾಯತ್ರಿಮಂತ್ರವನ್ನು ಜಪಿಸಬೇಕು.

೫೮. ಶಿವನ ರೂಪದಿಂದಿರುವ ಈ ಗಾಯತ್ರಿಯನ್ನು ಈ ಪ್ರಕಾರಗಿಂದಲ್ಲದೆ ಬೇರೆಯವಿಧವಾಗಿ ತಿಳಿದು ಜಪಮಾಡುವವನು ಬಹಳ ಭಯಂಕರವಾದ ನರಕದಲ್ಲಿ ಪ್ರಳಯಕಾಲದವರಿವಿಗೂ ಶಿಕ್ಷೆಯನ್ನು ಅನುಭವಿಸುವನು.

೫೯-೬೧. ಆ ಗಾಯತ್ರೀದೇವಿಯು ವ್ಯಾಹೃತಿಗಳಿಂದ ಹುಟ್ಟಿದವಳಾಗಿ, ಅದರಲ್ಲಿಯೇ ಲೀನವಾಗುವಳು. ಆ ವ್ಯಾಹೃತಿಗಳು ಪ್ರಣವದಿಂದ ಹುಟ್ಟಿರುವುವು. ಪ್ರಣವಮಂತ್ರದಲ್ಲಿಯೇ ಲಯವನ್ನು ಹೊಂದುವುವು. ಪ್ರಣವವು ಎಲ್ಲಾವೇದಗಳಿಗೂ ಆದಿಯಾದದ್ದು. ಪ್ರಣವವು ಶಿವನ ವಾಚಕವಾಗಿರುವುದು. ಮಂತ್ರಗಳೆಲ್ಲಕ್ಕೂ ಬಹಳ ಉತ್ತಮವೆಂದೆನಿಸಿಕೊಂಡಿರುವುದು. ಉತ್ತಮವಾದ ಬೀಜಾಕ್ಷರವುಳ್ಳದ್ದು. ಮಂತ್ರಗಳಿಗೆಲ್ಲಾ ರಾಜಾಧಿರಾಜನಂತೆ ಶ್ರೇಷ್ಠವಾಗಿರುವುದು. ವಾಚ್ಯವಾಚಕಗಳಿಗೆ ಯಾವಾಗಲೂ ಭೇದವು ಇಲ್ಲದೇ ಇರುವುದರಿಂದ ಶಿವನೇ ಪ್ರಣವಮಂತ್ರರೂಪದಿಂದ ಇರುವನು. ಪ್ರಣವವೇ ಶಿವನಸ್ವರೂಪವಾಗಿರುವುದು.

ಏನಮೇವ ಮಹಾಮಂತ್ರಂ ಜೀವಾನಾಂ ಚ ತನುತ್ಯಜಾಂ ।
ಕಾಶ್ಯಾಂ ಸಂಶ್ರಾವ್ಯ ಮರಣೇ ದತ್ತೇ ಮುಕ್ತಿಂ ಪರಾಂ ಶಿವಃ ॥ ೬೨ ॥

ತಸ್ಮಾದೇಕಾಕ್ಷರಂ ದೇವಂ ಶಿವಂ ಪರಮಕಾರಣಂ ।
ಉಪಾಸತೇ ಯತಿಶ್ರೇಷ್ಠಾ ಹೃದಯಾಂಭೋಜಮಧ್ಯಗಂ ॥ ೬೩ ॥

ಮುಮುಕ್ಷವೋಽಪರೇ ಧೀರಾ ವಿರಕ್ತಾ ಲೌಕಿಕಾ ನರಾಃ ।
ವಿಷಯಾನ್ಮನಸಾ ಜ್ಞಾತ್ವೋಪಾಸತೇ ಪರಮಂ ಶಿವಂ ॥ ೬೪ ॥

ಏವಂ ವಿಲಾಪ್ಯ ಗಾಯತ್ರೀಂ ಪ್ರಣವೇ ಶಿವವಾಚಕೇ ।
ಅಹಂ ವೃಕ್ಷಸ್ಯ ರೇರಿವೇತ್ಯನುವಾಕಂ ಜಪೇತ್ಪುನಃ ॥ ೬೫ ॥

ಯಶ್ಛಂದಸಾಮೃಷಭ ಇತ್ಯನುವಾಕಮುಪಕ್ರಮಾತ್ ।
ಗೋಪಾಯಾಂತಂ ಜಪನ್ಪಶ್ಚಾದುತ್ಥಿತೋಽಹಮಿತೀರಯೇತ್ ॥ ೬೬ ॥

---

೬೨-೬೪. ಕಾಶಿಯಲ್ಲಿ ಪ್ರಾಣಬಿಡುವ ಜೀವರಿಗೆ ಪರಮೇಶ್ವರನು ಈ ಮಹಾಮಂತ್ರವನ್ನು ಮರಣಕಾಲದಲ್ಲಿ ಉಪದೇಶಮಾಡಿ ಉತ್ತಮವಾದ ಮುಕ್ತಿಯನ್ನು ಕೊಡುವನು. ಆದ್ದರಿಂದ ಯತಿಗಳಲ್ಲಿ ಉತ್ತಮರಾದವರು ತಮ್ಮ ತಮ್ಮ ಹೃದಯಕಮಲದ ಮಧ್ಯದಲ್ಲಿರುವ, ಎಲ್ಲಕ್ಕೂ ಕಾರಣನಾದ, ಪ್ರಣವರೂಪವಾದ ಒಂದೇ ಅಕ್ಷರದ ಮಂತ್ರರೂಪದಿಂದ ಇರುವ ಶಿವನನ್ನು ಉಪಾಸನೆ ಮಾಡುವರು. ವಿರಕ್ತರಾಗಿ ಮುಕ್ತಿಯನ್ನು ಹೊಂದಲು ಇಚ್ಛೆಯುಳ್ಳ, ಲೋಕವ್ಯವಹಾರದಲ್ಲಿ ತಿಳುವಳಿಕೆ ಪಡೆದಿರುವ, ಇತರ ಧೀರಜನರೂ ಸಹ ಈ ಶಿವನ ಸಂಬಂಧವಾದ ವಿಷಯವೆಲ್ಲವನ್ನೂ ಚೆನ್ನಾಗಿ ತಿಳಿದುಕೊಂಡು ಉತ್ತಮನಾದ ಶಿವನನ್ನು ಸೇವಿಸುವರು.

೬೫-೬೬. ಈ ಪ್ರಕಾರದಿಂದ ಶಿವನಿಗೆ ವಾಚಕವಾದ ಪ್ರಣವಮಂತ್ರದಲ್ಲಿ ಗಾಯತ್ರೀಯನ್ನು ವಿಲಾಪನೆಮಾಡಿ "ಅಹಂವೃಕ್ಷಸ್ಯರೇರಿವಾ" (ತೈ. ಉ. ೧-೧೦.) ಎಂಬ ಅನುವಾಕವನ್ನು ಜಪಿಸಬೇಕು. ಅನಂತರದಲ್ಲಿ "ಯಶ್ಛಂದಸಾಮೃಷಭೋ ವಿಶ್ವರೂಪಃ" [ತೈ. ಉ. ೧-೪) ಎಂಬ ಅನುವಾಕವನ್ನು "ಗೋಪಾಯ" ಎಂಬುವವರಿಗೂ, ಜಪಮಾಡಿ "ಉತ್ಥಿತೋಽಹಂ" ಎಂದು ಹೇಳಬೇಕು.

ವದೇಜ್ಞಪೇತ್ತ್ರಿಧಾ ಮಂದಮಧ್ಯೋಚ್ಚಾಖ್ಯಕ್ರಮಾನ್ಮುನೇ ।
ಪ್ರಣವಂ ಪೂರ್ವಮುದ್ಧೃತ್ಯ ಸೃಷ್ಟಿಸ್ಥಿತಿಲಯಕ್ರಮಾತ್ ॥ ೬೭ ॥

ತೇಷಾಮಥ ಕ್ರಮಾದ್ಭೂಯಾದ್ಭೂಸ್ಸಂನ್ಯಸ್ತಂ ಭುವಸ್ತಥಾ ।
ಸಂನ್ಯಸ್ತಂ ಸುವರಿತ್ಯುಕ್ತ್ವಾ ಸಂನ್ಯಸ್ತಂ ಪದಮುಚ್ಚರನ್ ॥ ೬೮ ॥

ಸರ್ವಮಂತ್ರಾದ್ಯಃ ಪ್ರದೇಶೇ ಮಯೇತಿ ಚ ಪದಂ ವದೇತ್ ।
ಪ್ರಣವಂ ಪೂರ್ವಮುದ್ಧೃತ್ಯ ಸಮುಷ್ಟಿವ್ಯಾಹೃತೀರ್ವದೇತ್ ॥ ೬೯ ॥

ಸಂನ್ಯಸ್ತಮಿತ್ಯತೋ ಬ್ರೂಯಾನ್ಮಯೇತಿ ಚ ಸಮಬ್ರವೀತ್ ।
ಸದಾಶಿವಂ ಹೃದಿ ಧ್ಯಾತ್ವಾ ಮಂದಾದೀತಿ ತತೋ ಮುನೇ ॥ ೭೦ ॥

ಪ್ರೈಷಮಂತ್ರಾಂಸ್ತು ಜಪ್ತ್ವೈವಂ ಸಾವಧಾನೇನ ಚೇತಸಾ ।
ಅಭಯಂ ಸರ್ವಭೂತೇಭ್ಯೋ ಮತ್ತಃ ಸ್ವಾಹೇತಿ ಸಂಜಪನ್ ॥ ೭೧ ॥

ಪ್ರಾಚ್ಯಾಂ ದಿಶ್ಯಪ ಉದ್ಧೃತ್ಯ ಪ್ರಕ್ಷಿಪೇದಂಜಲಿಂ ತತಃ ।
ಶಿಖಾಂ ಯಜ್ಞೋಪವೀತಂ ಚ ಯತ್ರೋತ್ಪಾಟ್ಯ ಚ ಪಾಣಿನಾ ॥ ೭೨ ॥

---

೬೭-೭೩. ಪ್ರಣವಮಂತ್ರವನ್ನು ಮೊದಲು ಉದ್ಧಾರಮಾಡಿಕೊಂಡು ಸೃಷ್ಟಿ ಸ್ಥಿತಿಲಯಕ್ರಮಾನುಸಾರದಿಂದ, ಮಂದ, ಮಧ್ಯ, ಉಚ್ಚಸ್ವರಗಳ ಕ್ರಮದಿಂದ ಮೂರುಪ್ರಕಾರವಾಗಿ ಹೇಳಬೇಕು. ಅವುಗಳ ಕ್ರಮವನ್ನನುಸರಿಸಿ "ಓಂ ಭೂಃ ಸಂನ್ಯಸ್ತಂ ಮಯಾ" ಎಂದು ಮೆಲ್ಲಗೆ ಹೇಳಬೇಕು. "ಓಂ ಭುವಃ ಸಂನ್ಯಸ್ತಂ ಮಯಾ" ಎಂದು ಮಧ್ಯಮಸ್ವರದಿಂದಲೂ "ಓಂ ಸುವಃ ಸಂನ್ಯಸ್ತಂ ಮಯಾ"- "ಓಂ ಭೂರ್ಭುವಸ್ಸುವಃ ಸಂನ್ಯಸ್ತಂ ಮಯಾ" ಎಂದು ಘಟ್ಟಿಯಾಗಿಯೂ ಹೇಳಬೇಕು. ಎಲೈ ಋಷಿಯೇ ಕೇಳು. ಸದಾಶಿವನನ್ನು ಹೃದಯದಲ್ಲಿ ಧ್ಯಾನಮಾಡಿಕೊಂಡು ಮಂತ್ರವೇ ಮೊದಲಾದ ಶಬ್ದೋಚ್ಚಾರಣ ಕ್ರಮದಿಂದ ಸಾವಧಾನ ಮನಸ್ಸಿನಿಂದ ಈ ಪ್ರೈಷಮಂತ್ರಗಳನ್ನು ಹೇಳಿ, "ಅಭಯಂ ಸರ್ವಭೂತೇಭ್ಯೋ ಮತ್ತಃ ಸ್ವಾಹಾ" ಎಂದು ಹೇಳುತ್ತಾ ಪೂರ್ವದಿಕ್ಕಿನಲ್ಲಿ ಒಂದು ಬೊಗಸೆ ನೀರನ್ನು ಮೇಲಕ್ಕೆ ಎತ್ತಿಹಾಕಬೇಕು. ತನ್ನ ತಲೆಯಕೂದಲನ್ನೂ ಯಜ್ಞೋಪವಿತವನ್ನೂ ಕೈಯಿಂದ

ಗೃಹೀತ್ವಾ ಪ್ರಣವಂ ಭೂಕ್ತ್ವ ಸಮುದ್ರಂ ಗಚ್ಛ ಸಂವದೇತ್ ।
ವಹ್ನಿಜಾಯಾಂ ಸಮುಚ್ಚಾರ್ಯ ಸೋದಕಾಂಜಲಿನಾ ತತಃ ॥ ೭೩ ॥

ಅಪ್ಸು ಹೂಯಾದಥ ಪ್ರೇಷೈರಭಿಮಂತ್ರ್ಯ ತ್ರಿಧಾ ತ್ವಪಃ ।
ಪ್ರಾಶ್ಯ ತೀರೇ ಸಮಾಗತ್ಯ ಭೂಮೌ ವಸ್ತ್ರಾದಿಕಂ ತ್ಯಜೇತ್ ॥ ೭೪ ॥

ಉದಙ್ಮುಖಃ ಪ್ರಾಙ್ಮುಖೋ ವಾ ಗಚ್ಛೇತ್ಸಪ್ತಪದಾಧಿಕಂ ।
ಕಿಂಚಿದ್ದೂರಮಥಾಚಾರ್ಯಸ್ತಿಷ್ಠ ತಿಷ್ಠೇತಿ ಸಂವದೇತ್ ॥ ೭೫ ॥

ಲೋಕಸ್ಯ ವ್ಯವಹಾರಾರ್ಥಂ ಕೌಪೀನಂ ದಂಡಮೇವ ಚ ।
ಭಗವನ್ಸ್ವೀಕುರುಷ್ವೇತಿ ದದ್ಯಾತ್ಸ್ವೇನೈವ ಪಾಣಿನಾ ॥ ೭೬ ॥

ದತ್ವಾ ಸುದೋರಂ ಕೌಪೀನಂ ಕಾಷಾಯವಸನಂ ತತಃ ।
ಆಚ್ಛಾದ್ಯಾಚಮ್ಯ ಚ ದ್ವೇಧಾ ತಂ ಶಿಷ್ಯಮಿತಿ ಸಂವದೇತ್ ॥ ೭೭ ॥

---

ಕಿತ್ತು ಚೂರುಮಾಡಿ "ಸಮುದ್ರಂಗಚ್ಛಸ್ವಾಹಾ" ಎಂದು ಮಂತ್ರವನ್ನು [ತೈ. ಸ. ೧-೨] ಹೇಳಿ ನೀರನ್ನು ಬಗಸೆಯಿಂದ ಎತ್ತಿ ಹಿಡಿದು ನೀರಿನಲ್ಲಿಯೇ ಹಾಕಬೇಕು.

೭೪. ಅನಂತರ ಪ್ರೇಷಮಂತ್ರಗಳಿಂದ [ಸಂನ್ಯಸ್ತಂ ಮಯಾ ಎಂಬ ಮಂತ್ರದಿಂದ] ಅಭಿಮಂತ್ರಿಸಿದ ನೀರನ್ನು ಮೂರು ಸಾರಿ ಪಾನಮಾಡಿ, ನದಿಯ ನೀರಿನಿಂದ ಮೇಲಕ್ಕೆದ್ದು ದಡಕ್ಕೆ ಬಂದು ಭೂಮಿಯಮೇಲೆ ನಿಂತುಕೊಂಡು ತಾನು ಧರಿಸಿದ್ದ ಬಟ್ಟೆಯೇ ಮೊದಲಾದುವುಗಳನ್ನು ತ್ಯಜಿಸಬೇಕು.

೭೫-೭೬. ಅನಂತರ ಉತ್ತರಮುಖವಾಗಿಯಾಗಲೀ, ಪೂರ್ವಮುಖವಾಗಿಯಾಗಲೀ ಏಳು ಹೆಜ್ಜೆಗಳಿಗಿಂತ ಹೆಚ್ಚಾಗಿ ಹೋಗಬೇಕು. ಕೊಂಚದೂರ ಹೋಗುವುದರೊಳಗಾಗಿ ಗುರುವು ಅವನನ್ನು ನಿಲ್ಲು, ನಿಂತುಕೋ ಎಂದು ಹೇಳಬೇಕು. ಎಲೈ ಪುಣ್ಯಶಾಲಿಯೇ, ಲೋಕದ ವ್ಯವಹಾರಕ್ಕಾಗಿ ಕೌಪೀನವನ್ನೂ, ದಂಡವನ್ನೂ, ತೆಗೆದುಕೋ ಎಂದು ತನ್ನ ಕೈಯಿನಿಂದಲೇ ಕೊಡಬೇಕು.

೭೭-೭೮. ಗುರುವು ಘಟ್ಟಿಯಾದ ಉಡಿದಾರವನ್ನೂ, ಕೌಪೀನವನ್ನೂ, ಕೆಂಪು ಬಣ್ಣದಿಂದಿರುವ ಕಾವೀಬಟ್ಟೆಯನ್ನೂ, ಕೊಟ್ಟನಂತರ ಅವುಗಳನ್ನು ತೆಗೆದುಕೊಂಡು, ಧರಿಸಿ ಎರಡುಸಾರಿ ಆಚಮನವನ್ನು ಮಾಡಬೇಕು. ಗುರುವು ಎರಡು

ಇಂದ್ರಸ್ಯ ವಜ್ರೋಽಸಿ ತತ ಇತಿ ಮಂತ್ರಮುದಾಹರೇತ್ ।
ಸಂಪ್ರಾರ್ಥ್ಯ ದಂಡಂ ಗೃಹ್ಣೀಯಾತ್ಸಖಾಯ ಇತಿ ಸಂಜಪನ್ ॥ ೭೮ ॥

ಅಥ ಗತ್ವಾ ಗುರೋಃ ಪಾರ್ಶ್ವಂ ಶಿವಪಾದಾಂಬುಜಂ ಸ್ಮರನ್ ।
ಪ್ರಣಮೇದ್ದಂಡವದ್ಭೂಮೌ ತ್ರಿವಾರಂ ಸಂಯತಾತ್ಮವಾನ್ ॥ ೭೯ ॥

ಪುನರುತ್ಥಾಯ ಚ ಶನೈಃ ಪ್ರೇಮ್ಣಾ ಪಶ್ಯನ್ಗುರುಂ ನಿಜಂ ।
ಕೃತಾಂಜಲಿಪುಟಸ್ತಿಷ್ಠೇದ್ಗುರುಪಾದಸಮೀಪತಃ ॥ ೮೦ ॥

ಕರ್ಮಾರಂಭಾತ್ಪೂರ್ವಮೇವ ಗೃಹೀತ್ವಾ ಗೋಮಯಂ ಶುಭಂ ।
ಸ್ಥೂಲಾಮಲಕಮಾತ್ರೇಣ ಕೃತ್ವಾ ಪಿಂಡಾನ್ವಿಶೋಷಯೇತ್ ॥ ೮೧ ॥

ಸೌರೈಸ್ತು ಕಿರಣೈರೇವ ಹೋಮಾರಂಭಾಗ್ನಿಮಧ್ಯಗಾನ್ ।
ನಿಕ್ಷಿಪ್ಯ ಹೋಮಸಂಪೂರ್ತೌ ಭಸ್ಮ ಸಂಗೃಹ್ಯ ಗೋಪಯೇತ್ ॥ ೮೨ ॥

---

ಸಾರಿ ನೀನು ನನಗೆ ಶಿಷ್ಯನಾಗಿರುತ್ತಿ ಎಂದು ಹೇಳಿದನಂತರ "ಇಂದ್ರಸ್ಯವಜ್ರೋಽಸಿ" ಎಂಬ ಮಂತ್ರವನ್ನೂ "ಸಖಾಯ" ಎಂಬ ಮಂತ್ರವನ್ನೂ ಹೇಳಿ ಪ್ರಾರ್ಥನೆಯನ್ನು ಮಾಡಿ, ದಂಡವನ್ನು ಸ್ವೀಕರಿಸಬೇಕು.

೭೯–೮೦. ಆ ಶಿಷ್ಯನು ದೃಢವಾದ ಮನಸ್ಸಿನಿಂದ ಶಿವನ ಪಾದಕಮಲಗಳನ್ನು ಧ್ಯಾನಮಾಡುತ್ತಾ ಗುರುವಿನ ಪಾರ್ಶ್ವಕ್ಕೆ ಬಂದು ಮೂರುಸಾರಿ ದಂಡಾಕಾರವಾಗಿ ಭೂಮಿಯಲ್ಲಿ ನಮಸ್ಕಾರಮಾಡಬೇಕು. ನಮಸ್ಕಾರಮಾಡಿ ಮೇಲಕ್ಕೆ ಎದ್ದು ಭಕ್ತ್ಯಾದರಗಳಿಂದ ಮೆಲ್ಲಗೆ ತನ್ನ ಗುರುವನ್ನು ನೋಡುತ್ತಾ ಗುರುವಿನ ಪಾದಕಮಲಗಳ ಸಮೀಪದಲ್ಲಿ ಕೈಮುಗಿದುಕೊಂಡು ನಿಂತುಕೊಳ್ಳಬೇಕು.

೮೧–೮೨. ಸನ್ಯಾಸಕರ್ಮಗಳನ್ನು ಪ್ರಾರಂಭಿಸುವುದಕ್ಕೆ ಮೊದಲೇನೇ ಮಂಗಳಕರವಾದ ಗೋಮಯವನ್ನು ತಂದು ದಪ್ಪ ನೆಲ್ಲಿಯಕಾಯಿನ ಪ್ರಮಾಣದಲ್ಲಿ ಉಂಡೆಗಳನ್ನು ಮಾಡಿ ಒಣಗಿಸಬೇಕು. ಸೂರ್ಯನಕಿರಣಗಳಿಂದಲೇ ಒಣಗಿದ ಆ ಉಂಡೆಗಳನ್ನು ಹೋಮಕ್ಕೆ ಸಿದ್ಧಪಡಿಸಿದ ಅಗ್ನಿಯ ಮಧ್ಯದಲ್ಲಿ, ಹೋಮಕ್ಕಿಂತಲೂ ಮೊದಲೇನೇ ಹಾಕಿ, ಹೋಮವು ಪೂರ್ಣವಾದನಂತರ ಅದರ ಭಸ್ಮವನ್ನು ತೆಗೆದುಕೊಂಡು ಪ್ರತ್ಯೇಕವಾಗಿರಿಸಿಕೊಳ್ಳಬೇಕು.

ತತೋ ಗುರುಸ್ಸಮಾದಾಯ ವಿರಜಾನಲಜಂ ಸಿತಂ ।
ಭಸ್ಮ ತೇನೈವ ತಂ ಶಿಷ್ಯಮಗ್ನಿರಿತ್ಯಾದಿಭಿಃ ಕ್ರಮಾತ್ ॥ ೮೩ ॥

ಮಂತ್ರೈರಂಗಾನಿ ಸಂಸ್ಪೃಶ್ಯ ಮೂರ್ಧಾದಿಚರಣಾಂತತಃ ।
ಈಶಾನಾದ್ಯೈಃ ಪಂಚಮಂತ್ರೈಃ ಶಿರ ಆರಭ್ಯ ಸರ್ವತಃ ॥ ೮೪ ॥

ಸಮುದ್ಧೃತ್ಯ ವಿಧಾನೇನ ತ್ರಿಪುಂಡ್ರಂ ಧಾರಯೇತ್ತತಃ ।
ತ್ರಿಯಾಯುಷೈಸ್ತ್ರ್ಯಂಬಕೈಶ್ಚ ಮೂರ್ಧ್ನ ಆರಭ್ಯ ಚ ಕ್ರಮಾತ್ ॥ ೮೫ ॥

ತತಸ್ಸದ್ಭಕ್ತಿಯುಕ್ತೇನ ಚೇತಸಾ ಶಿಷ್ಯಸತ್ತಮಃ ।
ಹೃತ್ಪಂಕಜೇ ಸಮಾಸೀನಂ ಧ್ಯಾಯೇಚ್ಛಿವಮುಮಾಸಖಂ ॥ ೮೬ ॥

ಹಸ್ತಂ ನಿಧಾಯ ಶಿರಸಿ ಶಿಷ್ಯಸ್ಯ ಸ ಗುರುರ್ವದೇತ್ ।
ತ್ರಿವಾರಂ ಪ್ರಣವಂ ದಕ್ಷಕರ್ಣೇ ಋಷ್ಯಾದಿಸಂಯುತಂ ॥ ೮೭ ॥

---

೮೩-೮೫. ಬಳಿಕ ಗುರುವು, ವಿರಜಾಗ್ನಿಯಿಂದುಂಟಾದ ಆ ಭಸ್ಮವನ್ನು ತೆಗೆದುಕೊಂಡು ಆ ಭಸ್ಮದಿಂದಲೇ ಆ ಶಿಷ್ಯನನ್ನು "ಅಗ್ನಿರಿತಿ ಭಸ್ಮ" ಇವೇ ಮೊದಲಾದ ಮಂತ್ರಗಳಿಂದ ಅವನ ತಲೆ ಮೊದಲುಗೊಂಡು ಕಾಲಿನವರೆಗೂ, ಅಂಗಗಳೆಲ್ಲಕ್ಕೂ ಧಾರಣೆಯನ್ನು ಮಾಡಿಸಿ, ಈಶಾನವೇ ಮೊದಲಾದ ಐದುಮಂತ್ರಗಳಿಂದ, ಶಾಸ್ತ್ರ ಕ್ರಮವಾಗಿ ತಲೆಯುಮೊದಲುಗೊಂಡು ಎಲ್ಲಾ ಕಡೆಯಲ್ಲಿಯೂ, ತ್ರಿಯಾಯುಷ ಮಂತ್ರದಿಂದಲೂ, ತ್ರಿಯಂಬಕಮಂತ್ರದಿಂದಲೂ, ಕ್ರಮವಾಗಿ ತ್ರಿಪುಂಡ್ರವನ್ನು ಧಾರಣೆ ಮಾಡಿಸಬೇಕು.

೮೬. ಶ್ರೇಷ್ಠನಾದ ಆ ಶಿಷ್ಯನು ಭಕ್ತಿಯಿಂದ ತನ್ನ ಹೃದಯಕಮಲದಲ್ಲಿರುವ ಪಾರ್ವತೀಕಾಂತನಾದ ಶಿವನನ್ನು ಧ್ಯಾನಮಾಡಬೇಕು.

೮೭-೮೯. ಆ ಗುರವು ಶಿಷ್ಯನ ತಲೆಯಮೇಲೆ ಕೈಯ್ಯನ್ನು ಇರಿಸಿ, ಅವನ ಬಲಗಡೆಯ ಕಿವಿಯಲ್ಲಿ ಋಷಿ ದೇವತಾ ಛಂದಸ್ಸು ಇವುಗಳಿಂದ ಕೂಡಿದ ಪ್ರಣವ ಮಂತ್ರವನ್ನು ಮೂರುಸಾರಿ ಉಪದೇಶಮಾಡಬೇಕು. ಹಾಗೆಯೇ ಗುರುವು ಆ ಪ್ರಣವಮಂತ್ರದ ಆರು ವಿಧವಾದ ಅರ್ಥಗಳನ್ನು ಶಿಷ್ಯನಿಗೆ ಉಪದೇಶಮಾಡಿದನಂತರ

ತತಃ ಕೃತ್ವಾ ಚ ಕರುಣಾಂ ಪ್ರಣವಸ್ಯಾರ್ಥಮಾದಿಶೇತ್ ।
ಷಡ್ವಿಧಾರ್ಥಪರಿಜ್ಞಾನಸಹಿತಂ ಗುರುಸತ್ತಮಃ ॥ ೮೮ ॥

ದ್ವಿಷಟ್ಪ್ರಕಾರಂ ಸ ಗುರುಂ ಪ್ರಣಮೇದ್ಭುವಿ ದಂಡವತ್ ।
ತದಧೀನೋ ಭವೇನ್ನಿತ್ಯಂ ನಾನ್ಯತ್ಕರ್ಮ ಸಮಾಚರೇತ್ ॥ ೮೯ ॥

ತದಾಜ್ಞಯಾ ತತಃ ಶಿಷ್ಯೋ ವೇದಾಂತಾರ್ಥಾನುಸಾರತಃ ।
ಶಿವಜ್ಞಾನಪರೋ ಭೂಯಾತ್ಸಗುಣಾಗುಣಭೇದತಃ ॥ ೯೦ ॥

ತತಸ್ತೇನೈವ ಶಿಷ್ಯೇಣ ಶ್ರವಣಾದ್ಯಂಗಪೂರ್ವಕಂ ।
ಪ್ರಾಭಾತಿಕಾದ್ಯನುಷ್ಠಾನಂ ಜಪಾಂತೇ ಕಾರಯೇದ್ಗುರುಃ ॥ ೯೧ ॥

ಪೂಜಾಂ ಚ ಮಂಡಲೇ ತಸ್ಮಿನ್ಕೈಲಾಸಪ್ರಸ್ತರಾಹ್ವಯೇ ।
ಶಿವೋದಿತೇನ ಮಾರ್ಗೇಣ ಶಿಷ್ಯಸ್ತತ್ರೈವ ಪೂಜಯೇತ್ ॥ ೯೨ ॥

ದೇವಂ ನಿತ್ಯಮಶಕ್ತಶ್ಚೇತ್ಪೂಜಿತುಂ ಗುರಣಾ ಶುಭಂ ।
ಸ್ಫಾಟಿಕಂ ಪೀಠಕೋಪೇತಂ ಗೃಹ್ಣೀಯಾಲ್ಲಿಂಗಮೈಶ್ವರಂ ॥ ೯೩ ॥

---

ಶಿಷ್ಯನು ಗುರುವಿಗೆ ಹನ್ನೆರಡುಸಾರಿ ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕಾರವನ್ನು ಮಾಡಿ, ಯಾವಾಗಲೂ ಅವನಿಗೆ ಅಧೀನನಾಗಿರುತ್ತಾ ಇರಬೇಕೇ ಹೊರತು ಅವನ ಅಪ್ಪಣೆಯಿಲ್ಲದೆ ಬೇರೆ ಯಾವ ಕೆಲಸವನ್ನೂ ಮಾಡಕೂಡದು.

೯೦-೯೧. ಅನಂತರ ಶಿಷ್ಯನು ಆ ಗುರುವಿನ ಆಜ್ಞಾನುಸಾರವಾಗಿ ವೇದಾಂತದ ಅರ್ಥವನ್ನು ಮೀರದಂತೆ, ಸಗುಣ ಮತ್ತು ನಿರ್ಗುಣರೂಪದಿಂದ ಇರುವ ಶಿವಜ್ಞಾನವನ್ನು ಹೊಂದುವುದರಲ್ಲಿ ಆಸಕ್ತನಾಗಿರಬೇಕು. ಶಿಷ್ಯನು ಸ್ನಾನಜಪಾದಿ ಪ್ರಾತರಾಹ್ನಿಕಕ್ರಿಯೆಗಳನ್ನು ಮಾಡಿ ಮುಗಿಸಿದನಂತರ ಗುರುವು ಆ ಶಿಷ್ಯನಿಂದ ವೇದಾಂತಶಾಸ್ತ್ರದ ಶ್ರವಣಮನನವೇ ಮೊದಲಾದುವುಗಳನ್ನು ಮಾಡಿಸಬೇಕು.

೯೨-೯೩. ಕೈಲಾಸಪ್ರಸ್ತರವೆಂದು ಹೆಸರುಳ್ಳ ಮಂಡಲದಲ್ಲಿ ಶಿವನಿಂದ ಹಿಂದೆ ಹೇಳಲ್ಪಟ್ಟ ಕ್ರಮವನ್ನನುಸರಿಸಿ ಶಿಷ್ಯನು ಪೂಜೆಯನ್ನು ಮಾಡಬೇಕು. ಆ ಮಾರ್ಗದಿಂದ ಪ್ರತಿನಿತ್ಯವೂ, ಪೂಜೆಮಾಡಲು ಅಶಕ್ತನಾಗಿದ್ದರೆ ಗುರುವಿನಿಂದ ಸ್ಫಟಿಕದ ಪೀಠಸಹಿತವಾಗಿರುವ ಶಿವಲಿಂಗವನ್ನು ತೆಗೆದುಕೊಂಡು ಪೂಜಿಸಬೇಕು. ಷಡ್ಗು

ವರಂ ಪ್ರಾಣಪರಿತ್ಯಾಗಶ್ಛೇದನಂ ಶಿರಸೋಽಪಿ ವಾ ।
ನ ತ್ವನಭ್ಯರ್ಚ್ಯ ಭುಂಜೀಯಾಂ ಭಗವಂತಂ ತ್ರಿಲೋಚನಂ ॥ ೯೪ ॥

ಏವಂ ತ್ರಿವಾರಮುಚ್ಚಾರ್ಯ ಶಪಥಂ ಗುರುಸನ್ನಿಧೌ ।
ಕುರ್ಯಾದ್ದೃಢಮನಾಶ್ಶಿಷ್ಯಶ್ಶಿವಭಕ್ತಿಂ ಸಮುದ್ವಹನ್ ॥ ೯೫ ॥

ತತ ಏವ ಮಹಾದೇವಂ ನಿತ್ಯಮುದ್ಯುಕ್ತಮಾನಸಃ ।
ಪೂಜಯೇತ್ಪರಯಾ ಭಕ್ತ್ಯಾ ಪಂಚಾವರಣಮಾರ್ಗತಃ ॥ ೯೬ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಪ್ರಣವಾರ್ಥಪದ್ಧತಿವರ್ಣನಂ ನಾಮ ತ್ರಯೋದಶೋಽಧ್ಯಾಯಃ

---

ಸ್ವೈಶ್ವರ್ಯಸಂಪನ್ನನಾಗಿಯೂ, ಮೂರು ಕಣ್ಣುಗಳುಳ್ಳವನಾಗಿಯೂ ಇರುವ ಶಿವನನ್ನು ಪೂಜಿಮಾಡದೆ ಊಟವನ್ನು ಮಾಡುವುದಿಲ್ಲ. ನನ್ನ ತಲೆಯು ಕತ್ತರಿಸಿಹೋದರೂ, ನನ್ನ ಪ್ರಾಣವನ್ನು ಬಿಡಬೇಕಾಗಿ ಬಂದರೂ ಶಿವಪೂಜೆಯನ್ನು ಮಾಡದೆ ಊಟಮಾಡುವುದಿಲ್ಲ ಎಂದು ಗುರುವಿನ ಸನ್ನಿಧಿಯಲ್ಲಿ ಮೂರುಸಾರಿ ಪ್ರತಿಜ್ಞೆಮಾಡಿ ಹೇಳಿ, ಶಿಷ್ಯನು ದೃಢವಾದ ಮನಸ್ಸಿನಿಂದ ಶಿವನಲ್ಲಿ ಭಕ್ತಿಯನ್ನಿಡಬೇಕು.

೯೬. ಅದುಮೊದಲುಗೊಂಡು ಶಿಷ್ಯನು ಉತ್ಸಾಹಪೂರ್ವಕವಾಗಿ ಪಂಚಾವರಣವಿಧಿಯನ್ನನುಸರಿಸಿ ಭಕ್ತಿಯಿಂದ ಪ್ರತಿದಿನವೂ ಶಿವನನ್ನು ಪೂಜಿಸುತ್ತಿರಬೇಕು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಪ್ರಣವಾರ್ಥಪದ್ಧತಿ ವರ್ಣನವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀಶಿವಮಹಾಪುರಾಣೇ

## ಕೈಲಾಸಸಂಹಿತಾಯಾಂ

## ಚತುರ್ದಶೋಽಧ್ಯಾಯಃ



॥ ವಾಮದೇವ ಉವಾಚ ॥

ಭಗವನ್ಷಣ್ಮುಖಾಶೇಷವಿಜ್ಞಾನಾಮೃತವಾರಿಧೇ ।
ವಿಶ್ವಾಮರೇಶ್ವರಸುತ ಪ್ರಣತಾರ್ತಿಪ್ರಭಂಜನ ॥ ೧ ॥

ಷಡ್ವಿಧಾರ್ಥಪರಿಜ್ಞಾನಮಿಷ್ಟದಂ ಕಿಮುದಾಹೃತಂ ।
ಕೇ ತತ್ರ ಷಡ್ವಿಧಾ ಅರ್ಥಾಃ ಪರಿಜ್ಞಾನಂ ಚ ಕಿಂ ಪ್ರಭೋ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯವು.

೧-೨. ವಾಮದೇವಋಷಿಯು ಪ್ರಶ್ನೆ ಮಾಡುವನು—ಎಲೈ ಷಡ್ಗುಣ್ಯೈಶ್ವರ್ಯಸಂಪನ್ನನಾದ ಷಣ್ಮುಖನೇ, ನೀನು ಎಲ್ಲಾ ವಿಧವಾದ ಜ್ಞಾನವೆಂಬ ಅಮೃತಕ್ಕೆ ಸಮುದ್ರದಂತಿರುವೆ. ಎಲ್ಲಾ ದೇವತೆಗಳಿಗೂ ಅಧಿಪನಾದ ಶಿವನಿಗೆ ಪ್ರಿಯಪುತ್ರನಾಗಿರುತ್ತೀಯೆ. ನಮಸ್ಕಾರವನ್ನು ಮಾಡಿದವರ ಸಂಕಟವನ್ನು ನಾಶಮಾಡುತ್ತಿರುವೆ. ಈಗ ನೀನು ಪ್ರಣವಮಂತ್ರಕ್ಕೆ ಆರು ವಿಧವಾದ ಅರ್ಥಗಳಿರುವುವೆಂದು ಹೇಳಿದೆಯಷ್ಟೆ? ಆ ಆರು ಅರ್ಥಗಳಾವುವು? ಆ ಅರ್ಥದ ಪರಿಜ್ಞಾನವೆಂದರೇನು? ಆ ಪರಿಜ್ಞಾನದಿಂದ ಲಭಿಸುವ ಫಲವೇನು? ಪ್ರಣವಮಂತ್ರಕ್ಕೆ ಪ್ರತಿಪಾದ್ಯನಾದ

ಪ್ರತಿಪಾದ್ಯಶ್ಚ ಕಸ್ತಸ್ಯ ಪರಿಜ್ಞಾನೇ ಚ ಕಿಂ ಫಲಂ ।
ಏತತ್ಸರ್ವಂ ಸಮಾಚಕ್ಷ್ವ ಯದ್ಯತ್ಪೃಷ್ಟಂ ಮಯಾ ಗುಹ ॥ ೩ ॥

ಏತಮರ್ಥಮವಿಜ್ಞಾಯ ಪಶುಶಾಸ್ತ್ರವಿಮೋಹಿತಃ ।
ಅದ್ಯಾಪ್ಯಹಂ ಮಹಾಸೇನ ಭ್ರಾಂತಶ್ಚ ಶಿವಮಾಯಯಾ ॥ ೪ ॥

ಅಹಂ ಶಿವಪದದ್ವಂದ್ವಜ್ಞಾನಾಮೃತರಸಾಯನಂ ।
ಪೀತ್ವಾ ವಿಗತಸಂಮೋಹೋ ಭವಿಷ್ಯಾಮಿ ಯಥಾ ತಥಾ ॥ ೫ ॥

ಕೃಪಾಮೃತಾರ್ದ್ರಯಾ ದೃಷ್ಟ್ಯಾ ವಿಲೋಕ್ಯ ಸುಚಿರಂ ಮಯಿ ।
ಕರ್ತವ್ಯೋಽನುಗ್ರಹಃ ಶ್ರೀಮತ್ಪಾದಾಬ್ಜಶರಣಾಗತೇ ॥ ೬ ॥

ಇತಿ ಶ್ರುತ್ವಾ ಮುನೀಂದ್ರೋಕ್ತಂ ಜ್ಞಾನಶಕ್ತಿಧರೋ ವಿಭುಃ ।
ಪ್ರಾಹಾನ್ಯದರ್ಶನಮಹಾಸಂತ್ರಾಸಜನಕಂ ವಚಃ ॥ ೭ ॥

---

ದೇವತೆ ಯಾರು ? ಇವೆಲ್ಲವನ್ನೂ ಮತ್ತು ನಾನು ಕೇಳುವ ಇತರ ಪ್ರಶ್ನೆಗಳೆಲ್ಲಕ್ಕೂ ಅರ್ಥವಿವರಣೆಯನ್ನು ದಯವಿಟ್ಟು ಹೇಳಬೇಕು.

೪. ಎಲೈ ಮಹಾಸೇನನೇ, ನಾನು ಈ ಅರ್ಥಗಳನ್ನು ತಿಳಿಯದೆ ಇರುವುದರಿಂದ ಈ ಪಾಶುಪತ ಶಾಸ್ತ್ರದಲ್ಲಿ ತಿಳುವಳಿಕೆಯಿಲ್ಲದವನಾಗಿ ಈಗಲೂ ಶಿವನ ಮಾಯೆಯಿಂದ ಭ್ರಾಂತನಾಗಿರುತ್ತೇನೆ.

೫–೬. ಎಲೈ ಪ್ರಭುವೇ, ನೀನು ನನ್ನನ್ನು ಕೊಂಚಮಟ್ಟಿಗಾದರೂ, ದಯೆಯಿಂದಿರುವ ಅಮೃತದೃಷ್ಟಿಯಿಂದ ನೋಡಿ, ನಿನ್ನ ಪಾದಕಮಲಗಳಲ್ಲಿ ಶರಣಾಗತನೆಂದು ತಿಳಿದು ನನ್ನಲ್ಲಿ ಅನುಗ್ರಹಮಾಡಿ, ನಾನು ಶಿವನ ಪಾದಕಮಲಗಳ ಜ್ಞಾನಾಮೃತವೆಂಬ ರಸಾಯನವನ್ನು ಕುಡಿದು, ಅಜ್ಞಾನವನ್ನು ನಾಶಮಾಡಿಕೊಂಡು ಜ್ಞಾನವುಳ್ಳವನಾಗಲು ಹೇಗೆ ಉಪದೇಶಮಾಡಬೇಕೋ ಆ ರೀತಿಯಾಗಿ ಉಪದೇಶವನ್ನು ಮಾಡು ಎಂದು ಪ್ರಾರ್ಥಿಸಿದನು.

೭. ಜ್ಞಾನಶಕ್ತಿಯನ್ನು ಧರಿಸಿರುವ ಪ್ರಭುವಾದ ಷಣ್ಮುಖನು, ಆ ವಾಮದೇವ ಋಷಿಯು ಹೇಳಿದ ಈ ಮಾತುಗಳನ್ನು ಕೇಳಿ, ಬೇರೆ ಶಾಸ್ತ್ರವನ್ನು ಓದುವುದರಲ್ಲಿ ಅಪೇಕ್ಷೆಯು ಹುಟ್ಟದಿರುವ ಹಾಗೆ ಪ್ರಣವಾರ್ಥವನ್ನು ವಿವರಿಸತೊಡಗಿದನು.

॥ ಸುಬ್ರಹ್ಮಣ್ಯ ಉವಾಚ ॥

ಶ್ರೂಯತಾಂ ಮುನಿಶಾರ್ದೂಲ ತ್ವಯಾ ಯತ್ಪೃಷ್ಟಮಾದರಾತ್ ।
ಸಮಷ್ಟಿವ್ಯಷ್ಟಿಭಾವೇನ ಪರಿಜ್ಞಾನಂ ಮಹೇಶಿತುಃ ॥ ೮ ॥

ಪ್ರಣವಾರ್ಥಪರಿಜ್ಞಾನರೂಪಂ ತದ್ವಿಸ್ತರಾದಹಂ ।
ವದಾಮಿ ಷಡ್ವಿಧಾರ್ಥೈಕ್ಯಪರಿಜ್ಞಾನೇನ ಸುವ್ರತ ॥ ೯ ॥

ಪ್ರಥಮೋ ಮಂತ್ರರೂಪಃ ಸ್ಯಾದ್ದ್ವಿತೀಯೋ ಮಂತ್ರಭಾವಿತಃ ।
ದೇವತಾರ್ಥಸ್ತೃತೀಯೋಽರ್ಥಃ ಪ್ರಪಂಚಾರ್ಥಸ್ತತಃ ಪರಂ ॥ ೧೦ ॥

ಚತುರ್ಥಃ ಪಂಚಮಾರ್ಥಸ್ಸ್ಯಾದ್ಗುರುರೂಪಪ್ರದರ್ಶಕಃ ।
ಷಷ್ಠಶ್ಶಿಷ್ಯಾತ್ಮರೂಪೋಽರ್ಥಃ ಷಡ್ವಿಧಾರ್ಥಾಃ ಪ್ರಕೀರ್ತಿತಾಃ ॥ ೧೧ ॥

ತತ್ರ ಮಂತ್ರಸ್ವರೂಪಂ ತೇ ವದಾಮಿ ಮುನಿಸತ್ತಮ ।
ಯೇನ ವಿಜ್ಞಾತಮಾತ್ರೇಣ ಮಹಾಜ್ಞಾನೀ ಭವೇನ್ನರಃ ॥ ೧೨ ॥

---

೮-೯. ಎಲೈ ಋಷಿಶ್ರೇಷ್ಠನೇ, ನೀನು ಕೇಳಿದ ಪರಮೇಶ್ವರನ ಸಂಬಂಧವಾದ ಸಮಷ್ಟಿವ್ಯಷ್ಟಿಭಾವದಿಂದ ಇರುವ ಪ್ರಣವದ ಆರು ವಿಧವಾದ ಅರ್ಥಗಳ ಜ್ಞಾನವನ್ನು ತಿಳಿಸುವೆನು. ಮತ್ತು ಪ್ರಣವಮಂತ್ರದ ಆರು ವಿಧವಾದ ಅರ್ಥಗಳ ಜ್ಞಾನದಿಂದ ಉಂಟಾಗುವ ಷಡ್ವಿಧೈಕ್ಯ ಕ್ರಮವನ್ನೂ ವಿಸ್ತಾರವಾಗಿ ಹೇಳುವೆನು. ಆದರದಿಂದ ಕೇಳು.

೧೦-೧೧. ಈ ಆರು ವಿಧಗಳಲ್ಲಿ ಒಂದನೆಯದು ಮಂತ್ರರೂಪದಿಂದ ಇರುವುದು. ಎರಡನೆಯದು ಮಂತ್ರದಲ್ಲಿ ಪ್ರತಿಪಾದಿತವಾದ ಅರ್ಥವು. ದೇವತಾರೂಪವನ್ನು ತಿಳಿಯುವುದು ಮೂರನೆಯ ಅರ್ಥವು. ಪ್ರಪಂಚದ ವಿಷಯವಾದ ಅರ್ಥವು. ನಾಲ್ಕನೆಯದು. ಗುರುವಿನ ರೂಪವನ್ನು ತಿಳಿಸುವುದು ಐದನೆಯ ಅರ್ಥವು. ಶಿಷ್ಯನ ರೂಪವನ್ನು ತಿಳಿಸುವುದು ಆರನೆಯ ಅರ್ಥವು. ಈ ಪ್ರಕಾರದಿಂದ ಪ್ರಣವ ಮಂತ್ರದ ಆರು ವಿಧವಾದ ಅರ್ಥಗಳಿರುವುವು.

೧೨-೧೩. ಎಲೈ ಮುನೀಶ್ವರನೇ ಕೇಳು. ಅದರಲ್ಲಿ ಮಂತ್ರದ ಸ್ವರೂಪವೆಂಬ ಮೊದಲನೆಯ ಅರ್ಥವನ್ನು ವಿವರಿಸುವೆನು. ಅದನ್ನು ತಿಳಿದನಂತರ ಮನುಷ್ಯನು ಬಹಳ ಜ್ಞಾನಿಯಾಗುವನು. ಒಂದನೆಯ ಸ್ವರವು (ಅ) ಐದನೆಯ ಸ್ವರವು

ಆದ್ಯಸ್ಸ್ವರಃ ಪಂಚಮಶ್ಚ ಪಂಚಮೂಂತಸ್ತತಃ ಪರಃ ।
ಬಿಂದುನಾದೌ ಚ ಪಂಚಾರ್ಣಾಃ ಪ್ರೋಕ್ತಾ ವೇದೈರ್ನ ಚಾನ್ಯಥಾ ॥ ೧೩ ॥

ಏತತ್ಸಮಷ್ಟಿರೂಪೋ ಹಿ ವೇದಾದಿಸ್ಸಮುದಾಹೃತಃ ।
ನಾದಸ್ಸರ್ವಸಮಷ್ಟಿಃ ಸ್ಯಾದ್ಬಿಂದ್ವಾಢ್ಯಂ ಯಚ್ಚತುಷ್ಟಯಂ ॥ ೧೪ ॥

ವ್ಯಷ್ಟಿರೂಪೇಣ ಸಂಸಿದ್ಧಂ ಪ್ರಣವೇ ಶಿವವಾಚಕೇ ।
ಯಂತ್ರರೂಪಂ ಶೃಣು ಪ್ರಾಜ್ಞ ಶಿವಲಿಂಗಂ ತದೇವ ಹಿ ॥ ೧೫ ॥

ಸರ್ವಾಧಸ್ತಾಲ್ಲಿಖೇತ್ಪೀಠಂ ತದೂರ್ಧ್ವಂ ಪ್ರಥಮಂ ಸ್ವರಂ ।
ಉವರ್ಣಂ ಚ ತದೂರ್ಧ್ವಸ್ಥಂ ಪವರ್ಗಾಂತಂ ತದೂರ್ಧ್ವಗಂ ॥ ೧೬ ॥

ತನ್ಮಸ್ತಕಸ್ಥಂ ಬಿಂದುಂ ಚ ತದೂರ್ಧ್ವಂ ನಾದಮಾಲಿಖೇತ್ ।
ಯಂತ್ರೇ ಸಂಪೂರ್ಣತಾಂ ಯಾತೇ ಸರ್ವಕಾಮಃ ಪ್ರಸಿಧ್ಯತಿ ॥ ೧೭ ॥

---

(ಉ) ಅದರ ಮುಂದೆ ಐದನೆಯ ವರ್ಗದ ಕೊನೆಯ ವರ್ಣವು. (ಮಕಾರ) ಬಿಂದು ನಾದಗಳು (ಂ + ನಾದ) ಎಂದು ಎಲ್ಲವೂ ಸೇರಿ ಐದು ಅಕ್ಷರಗಳು ಪ್ರಣವಮಂತ್ರ ದಲ್ಲಿರುವುವು ಎಂದು ವೇದಗಳಲ್ಲಿ ಹೇಳಿರುವುದು. ಇದಕ್ಕೆ ಬೇರೆಯ ವಿಧವಾಗಿ ಇಲ್ಲ. ಇವುಗಳ ಸಮಷ್ಟಿಯು (ಅ + ಉ + ಮ್ + ಂ + ನಾದ = ಓಂ) ವೇದಾದಿಯೆ ನಿಸುವುದು ಎಂದರೆ ವೇದಗಳಿಗೆ ಆದಿಯಾದ ಸ್ವರವೆಂದು ಹೇಳಲ್ಪಟ್ಟಿರುವುದು. ಬಿಂದುವಿನಿಂದ ಕೂಡಿರುವ ನಾಲ್ಕು ವರ್ಣಗಳು ಸಮಷ್ಟಿಯ ರೂಪದಿಂದ ಎಂದರೆ ಒಟ್ಟಾಗಿ ಇರುವುದಕ್ಕೆ ನಾದವೆಂದು ಹೆಸರು. ಇವುಗಳು ಬೇರೆಬೇರೆಯಾಗಿದ್ದರೆ ವ್ಯಷ್ಟಿಯೆಂದೆನಿಸಿಕೊಳ್ಳುವವು. ಎಲೈ ಪ್ರಾಜ್ಞನಾದ ವಾಮದೇವಋಷಿಯೇ ಕೇಳು, ಇನ್ನು ಪ್ರಣವಯಂತ್ರದ ರೂಪವನ್ನು ಹೇಳುವೆನು. ಅದೇ ಶಿವಲಿಂಗವಾಗುವುದು.

೧೬-೧೭. ಎಲ್ಲಕ್ಕಿಂತಲೂ ಕೆಳಭಾಗದಲ್ಲಿ ಪೀಠವನ್ನು ಬರೆಯಬೇಕು. ಅದರ ಮೇಲುಗಡೆಯಲ್ಲಿ ಮೊದಲನೆಯ ಸ್ವರವನ್ನು [ಅ] ಉಕಾರವನ್ನೂ ಬರೆದು ಅದರ ಮೇಲೆ [ಅನುಸ್ವಾರವನ್ನೂ] ಪವರ್ಗದ ಕೊನೆಯ ಅಕ್ಷರವನ್ನೂ, [ಮ] ಬರೆದು ಅದರಮೇಲೆ ಬಿಂದುವನ್ನೂ ಅದರಮೇಲೆ ನಾದವನ್ನೂ ಬರೆಯಬೇಕು. ಹೀಗೆ ಬರೆದ ಯಂತ್ರವು ಸಂಪೂರ್ಣವಾದಮೇಲೆ ಎಲ್ಲಾ ವಿಧವಾದ ಇಷ್ಟವೂ ಆ ಯಂತ್ರದಿಂದ

ಏವಂ ಯಂತ್ರಂ ಸಮಾಲಿಖ್ಯ ಪ್ರಣವೇನೈವ ವೇಷ್ಟಯೇತ್ ।
ತದುತ್ಥೇನೈವ ನಾದೇನ ವಿದ್ಯಾನ್ನಾದಾವಸಾನಕಂ ॥ ೧೮ ॥

ದೇವತಾರ್ಥಂ ಪ್ರವಕ್ಷ್ಯಾಮಿ ಗೂಢಂ ಸರ್ವತ್ರ ಯನ್ಮುನೇ ।
ತವ ಸ್ನೇಹಾದ್ವಾಮದೇವ ಯಥಾ ಶಂಕರಭಾಷಿತಂ ॥ ೧೯ ॥

ಸದ್ಯೋಜಾತಂ ಪ್ರಪದ್ಯಾಮೀತ್ಯುಪಕ್ರಮ್ಯ ಸದಾಶಿವೋಂ ।
ಇತಿ ಪ್ರಾಹ ಶ್ರುತಿಸ್ತಾರಂ ಬ್ರಹ್ಮಪಂಚಕವಾಚಕಂ ॥ ೨೦ ॥

ವಿಜ್ಞೇಯಾ ಬ್ರಹ್ಮರೂಪಿಣ್ಯಸ್ಸೂಕ್ಷ್ಮಾಃ ಪಂಚೈವ ದೇವತಾಃ ।
ಏತಾ ಏವ ಶಿವಸ್ಯಾಪಿ ಮೂರ್ತಿತ್ವೇನೋಪಬೃಂಹಿತಾಃ ॥ ೨೧ ॥

---

ಸಿದ್ಧಿಸುವುದು. ಹೀಗೆಯಂತ್ರವನ್ನು ಬರೆದು ಅವನ್ನು ಪ್ರಣವದಿಂದಲೇ ವೇಷ್ಟನೆಯನ್ನೂ ಮಾಡತಕ್ಕದ್ದು. ಅದರಿಂದ ಉಂಟಾದ ನಾದದಿಂದಲೇ ನಾದದ ಕೊನೆಯನ್ನೂ ತಿಳಿಯಬೇಕು.

೧೯. ಎಲೈ ಋಷಿಯೇ ಕೇಳು, ನಿನ್ನಮೇಲಿರುವ ಸ್ನೇಹದಿಂದ ಶಿವನು ನನಗೆ ಹೇಳಿರುವ ದೇವತಾರೂಪವಾದ ಅರ್ಥವನ್ನು ಹೇಳುವೆನು ಈ ಅರ್ಥವು ಎಲ್ಲಾ ಕಡೆಯಲ್ಲಿಯೂ ಬಹು ರಹಸ್ಯವಾಗಿ ಕಾಪಾಡಲ್ಪಟ್ಟಿರುವುದು.

೨೦-೨೧. ವೇದವು ಘಟ್ಟಿಯಾಗಿರುವ ಧ್ವನಿಯಿಂದ "ಸದ್ಯೋಜಾತಂ ಪ್ರಪದ್ಯಾಮಿ" ಎಂಬ ಮಂತ್ರವನ್ನು ಪ್ರಾರಂಭಿಸಿ "ಸದಾಶಿವೋಂ" ಎಂಬುದಾಗಿ ಪಂಚಬ್ರಹ್ಮದೇವತೆಗಳನ್ನು ಬೋಧಿಸುವ ಮಂತ್ರಗಳನ್ನು ಹೇಳುತ್ತಿರುವುದು. [೧] ಸದ್ಯೋಜಾತಂ ಪ್ರಪದ್ಯಾಮಿ............ನಮಃ [೨] ವಾಮದೇವಾಯ............ನಮಃ [೩] ಅಘೋರೇಭ್ಯೋ............ರೂಪೇಭ್ಯಃ [೪] ತತ್ಪುರುಷಾಯ............ಪ್ರಚೋದಯಾತ್ [೫] ಈಶಾನಸ್ಸರ್ವವಿದ್ಯಾನಾಂ............ಸದಾಶಿವೋಂ [ತೈ. ಉ. ೪-೧೭ ರಿಂದ ೨೧] ಈ ಐದು ಮಂತ್ರಗಳೂ ಪಂಚಬ್ರಹ್ಮಮಂತ್ರಗಳು. ಈ ಐದು ಮಂತ್ರಗಳೂ ಶಿವನ ಐದು ಮೂರ್ತಿಗಳನ್ನು ಪ್ರತಿಪಾದಿಸುವವು. ಈ ಐದು ದೇವತೆಗಳೂ ಸೂಕ್ಷ್ಮವಾದ ಆಕಾರವನ್ನು ಹೊಂದಿ ಬ್ರಹ್ಮರೂಪದಿಂದಿರುವರು. ಇವರುಗಳೇ ಶಿವನ ಆಕಾರದಿಂದ ಇರುವವರೆಂದು ತಿಳಿಯಬೇಕು.

ಶಿವಸ್ಯ ವಾಚಕೋ ಮಂತ್ರಶ್ಶಿವಮೂರ್ತೇಶ್ಚ ವಾಚಕಃ ।
ಮೂರ್ತಿಮೂರ್ತಿಮತೋರ್ಭೇದೋ ನಾನ್ಯಂತಂ ವಿದ್ಯತೇ ಯತಃ ॥ ೨೨ ॥

ಈಶಾನಮುಕುಟೋಪೇತ ಇತ್ಯಾರಭ್ಯ ಪುರೋದಿತಾಃ ।
ಶಿವಸ್ಯ ವಿಗ್ರಹಃ ಪಂಚವಕ್ತ್ರಾಣಿ ಶೃಣು ಸಾಂಪ್ರತಂ ॥ ೨೩ ॥

ಪಂಚಮಾದಿ ಸಮಾರಭ್ಯ ಸದ್ಯೋಜಾತಾದ್ಯನುಕ್ರಮಾತ್ ।
ಊರ್ಧ್ವಾಂತಮೀಶಾನಾಂತಂ ಚ ಮುಖಪಂಚಕಮೀರಿತಂ ॥ ೨೪ ॥

ಈಶಾನಸ್ಯೈವ ದೇವಸ್ಯ ಚತುರ್ವ್ಯೂಹಪದೇ ಸ್ಥಿತಂ ।
ಪುರುಷಾದ್ಯಂ ಚ ಸದ್ಯಾಂತಂ ಬ್ರಹ್ಮರೂಪಂ ಚತುಷ್ಟಯಂ ॥ ೨೫ ॥

ಪಂಚಬ್ರಹ್ಮಸಮಷ್ಟಿಸ್ಸ್ಯಾದೀಶಾನಂ ಬ್ರಹ್ಮ ವಿಶ್ರುತಂ ।
ಪುರುಷಾದ್ಯಂ ತು ತದ್ವ್ಯಷ್ಟಿಸ್ಸದ್ಯೋಜಾತಾಂತಿಕಂ ಮುನೇ ॥ ೨೬ ॥

---

೨೨–೨೪. ಆಕಾರಕ್ಕೂ, ಆಕಾರವುಳ್ಳವನಿಗೂ, ಹೆಚ್ಚು ಭೇದವು ಇಲ್ಲದಿರುವ ಕಾರಣ ಶಿವನಿಗೆ ವಾಚಕವಾದ ಮಂತ್ರವು ಶಿವನಮೂರ್ತಿಗೂ ವಾಚಕವಾಗಿರುವುದು. ಈಶಾನದೇವತೆಯೇ ಕಿರೀಟವು ಎಂದು ಮೊದಲಾಗಿ ಈ ಗ್ರಂಥದಲ್ಲಿ ಹಿಂದೆಯೇ ಹೇಳಿದೆ. ಶಿವನ ಆಕಾರವು ಐದು ಮುಖಗಳಿಂದ ಕೂಡಿರುವುದು ಎಂಬ ವಿಷಯವನ್ನು ನಾನು ಈಗ ವಿವರಿಸುವೆನು. ಅದನ್ನು ಕೇಳು. ಐದನೆಯ ಮುಖವಾದ ಸದ್ಯೋಜಾತದಿಂದ ಮೊದಲುಮಾಡಿಕೊಂಡು ಕ್ರಮವಾಗಿ ಮೇಲುಭಾಗದಲ್ಲಿರುವ ಈಶಾನಮುಖದವರೆಗೆ ಶಿವನಿಗೆ ಐದು ಮುಖಗಳಿರುವುವು.

೨೫-೨೬. ತತ್ಪುರುಷಾದಿಯಾಗಿ, ಸದ್ಯೋಜಾತಾಂತವಾಗಿ ನಾಲ್ಕು ಬ್ರಹ್ಮರೂಪಗಳು ಈಶಾನದೇವನ ಚತುರ್ವ್ಯೂಹವೆನಿಸುವುದು. ಈ ಪ್ರಕಾರವಾಗಿರುವ ಸ್ವರೂಪವನ್ನು ಪಂಚಬ್ರಹ್ಮಸಮಷ್ಟಿ ಎಂತಲೂ, ಈಶಾನವ್ಯೂಹಕ್ಕೆ ಈಶಾನನೇ ಬ್ರಹ್ಮವೆಂತಲೂ ಕರೆಯುವರು. ಈ ವ್ಯೂಹದಲ್ಲಿರುವ ತತ್ಪುರುಷನೇ ಮೊದಲಾಗಿ ಸದ್ಯೋಜಾತನೇ ಕೊನೆಯಾಗಿರುವ ಸ್ವರೂಪಗಳು, ಈಶಾನವ್ಯೂಹದ ವ್ಯಷ್ಟಿರೂಪಗಳೆಂದು [ಬೇರೆಬೇರೆ ರೂಪಗಳೆಂದು] ಹೇಳಿಸಿಕೊಳ್ಳುವವು.

ಅನುಗ್ರಹಮಯಂ ಚಕ್ರಮಿದಂ ಪಂಚಾರ್ಥಕಾರಣಂ ।
ಪರಬ್ರಹ್ಮಾತ್ಮಕಂ ಸೂಕ್ಷ್ಮಂ ನಿರ್ವಿಕಾರಮನಾಮಯಂ ॥ ೨೭ ॥

ಅನುಗ್ರಹೋಽಪಿ ದ್ವಿವಿಧಸ್ತಿರೋಭಾವಾದಿಗೋಚರಃ ।
ಪ್ರಭುಶ್ಚಾನ್ಯಸ್ತು ಜೀವಾನಾಂ ಪರಾವರವಿಮುಕ್ತಿದಃ ॥ ೨೮ ॥

ಏತತ್ಸದಾಶಿವಸ್ಯೈವ ಕೃತ್ಯದ್ವಯಮುದಾಹೃತಂ ।
ಅನುಗ್ರಹೇಽಪಿ ಸೃಷ್ಟ್ಯಾದಿಕೃತ್ಯಾನಾಂ ಪಂಚಕಂ ವಿಭೋಃ ॥ ೨೯ ॥

ಮುನೇ ತತ್ರಾಪಿ ಸದ್ಯಾದ್ಯಾ ದೇವತಾಃ ಪರಿಕೀರ್ತಿತಾಃ ।
ಪರಬ್ರಹ್ಮಸ್ವರೂಪಾಸ್ತಾಃ ಪಂಚ ಕಲ್ಯಾಣದಾಸ್ಸದಾ ॥ ೩೦ ॥

ಅನುಗ್ರಹಮಯಂ ಚಕ್ರಂ ಶಾಂತ್ಯತೀತಕಲಾಮಯಂ ।
ಸದಾಶಿವಾಧಿಷ್ಠಿತಂ ಚ ಪರಮಂ ಪದಮುಚ್ಯತೇ ॥ ೩೧ ॥

---

೨೭. ಅತಿಸೂಕ್ಷ್ಮವಾದ ಪರಬ್ರಹ್ಮನರೂಪದಿಂದ ಯಾವ ವಿಕಾರವೂ ಇಲ್ಲದೆ, ಯಾವ ವಿಧವಾದ ತೊಂದರೆಯನ್ನೂ ಹೊಂದದೆ ಇರುವ ಈ ಸ್ವರೂಪವು ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹ ಎಂಬ ಐದು ವಿಧವಾದ ಕಾರ್ಯಗಳಿಗೂ ಕಾರಣವಾಗಿ ಅನುಗ್ರಹಮಯವಾದ ಚಕ್ರವೆಂದು ಹೆಸರನ್ನು ಹೊಂದಿರುವುದು.

೨೮. ಅನುಗ್ರಹವೂ ಕೂಡ ತಿರೋಧಾನವೇ ಮೊದಲಾದ ಕ್ರಮಗಳಿಂದ ಎರಡು ವಿಧವಾಗಿರುವುದು. ಜೀವರುಗಳಿಗೆ ಉತ್ತಮವಾದ ಅಥವಾ ಕಡಿಮೆಯಾದ ರೀತಿಯಿಂದ ಮುಕ್ತಿಯನ್ನು ಉಂಟುಮಾಡುವ ಪ್ರಭುವು ಬೇರೆಇರುವನು.

೨೯-೩೦. ಈ ಎರಡು ವಿಧವಾದ ಅಧಿಕಾರಿ ತಾರತಮ್ಯಾನುಸಾರವಾಗಿ ಮುಕ್ತಿಯನ್ನು ಕೊಡುವ ಕೆಲಸವು ಸದಾಶಿವನಿಗೆ ಸಂಬಂಧಪಟ್ಟದ್ದಾಗಿರುವುದು. ಎಲೈ ವಾಮದೇವಮುನಿಯೇ ಕೇಳು, ಈ ವಿಧವಾದ ಅನುಗ್ರಹದಲ್ಲಿಯೂ ಸೃಷ್ಟ್ಯಾದಿ ಕೆಲಸಗಳು ಪ್ರಭುವಾದ ಸದಾಶಿವನಿಗೆ ಸಂಬಂಧಿಸಿರುತ್ತವೆ. ಅದರಲ್ಲಿಯೂ, ಸದ್ಯೋಜಾತಾದಿ ದೇವತೆಗಳೇ ಈ ಕೆಲಸವನ್ನು ಮಾಡುವವರಾಗಿರುವರು. ಇವರುಗಳು ಐದು ಜನರೂ, ಪರಬ್ರಹ್ಮರೂಪದಿಂದ ಇರುವವರಾಗಿ ಯಾವಾಗಲೂ, ಮಂಗಳವನ್ನುಂಟುಮಾಡುವರು.

೩೧-೩೪. ಅನುಗ್ರಹರೂಪವಾದ ಚಕ್ರವು ಶಾಂತ್ಯತೀತವೆಂಬ ಕಲಾಮಯವಾಗಿ, ಸದಾಶಿವನಿಂದ ಕೂಡಿದ್ದಾಗಿ, ಶಿವನ ಪರಮಪದವೆಂಬ ಉತ್ತಮವಾದ ಸ್ಥಾನ

ಏತದೇವ ಪದಂ ಪ್ರಾಪ್ಯಂ ಯತೀನಾಂ ಭಾವಿತಾತ್ಮನಾಂ ।
ಸದಾಶಿವೋಪಾಸಕಾನಾಂ ಪ್ರಣವಾಸಕ್ತಚೇತಸಾಂ ॥ ೩೨ ॥

ಏತದೇವ ಪದಂ ಪ್ರಾಪ್ಯ ತೇನ ಸಾಕಂ ಮುನೀಶ್ವರಾಃ ।
ಭುಕ್ತ್ವಾ ಸುವಿಪುಲಾನ್ಭೋಗಾನ್ದೇವೇನ ಬ್ರಹ್ಮರೂಪಿಣಾ ॥ ೩೩ ॥

ಮಹಾಪ್ರಲಯಸಂಭೂತೌ ಶಿವಸಾಮ್ಯಂ ಭಜಂತಿ ಹಿ ।
ನ ಪತಂತಿ ಪುನಃ ಕ್ವಾಪಿ ಸಂಸಾರಾಬ್ಧೌ ಜನಾಶ್ಚ ತೇ ॥ ೩೪ ॥

ತೇ ಬ್ರಹ್ಮಲೋಕೇ ಇತಿ ಚ ಶ್ರುತಿರಾಹ ಸನಾತನೀ ।
ಐಶ್ವರ್ಯಂ ತು ಶಿವಸ್ಯಾಪಿ ಸಮಷ್ಟಿರಿದಮೇವ ಹಿ ॥ ೩೫ ॥

ಸರ್ವೈಶ್ವರ್ಯೇಣ ಸಂಪನ್ನ ಇತ್ಯಾಹಾಥರ್ವಣೀ ಶಿಖಾ ।
ಸರ್ವೈಶ್ವರ್ಯಪ್ರದಾತೃತ್ವಮಸ್ಯೈವ ಪ್ರವದಂತಿ ಹಿ ॥ ೩೬ ॥

---

ವಾಗಿರುವುದು. ಆತ್ಮಭಾವನೆಯನ್ನು ಹೊಂದಿರುವ ಯತಿಗಳು ಈ ಸ್ಥಾನವನ್ನು ಹೊಂದುವರು. ಪ್ರಣವೋಪಾಸನೆಯಲ್ಲಿ ಆಸಕ್ತರಾದ ಋಷಿಶ್ರೇಷ್ಠರು ಸದಾಶಿವನನ್ನು ಉಪಾಸನೆಮಾಡಿ, ಆ ಸದಾಶಿವನೊಡನೆ ಈ ಸ್ಥಾನವನ್ನು ಹೊಂದುವರು. ಬ್ರಹ್ಮರೂಪದಿಂದ ಇರುವ ಸದಾಶಿವನೊಡನೆ ಬಹಳವಾದ ಭೋಗಗಳನ್ನು ಅನುಭವಿಸಿ ಮಹಾಪ್ರಳಯವು ಉಂಟಾದಾಗ ಶಿವನ ಸಾಮ್ಯವನ್ನು ಹೊಂದುವರು. ಆ ಜನರು [ಪ್ರಣವೋಪಾಸನೆಯನ್ನು ಮಾಡುವವರು] ಸಂಸಾರ ಸಮುದ್ರದಲ್ಲಿ ಮತ್ತೆ ಬೀಳುವುದಿಲ್ಲ. ನಿತ್ಯವಾಗಿರುವ ಶ್ರುತಿಯು "ತೇ ಬ್ರಹ್ಮಲೋಕೇತು ಪರಾಂತಕಾಲೇ" ಎಂಬುದಾಗಿ ಹೇಳುತ್ತಿರುವುದು. ಶಿವನ ಸಮಷ್ಟಿಯೆಂಬ ಐಶ್ವರ್ಯವು ಈ ಪ್ರಕಾರವಾದದ್ದೆಂದು ತಿಳಿಯತಕ್ಕದ್ದು.

೩೬-೩೯. ಶಿವನು ಎಲ್ಲಾ ವಿಧವಾದ ಐಶ್ವರ್ಯದಿಂದ ಕೂಡಿರುವನು ಎಂದು ಅಥರ್ವಣ ಶಿಖೋಪನಿಷತ್ತು ಹೇಳುತ್ತಿರುವುದು. ಎಲ್ಲಾ ಐಶ್ವರ್ಯವನ್ನೂ ಕೊಡತಕ್ಕ ಸಾಮರ್ಥ್ಯವು ಶಿವನೊಬ್ಬನಿಗೇ ಇರುವುದೆಂದು ಶ್ರುತಿಯು ಹೇಳುವುದು. ಚಮಕ ಮಂತ್ರದಲ್ಲಿ ಹೇಳಿರುವ ಐಶ್ವರ್ಯವನ್ನು ಕೊಡುವ ಈ ಸ್ಥಾನಕ್ಕಿಂತಲೂ ಅಧಿಕವಾದ ಬೇರೆ ಸ್ಥಾನವು ಮತ್ತೊಂದಿಲ್ಲವೆಂದು ಶ್ರುತಿಯು ಹೇಳುವುದು. ಬ್ರಹ್ಮಪಂಚಕದ ಪ್ರಪಂಚವಿಸ್ತಾರಕ್ರಮವು ಶ್ರುತಿಯಲ್ಲಿ ಕಂಡುಬರುತ್ತದೆ. ನಿವೃತ್ತಿಯೇ ಮೊದಲಾದ

ಚತುರ್ಮುಖಸ್ಯ ಪದಾನ್ಯಾನ್ಯದಧಿಕಂ ವಿದ್ಯತೇ ಪದಂ ।
ಬ್ರಹ್ಮಪಂಚಕವಿಸ್ತಾರಪ್ರಪಂಚಃ ಖಲು ದೃಶ್ಯತೇ ॥ ೩೭ ॥

ಬ್ರಹ್ಮಭ್ಯ ಏವಂ ಸಂಜಾತಾ ನಿವೃತ್ಯಾದ್ಯಾಃ ಕಲಾ ಮತಾಃ ।
ಸೂಕ್ಷ್ಮಭೂತಸ್ವರೂಪಿಣ್ಯಃ ಕಾರಣತ್ವೇನ ವಿಶ್ರುತಾಃ ॥ ೩೮ ॥

ಸ್ಥೂಲರೂಪಸ್ವರೂಪಸ್ಯ ಪ್ರಪಂಚಸ್ಯಾಸ್ಯ ಸುವ್ರತ ।
ಪಂಚಧಾವಸ್ಥಿತಂ ಯತ್ತದ್ಬ್ರಹ್ಮಪಂಚಕಮಿಷ್ಯತೇ ॥ ೩೯ ॥

ಪುರುಷಃ ಶ್ರೋತ್ರವಾಣ್ಯೌ ಚ ಶಬ್ದಾಕಾಶೌ ಚ ಪಂಚಕಂ ।
ವ್ಯಾಪ್ತಮೀಶಾನರೂಪೇಣ ಬ್ರಹ್ಮಣಾ ಮುನಿಸತ್ತಮ ॥ ೪೦ ॥

ಪ್ರಕೃತಿಸ್ತ್ವಕ್ಚ ಪಾಣಿಶ್ಚ ಸ್ಪರ್ಶೋ ವಾಯುಶ್ಚ ಪಂಚಕಂ ।
ವ್ಯಾಪ್ತಂ ಪುರುಷರೂಪೇಣ ಬ್ರಹ್ಮಣೈವ ಮುನೀಶ್ವರ ॥ ೪೧ ॥

ಅಹಂಕಾರಸ್ತಥಾ ಚಕ್ಷುಃ ಪಾದೋ ರೂಪಂ ಚ ಪಾವಕಃ ।
ಅಘೋರಬ್ರಹ್ಮಣಾ ವ್ಯಾಪ್ತಮೇತತ್ಪಂಚಕಮಂಚಿತಂ ॥ ೪೨ ॥

---

ಕಲೆಗಳು ಈ ಬ್ರಹ್ಮರೂಪದಿಂದಲೇ ಹುಟ್ಟಿದವುಗಳೆಂದು ತಿಳಿಯಲ್ಪಟ್ಟಿರುವುದು. ಈ ಕಲೆಗಳು ಸೂಕ್ಷ್ಮವಾದ ಭೂತರೂಪದಿಂದ ಇರುವವುಗಳಾಗಿ ಪ್ರಪಂಚಕ್ಕೆ ಕಾರಣವೆಂದು ಪ್ರಸಿದ್ಧವಾಗಿರುವುದು. ಎಲೈ ವ್ರತವುಳ್ಳ ವಾಮದೇವಋಷಿಯೇ ಕೇಳು. ಈ ಪ್ರಪಂಚವು ಸ್ಥೂಲರೂಪವಾದ ಆಕಾರವನ್ನು ಹೊಂದಿ ಬ್ರಹ್ಮಪಂಚಕವೆಂದು ಕರೆಯಲ್ಪಡುವ ಐದು ವಿಧವಾದ ವಸ್ತುಜಾತಗಳಿಂದ ಕೂಡಿರುವುದು.

೪೦–೪೪. ಎಲೈ ಮುನಿಶ್ರೇಷ್ಠನೇ ಕೇಳು, ಪುರುಷ, ಶ್ರೋತ್ರೇಂದಿಯ, ವಾಗಿಂದ್ರಿಯ, ಶಬ್ದ, ಆಕಾಶ ಈ ಐದೂ, ಈಶಾನರೂಪದಿಂದ ಇರುವ ಬ್ರಹ್ಮನಿಂದ ವ್ಯಾಪ್ತವಾಗಿರುವುದು. ಪ್ರಕೃತಿ, ತ್ವಕ್, ಪಾಣಿ, ಸ್ಪರ್ಶ, ವಾಯು ಎಂಬ ಈ ಐದೂ ತತ್ಪುರುಷರೂಪದಿಂದಿರುವ ಬ್ರಹ್ಮರೂಪದಿಂದ ವ್ಯಾಪ್ತವಾಗಿರುವುದು. ಅಹಂಕಾರ, ಚಕ್ಷುರಿಂದ್ರಿಯ, ಪಾದ, ರೂಪ, ಅಗ್ನಿ, ಎಂಬ ಈ ಐದು ಅಘೋರರೂಪದಿಂದ ಇರುವ ಬ್ರಹ್ಮನಿಂದ ವ್ಯಾಪ್ತವಾಗಿರುವುದು. ಬುದ್ಧಿ, ರಸನೇಂದ್ರಿಯ, [ನಾಲಿಗೆ] ಪಾಯು, ರಸ, ನೀರು, ಎಂಬ ಐದೂ ವಾಮದೇವರೂಪದಿಂದಿರುವ ಬ್ರಹ್ಮನಿಂದ ಯಾವಾಗಲೂ ವ್ಯಾಪ್ತವಾಗಿರುವುದು. ಮನಸ್ಸು, ನಾಸಿಕ, ಉಪಸ್ಥೇಂದ್ರಿಯ, ಗಂಧ,

ಬುದ್ಧಿಶ್ಚ ರಸನಾ ಪಾಯೂ ರಸ ಆಪಶ್ಚ ಪಂಚಕಂ ।
ಬ್ರಹ್ಮಣಾ ವಾಮದೇವೇನ ವ್ಯಾಪ್ತಂ ಭವತಿ ನಿತ್ಯಶಃ ॥ ೪೩ ॥

ಮನೋ ನಾಸಾ ತಥೋಪಸ್ಥೋ ಗಂಧೋ ಭೂಮಿಶ್ಚ ಪಂಚಕಂ ।
ಸದ್ಯೇನ ಬ್ರಹ್ಮಣಾ ವ್ಯಾಪ್ತಂ ಪಂಚಬ್ರಹ್ಮಮಯಂ ಜಗತ್ ॥ ೪೪ ॥

ಯಂತ್ರರೂಪೇಣೋಪದಿಷ್ಟಃ ಪ್ರಣವಶ್ಶಿವವಾಚಕಃ ।
ಸಮಷ್ಟಿಃ ಪಂಚವರ್ಣಾನಾಂ ಬಿಂದ್ವಾದ್ಯಂ ಯಚ್ಚತುಷ್ಟಯಂ ॥ ೪೫ ॥

ಶಿವೋಪದಿಷ್ಟಮಾರ್ಗೇಣ ಯಂತ್ರರೂಪಂ ವಿಭಾವಯೇತ್ ।
ಪ್ರಣವಂ ಪರಮಂ ಮಂತ್ರಾಧಿರಾಜಂ ಶಿವರೂಪಿಣಂ ॥ ೪೬ ॥

ಇತಿ ಶ್ರೀ ಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಶಿವರೂಪಪ್ರಣವವರ್ಣನಂ ನಾಮ ಚತುರ್ದಶೋಽಧ್ಯಾಯಃ

---

ಭೂಮಿ, ಎಂಬ ಈ ಐದೂ ಸದ್ಯೋಜಾತರೂಪದಿಂದ ಇರುವ ಬ್ರಹ್ಮನಿಂದ ವ್ಯಾಪ್ತವಾಗಿರುವುದು. ಈ ಪ್ರಕಾರದಿಂದ ಈ ಪ್ರಪಂಚವು ಪಂಚಬ್ರಹ್ಮಮಯವಾಗಿರುವುದು.

೪೫–೪೬. ಶಿವವಾಚಕವಾದ ಪ್ರಣವಮಂತ್ರವು ಯಂತ್ರರೂಪದಿಂದ ಉಪದಿಷ್ಟವಾಗಿರುವುದು. ಬಿಂದುವೇ ಮೊದಲಾದ ನಾಲ್ಕುವರ್ಣಗಳು ಮತ್ತು ನಾದ ಇವುಗಳ ಸಮಷ್ಟಿಯು [ಒಟ್ಟು] ಪಂಚವರ್ಣಾತ್ಮಕವಾದ ಪ್ರಣವಮಂತ್ರವಾಗಿರುವುದು. ಈ ಪ್ರಣವವನ್ನು ಶಿವೋಪದಿಷ್ಟಮಾರ್ಗಾನುಸಾರವಾಗಿ ಯಂತ್ರರೂಪದಿಂದ ಭಾವಿಸಬೇಕು. ಈ ಪ್ರಣವಮಂತ್ರವು ಮಂತ್ರಗಳಿಗೆಲ್ಲಾ ರಾಜನೆನಿಸಿಕೊಂಡು ಅತ್ಯಂತ ಶ್ರೇಷ್ಠವಾಗಿರುವುದು. ಮತ್ತು ಈ ಪ್ರಣವಮಂತ್ರವು ಸಾಕ್ಷಾಚ್ಛಿವರೂಪವೇ ಆಗಿರುವುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಶಿವರೂಪಪ್ರಣವವರ್ಣನವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿ ವ ಮ ಹಾ ಪು ರಾ ಣೇ

## ಕೈಲಾಸಸಂಹಿತಾಯಾಂ

## ಪಂಚದಶೋಽಧ್ಯಾಯಃ

---

॥ ಈಶ್ವರ ಉವಾಚ ॥

ತತಃ ಪರಂ ಪ್ರವಕ್ಷ್ಯಾಮಿ ಸೃಷ್ಟಿಪದ್ಧತಿಮುತ್ತಮಾಂ ।
ಸದಾಶಿವಾನ್ಮಹೇಶಾದಿಚತುಷ್ಕಸ್ಯ ವರಾನನೇ ॥ ೧ ॥

ಸದಾಶಿವಸ್ಸಮಷ್ಟಿಸ್ಸ್ಯಾದಾಕಾಶಾಧಿಪತಿಃ ಪ್ರಭುಃ ।
ಅಸ್ಯೈವ ವ್ಯಷ್ಟಿತಾಪನ್ನಂ ಮಹೇಶಾದಿಚತುಷ್ಟಯಂ ॥ ೨ ॥

ಸದಾಶಿವಸಹಸ್ರಾಂಶಾನ್ಮಹೇಶಸ್ಯ ಸಮುದ್ಭವಃ ।
ಪುರುಷಾನನರೂಪತ್ವಾದ್ವಾಯೋರಧಿಪತಿಶ್ಚ ಸಃ ॥ ೩ ॥

---

## ಹದಿನೈದನೆಯ ಅಧ್ಯಾಯವು

೧–೫. ಈಶ್ವರನು ಹೇಳಿದನು.—ಎಲೈ ಪಾರ್ವತಿಯೇ ಕೇಳು, ಸದಾಶಿವ ತತ್ತ್ವದಿಂದ ಮಹೇಶ್ವರನೇ ಮೊದಲಾದ ನಾಲ್ಕು ಮೂರ್ತಿರೂಪಗಳ ಸೃಷ್ಟಿಯಕ್ರಮ ವನ್ನು ವಿವರಿಸಿ ಹೇಳುವೆನು. ಸದಾಶಿವ ತತ್ತ್ವವು ಸಮಷ್ಟಿಯಾಗಿರುವುದು. ಇದು ಆಕಾಶಕ್ಕೆ ಅಧಿಪತಿಯು. ಈ ಸದಾಶಿವತತ್ತ್ವದ ವ್ಯಷ್ಟಿರೂಪಗಳೇ ಮಹೇಶನೇ ಮೊದಲಾದ ನಾಲ್ಕು ರೂಪಗಳಾಗಿರುವುವು. ಸದಾಶಿವನ ಸಾವಿರದಲ್ಲಿ ಒಂದು ಅಂಶ

ಮಾಯಾಶಕ್ತಿಯುತೋ ವಾಮೋ ಸಕಲಶ್ಚ ಕ್ರಿಯಾಧಿಕಃ ।
ಅಸ್ಯೈವ ವ್ಯಷ್ಟಿರೂಪಂ ಸ್ಯಾದೀಶ್ವರಾದಿಚತುಷ್ಟಯಂ ॥ ೪ ॥

ಈಶೋ ವಿಶ್ವೇಶ್ವರಃ ಪಶ್ಚಾತ್ ಪರಮೇಶಸ್ತತಃ ಪರಂ ।
ಸರ್ವೇಶ್ವರ ಇತೀದಂ ತು ತಿರೋಧಾಚಕ್ರಮುತ್ತಮಂ ॥ ೫ ॥

ತಿರೋಭಾವೋ ದ್ವಿಧಾ ಭಿನ್ನ ಏಕೋ ರುದ್ರಾದಿಗೋಚರಃ ।
ಅನ್ಯಶ್ಚ ದೇಹಭಾವೇನ ಪಶುವರ್ಗಸ್ಯ ಸಂತತೇಃ ॥ ೬ ॥

ಭೋಗಾನುರಂಜನಪರಃ ಕರ್ಮಸಾಮ್ಯಕ್ಷಣಾವಧಿ ।
ಕರ್ಮಸಾಮ್ಯೇ ಸ ಏಕಃ ಸ್ಯಾದನುಗ್ರಹಮಯೋ ವಿಭುಃ ॥ ೭ ॥

ತತ್ರ ಸರ್ವೇಶ್ವರಾ ಯಾಸ್ತೇ ದೇವತಾಃ ಪರಿಕೀರ್ತಿತಾಃ ।
ಪರಬ್ರಹ್ಮಾತ್ಮಕಾಃ ಸಾಕ್ಷಾನ್ನಿರ್ವಿಕಲ್ಪಾ ನಿರಾಮಯಾಃ ॥ ೮ ॥

---

ದಿಂದ, ಮಹೇಶ್ವರನ ಉತ್ಪತ್ತಿಯಾಗಿರುವುದು. ಈ ಮಹೇಶನು ಪುರುಷನ ಮುಖದಿಂದ ಇರುವನು. ಇವನು ವಾಯುವಿಗೆ ಅಧಿಪನಾಗಿರುವನು. ಇವನ ಎಡಭಾಗದಲ್ಲಿ ಮಾಯಾಶಕ್ತಿಯು ಇರುವುದು. ಇವನು ಸಕಲನಾಗಿರುವನು. ಹೆಚ್ಚಾದ ಕ್ರಿಯೆಗಳಿಂದ ಕೂಡಿರುವನು ಈ ಮಹೇಶನ ವ್ಯಷ್ಟಿರೂಪವು [ಬೇರೆಬೇರೆರೂಪಗಳು] ಈಶ್ವರನೇ ಮೊದಲಾದ ನಾಲ್ಕು ರೂಪದಿಂದ ಇರುವುದು. ಈಶ, ವಿಶ್ವೇಶ್ವರ ಪರಮೇಶ ಸರ್ವೇಶ್ವರ ಎಂಬಿವೇ ಆ ನಾಲ್ಕು ರೂಪಗಳು. ಇದಕ್ಕೆ ತಿರೋಧಾನಚಕ್ರವೆಂದು ಹೆಸರು.

೬-೮. ತಿರೋಭಾವ [ತಿರೋಧಾನ=ಅನ್ತರ್ಧಾನ, ಕಣ್ಣಿಗೆ ಕಾಣದಂತೆ ಇರುವುದು] ಎರಡು ಪ್ರಕಾರವಾಗಿರುವುದು. ಇದರಲ್ಲಿ ಒಂದು ಕ್ರಮವು (ಅಂಶವು) ರುದ್ರನಿಗೆ ಸಂಬಂಧಪಟ್ಟಿರುವುದು. ಇನ್ನೊಂದು ಕ್ರಮವು [ಅಂಶವು] ದೇಹಭಾವದಿಂದ ಇರುವ ಪಶುಗಳಲ್ಲಿ ಯಾವಾಗಲೂ ಇದ್ದುಕೊಂಡು ಭೋಗವನ್ನು ಅನುಭವಿಸುತ್ತಿರುವುದು. ಈ ಭೋಗವು ಕರ್ಮಸಾಮ್ಯವು ಉಂಟಾಗುವವರಿಗೂ ಎಂದರೆ ಪುಣ್ಯಪಾಪಗಳ ವಾಸನೆಯು ಇರುವವರೆಗೂ ನಡೆಯುವುದು. ಕರ್ಮಸಾಮ್ಯವು ಉಂಟಾದನಂತರ ಎಂದರೆ ಕರ್ಮಕ್ಷಯಾನಂತರ ಅವನು ಅನುಗ್ರಹಸಾಮರ್ಥ್ಯವುಳ್ಳ ಪ್ರಭುವೇ ಆಗುವನು. ಆ ಅನುಗ್ರಹಮಯವಾದ ರೂಪದಲ್ಲಿ ಇರುವವರೆಲ್ಲರೂ ದೇವ

ತಿರೋಭಾವಾತ್ಮಕಂ ಚಕ್ರಂ ಭವೇಚ್ಛಾಂತಿಕಲಾಮಯಂ ।
ಮಹೇಶ್ವರಾಧಿಷ್ಠಿತಂ ಚ ಪದಮೇತದನುತ್ತಮಂ ॥ ೯ ॥

ಏತದೇವ ಪದಂ ಪ್ರಾಪ್ಯಂ ಮಹೇಶಪದಸೇವಿನಾಂ ।
ಮಹೇಶ್ವರಾಣಾಂ ಸಾಲೋಕ್ಯಕ್ರಮಾದೇವ ವಿಮುಕ್ತಿದಂ ॥ ೧೦ ॥

ಮಹೇಶ್ವರಸಹಸ್ರಾಂಶಾದ್ರುದ್ರಮೂರ್ತಿರಜಾಯತ ।
ಅಘೋರವದನಾಕಾರಸ್ತೇಜಸ್ತತ್ತ್ವಾಧಿಪಶ್ಚ ಸಃ ॥ ೧೧ ॥

ಗೌರೀಶಕ್ತಿಯುತೋ ವಾಮೇ ಸರ್ವಸಂಹಾರಕೃತ್ಪ್ರಭುಃ ।
ಅಸ್ಯೈವ ವ್ಯಷ್ಟಿರೂಪಂ ಸ್ಯಾಚ್ಛಿವಾದ್ಯಥ ಚತುಷ್ಟಯಂ ॥ ೧೨ ॥

ಶಿವೋ ಹರೋ ಮೃಡಭವೌ ವಿದಿತಂ ಚಕ್ರಮುದ್ಭೃತಂ ।
ಸಂಹಾರಾಖ್ಯಂ ಮಹಾದಿವ್ಯಂ ಪರಮಂ ಹಿ ಮುನೀಶ್ವರ ॥ ೧೩ ॥

---

ತೆಗಳಾಗಿಯೂ, ಎಲ್ಲಕ್ಕೂ ಈಶ್ವರರಾಗಿಯೂ, ಪರಬ್ರಹ್ಮರೂಪವುಳ್ಳವರಾಗಿಯೂ, ಯಾವ ವಿಧವಾದ ವಿಕಲ್ಪವೂ ರೋಗಾದ್ಯುಪದ್ರವಗಳೂ ಇಲ್ಲದವರಾಗಿಯೂ ಇರುವರು.

೯–೧೦. ತಿರೋಭಾವಾತ್ಮಕವಾದ ಈ ಚಕ್ರವು ಶಾಂತಿಕಲಾಮಯವಾಗಿರುವುದು. ಉತ್ತಮವಾದ ಈ ತತ್ತ್ವವು ಮಹೇಶ್ವರನಿಂದ ಅಧಿಷ್ಠಿತವಾಗಿರುವುದು. ಮಹೇಶ್ವರನನ್ನು ಸೇವಿಸುವವರು ಈ ಉತ್ತಮ ಸ್ಥಾನವನ್ನು ಹೊಂದುವರು. ಮಹೇಶ್ವರನನ್ನು ಸೇವಿಸುವ ಮಾಹೇಶ್ವರರು ಸಾಲೋಕ್ಯಕ್ರಮದಿಂದ ಕ್ರಮವಾಗಿ ಮುಕ್ತರಾಗುವರು.

೧೧-೧೩. ಮಹೇಶ್ವರನ ಸಾವಿರ ಅಂಶಗಳಲ್ಲಿ ಒಂದರಿಂದ ರುದ್ರಮೂರ್ತಿಯು ಹುಟ್ಟಿರುವುದು. ಈ ರುದ್ರಮೂರ್ತಿಯು ಅಘೋರವೆಂಬ ಮೂರ್ತಿಯ ಮುಖವೂ ಆಕಾರವೂ ಉಳ್ಳದ್ದಾಗಿರುವುದು. ಈ ಮೂರ್ತಿಯು ತೇಜಸ್ತತ್ವಕ್ಕೆ ಅಧಿಪತಿಯಾಗಿರುವುದು. ಈ ರುದ್ರಮೂರ್ತಿಯ ಎಡಭಾಗದಲ್ಲಿ ಗೌರೀ ಎಂಬ ಶಕ್ತಿ ಇರುವಳು. ಈ ಪ್ರಭುವು ಎಲ್ಲವನ್ನೂ ಸಂಹಾರಮಾಡುವ ಕಾರ್ಯದಲ್ಲಿ ನಿರತನಾಗಿರುವನು. ಶಿವನೇ ಮೊದಲಾದ ನಾಲ್ಕು ರೂಪಗಳು ಈ ರುದ್ರಮೂರ್ತಿಯ ವ್ಯಷ್ಟಿರೂಪದಿಂದ ಇರುವುವು. ಶಿವ, ಹರ, ಮೃಡ, ಭವ, ಎಂದು ವ್ಯಷ್ಟಿರೂಪದ ಹೆಸರುಗಳು. ಎಲ್ಲೈ

ಸ ಸಂಹಾರಸ್ತ್ರಿಧಾ ಪ್ರೋಕ್ತೋ ಬುಧೈರ್ನಿತ್ಯಾದಿಭೇದತಃ ।
ನಿತ್ಯೋ ಜೀವಸುಷುಪ್ತ್ಯಾಖ್ಯೋ ವಿಧೇರ್ನೈಮಿತ್ತಿಕಃ ಸ್ಮೃತಃ ॥ ೧೪ ॥

ವಿಲಯಸ್ತಸ್ಯ ತು ಮಹಾನಿತಿ ವೇದನಿದರ್ಶಿತಃ ।
ಜೀವಾನಾಂ ಜನ್ಮದುಃಖಾದಿಶಾಂತಾನಾಮುಷಿತಾತ್ಮನಾಂ ॥ ೧೫ ॥

ವಿಶ್ರಾಂತ್ಯರ್ಥಂ ಮುನಿಶ್ರೇಷ್ಠ ಕರ್ಮಣಾಂ ಪಾಕಹೇತವೇ ।
ಸಂಹಾರಃ ಕಲ್ಪಿತಸ್ತ್ರೇಧಾ ರುದ್ರೇಣಾಮಿತತೇಜಸಾ ॥ ೧೬ ॥

ರುದ್ರಸ್ಯೈವ ತು ಕೃತ್ಯಾನಾಂ ತ್ರಯಮೇತದುದಾಹೃತಂ ।
ಸಂಹೃತಾವಪಿ ಸೃಷ್ಟ್ಯಾದಿಕೃತ್ಯಾನಾಂ ಪಂಚಕಂ ವಿಭೋಃ ॥ ೧೭ ॥

---

ಋಷಿಶ್ರೇಷ್ಠನೇ ಕೇಳು. ಈ ನಾಲ್ಕುರೂಪಗಳಿಂದ ಇರುವ ಈ ಚಕ್ರಕ್ಕೆ ಸಂಹಾರ ಚಕ್ರವೆಂದು ಹೆಸರು. ಈ ಸಂಹಾರಚಕ್ರವು ಬಹಳ ಉತ್ತಮವಾದದ್ದು.

೧೪. ಆ ಸಂಹಾರವೆಂಬ ಹೆಸರುಳ್ಳ ಈ ಚಕ್ರವನ್ನು ವಿದ್ವಾಂಸರು ನಿತ್ಯ ನೈಮಿತ್ತಿಕ ಮಹಾಪ್ರಲಯ ಎಂದು ಮೂರು ವಿಧವೆಂದು ಹೇಳುವರು. ಜೀವ ಸುಷುಪ್ತಿ ಎಂದು ಹೆಸರುಳ್ಳದ್ದು ನಿತ್ಯವೆಂಬ ಮೊದಲನೆಯ ಭೇದವು. ಆಯಾಯ ನಿಮಿತ್ತಕ್ಕನುಸಾರವಾಗಿ ವಿಧಿಯು ಉಂಟಾಗುವುದು, ನೈಮಿತ್ತಿಕವೆಂಬ ಎರಡನೆಯ ಭೇದವು. ನಾಶವನ್ನು ಹೊಂದುವುದು ಎಂಬುವ ಮೂರನೆಯ ಭೇದಕ್ಕೆ ವಿಲಯವೆಂದು ಹೆಸರು. ಈ ರೀತಿಯಾಗಿ ಈ ಮೂರು ಭೇದಗಳು ವೇದದಲ್ಲಿ ಹೇಳಲ್ಪಟ್ಟಿರುವವು.

೧೫–೧೭. ಜನ್ಮವೇ ಮೊದಲಾದ ದುಃಖಗಳಿಂದ ಬಿಡುಗಡೆಹೊಂದಿರುವ ಜೀವರುಗಳಿಗೆ ವಿಶ್ರಾಂತಿಯಿಂದ ಇರುವುದಕ್ಕಾಗಿಯೂ, ಅವರವರ ಕರ್ಮಗಳು ಫಲ ವನ್ನು ಕೊಡುವುದಕ್ಕೆ ಸಿದ್ಧವಾಗಿ ಪರಿಪಾಕಸ್ಥಿತಿಗೆ ಬರುವವರೆಗೆ ಜೀವರು ಸುಮ್ಮನಿರು ವುದಕ್ಕಾಗಿಯೂ, ಕೂಡ ಅಪಾರತೇಜಶ್ಶಾಲಿಯಾದ ರುದ್ರನು ಈ ಸಂಹಾರಚಕ್ರವನ್ನು ಮೂರು ವಿಧವಾಗಿ ನಿರ್ಮಿಸಿರುವನು. ಈ ಮೂರು ಕೆಲಸಗಳೂ ರುದ್ರನಿಗೇ ಸಂಬಂ ಧಪಟ್ಟಿರುವುದು. ಸಂಹಾರಕಾಲದಲ್ಲಿಯೂ ಸೃಷ್ಟಿಯೇ ಮೊದಲಾದ ಐದು ಕಾರ್ಯ ಗಳು ಈ ಪ್ರಭುವಾದ ರುದ್ರನಿಗೆ ಇರುವವು. ಎಲೈ ಋಷಿಯೇ ಕೇಳು. ಆ ಕಾರ್ಯ ಗಳಲ್ಲಿ ಭವನೇ ಮೊದಲಾದ ನಾಲ್ಕುಜನ ದೇವತೆಗಳು [ಶಿವನ ಮೂರ್ತಿಭೇದ

**ಮುನೇ ತತ್ರ ಭವಾದ್ಯಾಸ್ತೇ ದೇವತಾಃ ಪರಿಕೀರ್ತಿತಾಃ ।**
**ಪರಬ್ರಹ್ಮಸ್ವರೂಪಾಶ್ಚ ಲೋಕಾನುಗ್ರಹಕಾರಕಾಃ ॥ ೧೮ ॥**

**ಸಂಹಾರಾಖ್ಯಮಿದಂ ಚಕ್ರಂ ವಿದ್ಯಾರೂಪಕಲಾಮಯಂ ।**
**ಅಧಿಷ್ಠಿತಂ ಚ ರುದ್ರೇಣ ಪದಮೇತನ್ನಿರಾಮಯಂ ॥ ೧೯ ॥**

**ಏತದೇವ ಪದಂ ಪ್ರಾಪ್ಯಂ ರುದ್ರಾರಾಧನಕಾಂಕ್ಷಿಣಾಂ ।**
**ರುದ್ರಾಣಾಂ ತದ್ಧಿ ಸಾಲೋಕ್ಯಕ್ರಮಾತ್ಸಾಯುಜ್ಯದಂ ಮುನೇ ॥ ೨೦ ॥**

**ರುದ್ರಮೂರ್ತೇಸ್ಸಹಸ್ರಾಂಶಾದ್ವಿಷ್ಣೋಶ್ಚೈವಾಭವಜ್ಜನಿಃ ।**
**ಸ ವಾಮದೇವಚಕ್ರಾತ್ಮಾ ವಾರಿತತ್ತ್ವೈಕನಾಯಕಃ ॥ ೨೧ ॥**

**ರಮಾಶಕ್ತಿಯುತೋ ವಾಮೇ ಸರ್ವರಕ್ಷಾಕರೋ ಮಹಾನ್ ।**
**ಚತುರ್ಭುಜೋಽರವಿಂದಾಕ್ಷಃ ಶ್ಯಾಮಶ್ಶಂಖಾದಿಚಿಹ್ನಭೃತ್ ॥ ೨೨ ॥**

ಗಳು] ಸಿದ್ಧರಾಗಿರುವರು. ಅವರು ಪರಬ್ರಹ್ಮರೂಪದಿಂದ ಇದ್ದುಕೊಂಡು ಲೋಕಗಳಿಗೆ ಅನುಗ್ರಹವನ್ನು ಮಾಡುತ್ತಾ ಇರುವರು.

೧೯-೨೦. ಈ ಸಂಹಾರವೆಂಬ ಹೆಸರಿನ ಚಕ್ರವು ವಿದ್ಯಾರೂಪವಾದ ಕಲಾಮಯವಾಗಿರುವುದು. ಯಾವ ಈತಿಬಾಧೆಯೂ ಇಲ್ಲದಿರುವ ಈ ಚಕ್ರವು ರುದ್ರಮೂರ್ತಿಯಿಂದ ವ್ಯಾಪ್ತವಾಗಿರುವುದು. ರುದ್ರನನ್ನು ಆರಾಧನೆ ಮಾಡುವವರು ರುದ್ರಸಾಲೋಕ್ಯಪ್ರಾಪ್ತಿಕ್ರಮದಿಂದ ರುದ್ರಮೂರ್ತಿಯಲ್ಲಿ ಸಾಯುಜ್ಯವನ್ನು [ಐಕ್ಯವನ್ನು] ಹೊಂದುವರು.

೨೧-೨೭. ಈ ರುದ್ರಮೂರ್ತಿಯ ಸಾವಿರ ಅಂಶಗಳಲ್ಲಿ ಒಂದು ಭಾಗದಿಂದ ವಿಷ್ಣುವಿನ ಉತ್ಪತ್ತಿಯು ಆಗಿರುವುದು. ಆ ವಿಷ್ಣುವು ವಾಮದೇವಚಕ್ರದ ರೂಪದಿಂದ ಜಲತತ್ತ್ವಕ್ಕೆ ಅಧಿಪತಿಯಾಗಿರುವನು. ಈ ವಿಷ್ಣುದೇವನ ಎಡಭಾಗದಲ್ಲಿ ರಮಾ ಎಂಬ ಶಕ್ತಿಯು ಇರುವಳು. ಇವನು ಯಾವಾಗಲೂ ಎಲ್ಲವನ್ನೂ ರಕ್ಷಿಸುವ ಸ್ಥಿತಿ ಅಥವಾ ಪಾಲನೆ ಎಂಬ ಕಾರ್ಯದಲ್ಲಿ ತೊಡಗಿರುವನು. ಈ ವಿಷ್ಣುವಿಗೆ ನಾಲ್ಕು ಕೈಯಿಗಳೂ, ಕಮಲದಂತಿರುವ ಕಣ್ಣುಗಳೂ, ಕಪ್ಪಾಗಿರುವ ಮೈಕಾಂತಿಯೂ ಇರುವವು. ಶಂಖವೇ ಮೊದಲಾದ ಚಿಹ್ನೆಗಳನ್ನು ಧರಿಸಿರುವನು. ಈ ವಿಷ್ಣುವಿಗೆ

ಅಸ್ಯೈವ ವಾಸುದೇವಾದಿಚತುಷ್ಕಂ ವ್ಯಷ್ಟಿತಾಂ ಗತಂ ।
ಉಪಾಸನರತಾನಾಂ ವೈ ವೈಷ್ಣವಾನಾಂ ವಿಮುಕ್ತಿದಂ ॥ ೨೩ ॥

ವಾಸುದೇವೋಽನಿರುದ್ಧಶ್ಚ ತತಸ್ಸಂಕರ್ಷಣಃ ಪರಃ ।
ಪ್ರದ್ಯುಮ್ನಶ್ಚೇತಿ ವಿಖ್ಯಾತಂ ಸ್ಥಿತಿಚಕ್ರಮನುತ್ತಮಂ ॥ ೨೪ ॥

ಸ್ಥಿತಿಸ್ಸೃಷ್ಟಸ್ಯ ಜಗತಸ್ತತ್ಕರ್ತ್ರಾ ಸಹ ಪಾಲನಂ ।
ಆರಬ್ಧಕರ್ಮಭೋಗಾಂತಂ ಜೀವಾನಾಂ ಫಲಭೋಗಿನಾಂ ॥ ೨೫ ॥

ವಿಷ್ಣೋರೇವೇದಮಾಖ್ಯಾತಂ ಕೃತ್ಯಂ ರಕ್ಷಾವಿಧಾಯಿನಃ ।
ಸ್ಥಿತಾವಪಿ ತು ಸೃಷ್ಟ್ಯಾದಿಕೃತ್ಯಾನಾಂ ಪಂಚಕಂ ವಿಭೋಃ ॥ ೨೬ ॥

ತತ್ರ ಪ್ರದ್ಯುಮ್ನಮುಖ್ಯಾಸ್ತೇ ದೇವತಾಃ ಪರಿಕೀರ್ತಿತಾಃ ।
ನಿರ್ವಿಕಲ್ಪಾ ನಿರಾತಂಕಾ ಮುಕ್ತಾನಂದಕರಾಸ್ಸದಾ ॥ ೨೭ ॥

---

ವಾಸುದೇವನೇ ಮೊದಲಾದ ದೇವತಾ ಚತುಷ್ಟಯವು ವ್ಯಷ್ಟಿರೂಪವಾಗಿರುವುದು. ವಿಷ್ಣುದೇವನನ್ನು ಉಪಾಸನೆ ಮಾಡುವವರಿಗೆ ಈ ದೇವತೆಗಳು ಮುಕ್ತಿಯನ್ನು ಕೊಡುವರು. ವಾಸುದೇವ ಅನಿರುದ್ಧ ಸಂಕರ್ಷಣ ಪ್ರದ್ಯುಮ್ನ ಎಂಬುದಾಗಿ ಈ ವ್ಯಷ್ಟಿದೇವತೆಗಳ ಹೆಸರುಗಳು. ಈ ಚಕ್ರಕ್ಕೆ ಸ್ಥಿತಿಚಕ್ರವೆಂದು ಹೆಸರು ಇರುವುದು. ಸೃಷ್ಟಿಯಾದ ಜಗತ್ತಿನ ಪಾಲನೆಯೂ ಅದರ ರಕ್ಷಣೆಯೂ ಜೀವರುಗಳಿಗೆ ಅವರವರು ಮಾಡಿದ ಕರ್ಮಾನುಸಾರವಾಗಿ ಕರ್ಮದ ಫಲವನ್ನು ಕೊಟ್ಟು ಅವರನ್ನು ಸರಿಯಾಗಿ ಕಾಪಾಡುವುದೇ ಈ ವಿಷ್ಣುವಿನ ಕಾರ್ಯವಾಗಿರುವುದು. ಈ ಸ್ಥಿತಿ ರೂಪವಾದ ಕರ್ಮದಲ್ಲಿಯೂ ಸೃಷ್ಟಿಯೇ ಮೊದಲಾದ ಐದು ಕಾರ್ಯಗಳು ಈ ಪ್ರಭುವಾದ ವಿಷ್ಣುವಿಗೆ ಸಂಬಂಧಿಸಿರುವವು.

೨೭-೨೯. ಈ ಐದು ಕಾರ್ಯಗಳಲ್ಲಿಯೂ ಪ್ರದ್ಯುಮ್ನನೇ ಮೊದಲಾದ [ವ್ಯಷ್ಟಿ] ದೇವತೆಗಳು ಈ ವಿಷ್ಣುವಿಗೆ ಸಹಾಯಕರಾಗಿರುವರು. ಈ ದೇವತೆಗಳು ಯಾವಾಗಲೂ ಯಾವ ವಿಧವಾದ ಯೋಚನೆಯೂ ಯಾವ ಈತಿಭಾದೆಯೂ ಇಲ್ಲದೆ ಮುಕ್ತರಾದವರಿಗೆ ಆನಂದವನ್ನುಂಟುಮಾಡುತ್ತಿರುವರು. ಎಲೈ ಬ್ರಹ್ಮಋಷಿಯೇ,

ಸ್ಥಿತಿಚಕ್ರಮಿದಂ ಬ್ರಹ್ಮನ್ಪ್ರತಿಷ್ಠಾರೂಪಮುತ್ತಮಂ ।
ಜನಾರ್ದನಾಧಿಷ್ಠಿತಂ ಚ ಪರಮಂ ಪದಮುಚ್ಯತೇ ॥ ೨೮ ॥

ಏತದೇವ ಪದಂ ಪ್ರಾಪ್ಯಂ ವಿಷ್ಣುಪಾದಾಬ್ಜಸೇವಿನಾಂ ।
ವೈಷ್ಣವಾನಾಂ ಚಕ್ರಮಿದಂ ಸಾಲೋಕ್ಯಾದಿಪದಪ್ರದಂ ॥ ೨೯ ॥

ವಿಷ್ಣೋರೇವ ಸಹಸ್ರಾಂಶಾತ್ಸಂಬಭೂವ ಪಿತಾಮಹಃ ।
ಸದ್ಯೋಜಾತಮುಖಾತ್ಮಾಯಃ ಪೃಥಿವೀತತ್ತ್ವನಾಯಕಃ ॥ ೩೦ ॥

ವಾಗ್ದೇವೀಸಹಿತೋ ವಾಮೇ ಸೃಷ್ಟಿಕರ್ತಾ ಜಗತ್ಪ್ರಭುಃ ।
ಚತುರ್ಮುಖೋ ರಕ್ತವರ್ಣೋ ರಜೋರೂಪಸ್ವರೂಪವಾನ್ ॥ ೩೧ ॥

ಹಿರಣ್ಯಗರ್ಭಾದ್ಯಸ್ಯೈವ ವ್ಯಷ್ಟಿರೂಪಂ ಚತುಷ್ಟಯಂ ।
ಹಿರಣ್ಯಗರ್ಭೋಽಥ ವಿರಾಟ್ ಪುರುಷಃ ಕಾಲ ಏವ ಚ ॥ ೩೨ ॥

---

ಕೇಳು, ಈ ಸ್ಥಿತಿಚಕ್ರವು ಪ್ರತಿಷ್ಠಾಕಲಾಮಯವಾಗಿರುವುದು. ವಿಷ್ಣುವಿನಿಂದ ವ್ಯಾಪ್ತವಾಗಿರುವ ಈ ಚಕ್ರವು ಉತ್ತಮವಾದ ಸ್ಥಾನವೆನಿಸಿಕೊಂಡಿರುವುದು. ಶ್ರುತಿಯಲ್ಲಿ ಹೇಳಿರುವ "ತದ್ವಿಷ್ಣೋಃ ಪರಮಂ ಪದಂ" ಎಂಬ ಪರಮಪದವೇ ವಿಷ್ಣುವಿನ ಸ್ಥಾನವಾಗಿರುವುದು. ವಿಷ್ಣುವಿನ ಪಾದಕಮಲವನ್ನು ಸೇವಿಸುವವರಿಗೆ ಈ ಸ್ಥಾನವು ಲಭಿಸುವುದು. ಈ ಚಕ್ರವು ವೈಷ್ಣವರಿಗೆ ಸಾಲೋಕ್ಯವೇ ಮೊದಲಾದ ಸ್ಥಾನವನ್ನು ಕೊಡುವುದಾಗಿರುವುದು.

೩೦–೩೫. ಈ ವಿಷ್ಣುವಿನ ಸಾವಿರಾರು ಅಂಶಗಳಲ್ಲಿ ಒಂದು ಅಂಶದಿಂದ ಚತುರ್ಮುಖಬ್ರಹ್ಮನು ಉತ್ಪನ್ನನಾಗಿರುವನು. ಇವನು ಸದ್ಯೋಜಾತನೆಂದು ಹೆಸರುಳ್ಳ ದೇವನ ಮುಖದಿಂದ ಇದ್ದುಕೊಂಡು ಪೃಥಿವೀ ತತ್ತ್ವಕ್ಕೆ ಅಧಿಪತಿಯಾಗಿರುವನು. ಈ ಲೋಕವನ್ನು ಸೃಷ್ಟಿಮಾಡುವ ಈ ಪ್ರಭುವಿನ ಎಡಗಡೆಯ ಭಾಗದಲ್ಲಿ ವಾಗ್ದೇವೀ ಎಂಬ ಶಕ್ತಿಯು ಇರುವಳು. ಇವನು ನಾಲ್ಕು ಮುಖವುಳ್ಳವನಾಗಿಯೂ ಕೆಂಪಾದ ಶರೀರಕಾಂತಿಯುಳ್ಳವನಾಗಿಯೂ ರಜೋಗುಣಸ್ವರೂಪನಾಗಿಯೂ ಇರುವನು. ಹಿರಣ್ಯಗರ್ಭನೇ ಮೊದಲಾದ ನಾಲ್ಕುದೇವತೆಗಳು ಇವನ ವ್ಯಷ್ಟಿಸ್ವರೂಪದಿಂದಿರು

ಸೃಷ್ಟಿಚಕ್ರಮಿದಂ ಬ್ರಹ್ಮಪುತ್ರಾದಿಋಷಿಸೇವಿತಂ ।
ಸರ್ವಕಾಮಾರ್ಥದಂ ಬ್ರಹ್ಮನ್ಪರಿವಾರಸುಖಪ್ರದಂ ॥ ೩೩ ॥

ಸೃಷ್ಟಿಸ್ತು ಸಂಹೃತಸ್ಯಾಸ್ಯ ಜೀವಸ್ಯ ಪ್ರಕೃತೌ ಬಹಿಃ ।
ಆನೀಯ ಕ್ರಮಭೋಗಾರ್ಥಂ ಸಾಧನಾಂಗಫಲೈಸ್ಸಹ ॥ ೩೪ ॥

ಸಂಯೋಜನಮಿತೀದಂ ತು ಕೃತ್ಯಂ ಪೈತಾಮಹಂ ವಿದುಃ ।
ಜಗತ್ಸೃಷ್ಟಿಕ್ರಿಯಾವಿಜ್ಞಾ ಯಾವದ್ವ್ಯೂಹಂ ಸುಖಾವಹಂ ॥ ೩೫ ॥

ಜಗತ್ಸೃಷ್ಟಾವಪಿ ಮುನೇ ಕೃತ್ಯಾನಾಂ ಪಂಚಕಂ ವಿಭೋಃ ।
ಅಸ್ತಿಕಾಲಾದಯಸ್ತತ್ರ ದೇವತಾಃ ಪರಿಕೀರ್ತಿತಾಃ ॥ ೩೬ ॥

ನಿವೃತ್ತಿರೂಪಮಾಖ್ಯಾತಂ ಸೃಷ್ಟಿಚಕ್ರಮಿದಂ ಬುಧೈಃ ।
ಪಿತಾಮಹಾಧಿಷ್ಠಿತಂ ಚ ಪದಮೇತದ್ಧಿ ಶೋಭನಂ ॥ ೩೭ ॥

---

ಪರು. ಹಿರಣ್ಯಗರ್ಭ ವಿರಾಟ್ ಪುರುಷ ಕಾಲ ಎಂದು ಇವರುಗಳ ಹೆಸರು ಪ್ರಸಿದ್ಧವಾಗಿರುವುದು. ಈ ಚಕ್ರವನ್ನು ಸೃಷ್ಟಿಚಕ್ರವೆಂದು ಕರೆಯುವರು. ಇದು ಬ್ರಹ್ಮನ ಪುತ್ರರಾದ ಋಷಿಗಳೇ ಮೊದಲಾದವರಿಂದ ಸೇವಿಸಲ್ಪಟ್ಟದ್ದಾಗಿರುವುದು. ಈ ಚಕ್ರವು ಎಲ್ಲಾ ವಿಧವಾದ ಕಾಮ ಭೋಗಗಳನ್ನೂ, ಪರಿವಾದ ಮೊದಲಾದ ಸುಖವನ್ನೂ ಉಂಟುಮಾಡುವುದಾಗಿರುವುದು. ಪ್ರಕೃತಿಯಲ್ಲಿ ಲೀನನಾದ ಜೀವನಿಗೆ ಪುನಃ ಸೃಷ್ಟಿಕಾಲದಲ್ಲಿ ಭೋಗಕ್ಕೆ ಅನುಕೂಲವಾದ ಪದಾರ್ಥಗಳನ್ನು ಒಂದು ಕಡೆ ಸೇರಿಸಿ ಅವನು ಆ ಕರ್ಮಫಲವನ್ನು ಅನುಭವಿಸಲು ತಕ್ಕ ಸ್ಥಿತಿಯನ್ನು ಆ ಜೀವನಿಗೆ ಅನುಕೂಲವಾಗುವಂತೆ ಸಿದ್ಧಪಡಿಸಿಕೊಡುವ ಸೃಷ್ಟಿಯೆಂಬ ಕಾರ್ಯವು ಈ ಬ್ರಹ್ಮನಿಗೆ ಸಂಬಂಧಪಟ್ಟದ್ದಾಗಿರುವುದು. ಜಗತ್ಸೃಷ್ಟಿಕ್ರಮವನ್ನು ತಿಳಿದವರು ಇತರ ವ್ಯೂಹಗಳಂತೆ ಈ ಸೃಷ್ಟಿಚಕ್ರದಲ್ಲಿಯೂ ಸುಖಕರವಾದ ಸೃಷ್ಟಿ ಸ್ಥಿತಿ ಲಯ ತಿರೋಧಾನ ಅನುಗ್ರಹವೆಂಬ ಕೃತ್ಯಪಂಚಕವು ಪ್ರಭುವಾದ ಈ ಬ್ರಹ್ಮನಿಗೆ ಇರುವುದೆಂದು ಹೇಳುವರು.

೩೬.೩೭. ಈ ಕೃತ್ಯಪಂಚಕವನ್ನು ಮಾಡುವುದರಲ್ಲಿ ಕಾಲಪುರುಷನೇ ಮೊದಲಾದ ದೇವತಾಚತುಷ್ಟಯವು ಚತುರ್ಮುಖಬ್ರಹ್ಮನಿಗೆ ಅನುಕೂಲವಾಗಿರುವುದು. ಈ ಚಕ್ರವನ್ನು ತಿಳಿದವರು ಇದನ್ನು ನಿವೃತ್ತಿಚಕ್ರವೆಂದು ಕರೆಯುವರು. ಇದು

ಏತದೇವ ಪದಂ ಪ್ರಾಪ್ಯಂ ಬ್ರಹ್ಮಾರ್ಪಿತಧಿಯಾಂ ನೃಣಾಂ ।
ಪೈತಾಮಹಾನಾಪ್ನೋತದ್ಧಿ ಸಾಲೋಕ್ಯಾದಿವಿಮುಕ್ತಿದಂ ॥ ೩೮ ॥

ಅಸ್ಮಿನ್ನಪಿ ಚತುಷ್ಕೇ ತು ಚಕ್ರಾಣಾಂ ಪ್ರಣವೋ ಭವೇತ್ ।
ಮಹೇಶಾದಿಕ್ರಮಾದೇವ ಗೌಣ್ಯಾ ವೃತ್ತ್ಯಾ ಸ ವಾಚಕಃ ॥ ೩೯ ॥

ಇದಂ ಖಲು ಜಗಚ್ಚಕ್ರಂ ಶ್ರುತಿವಿಶ್ರುತವೈಭವಂ ।
ಪಂಚಾರಂ ಚಕ್ರಮಿತಿ ಹ ಸ್ತೌತಿ ಶ್ರುತಿರಿದಂ ಮುನೇ ॥ ೪೦ ॥

ಏಕಮೇವ ಜಗಚ್ಚಕ್ರಂ ಶಂಭೋಃ ಶಕ್ತಿವಿಜೃಂಭಿತಂ ।
ಸೃಷ್ಟ್ಯಾದಿಪಂಚಾವಯವಂ ಪಂಚಾರಮಿತಿ ಕಥ್ಯತೇ ॥ ೪೧ ॥

ಅಲಾತಚಕ್ರಭ್ರಮಿವದವಿಚ್ಛಿನ್ನಲಯೋದಯಂ ।
ಪರಿತೋ ವರ್ತತೇ ಯಸ್ಮಾತ್ತಸ್ಮಾಚ್ಚಕ್ರಮಿತೀರಿತಂ ॥ ೪೨ ॥

---

ಚತುರ್ಮುಖಬ್ರಹ್ಮಸಿಂದ ವ್ಯಾಪ್ತವಾಗಿರುವದು. ಬ್ರಹ್ಮನನ್ನು ಉಪಾಸನೆ ಮಾಡು ವವರು ಈ ಸ್ಥಾನವನ್ನು ಹೊಂದುವರು. ಅವರಿಗೆ ಸಾಲೋಕ್ಯವೇ ಮುಂತಾದ ಮೋಕ್ಷವನ್ನು ಈ ಚಕ್ರವು ಉಂಟುಮಾಡುವುದು.

೩೯. ಮಹೇಶಾದಿಕ್ರಮದಿಂದ ಹಿಂದೆ ಹೇಳಿದ ತಿರೋಧಾನ ಸಂಹಾರ ಸ್ಥಿತಿ ಸೃಷ್ಟಿಗಳೆಂಬ ನಾಲ್ಕು ಚಕ್ರಗಳಿಗೂ ಗೌಣವೃತ್ತಿಯಿಂದ ಪ್ರಣವವೇ ವಾಚಕವಾಗಿರು ವುದು. ಎಂದರೆ ಆಯಾಯ ಚಕ್ರಗಳಿಗೆ ಮಹೇಶನೇ ಮೊದಲಾದ ಬೇರೆಬೇರೆ ದೇವತೆ ಗಳು ಅಧಿಪತಿಗಳಾಗಿದ್ದರೂ ಮುಖ್ಯವಾಗಿ ಪ್ರಣವವೇ [ಪ್ರಣವವಾಚಕನಾದ ಮಹೇ ಶ್ವರನೇ] ಈ ಚಕ್ರಗಳಿಗೆ ಮುಖ್ಯವಾಚಕವಾಗಿರುವುದು.

೪೦-೪೧. ವೇದದಲ್ಲಿ ಪ್ರಸಿದ್ಧವಾದ ಮಹಿಮೆಯುಳ್ಳ ಜಗತ್ತೆಂಬ ಚಕ್ರವು ಇದೇ ಆಗಿರುವುದು. ವೇದವು ಇದನ್ನು ಐದು [ನೇಮಿ] ಕಾಲುಗಳುಳ್ಳ (spokes) ಚಕ್ರವೆಂದು ಹೊಗಳುತ್ತಿರುವುದು. ಈ ಜಗಚ್ಚಕ್ರವು ಶಂಭುವಿನ ಶಕ್ತಿಯಿಂದ ಪ್ರಕಾಶಿಸುತ್ತಿರುವುದು. ಸೃಷ್ಟಿಯೇ ಮೊದಲಾದ ಐದು ಕಾರ್ಯಗಳು ಈ ಚಕ್ರದಲ್ಲಿ ಐದು ಆರೇಕಾಲುಗಳಾಗಿರುವವು.

೪೨-೪೩. ಯಾವಾಗಲೂ ಉದಯ ಲಯಗಳೆಂಬ ಕಾರ್ಯಗಳು ಈ ಚಕ್ರದಲ್ಲಿ ಅಲಾತಚಕ್ರವು ಕೊಳ್ಳಿಯನ್ನು ತಿರುಗಿಸುವಂತೆ ಸುತ್ತುತ್ತಿರುವುದು. ಎಂದರೆ ಸೃಷ್ಟಿ

ಸೃಷ್ಟ್ಯಾದಿಪೃಥುಸೃಷ್ಟಿತ್ವಾತ್ಪೃಥುತ್ವೇನೋಪಪದ್ಯತೇ ।
ಹಿರಣ್ಮಯಸ್ಯ ದೇವಸ್ಯ ಶಂಭೋರಮಿತತೇಜಸಃ ॥ ೪೩ ॥

ಶಕ್ತಿಕಾರ್ಯಮಿದಂ ಚಕ್ರಂ ಹಿರಣ್ಯಜ್ಯೋತಿರಾಶ್ರಿತಂ ।
ಸಲಿಲೇನಾವೃತಮಿದಂ ಸಲಿಲಂ ವಹ್ನಿನಾವೃತಂ ॥ ೪೪ ॥

ಆವೃತೋ ವಾಯುನಾ ವಹ್ನಿರಾಕಾಶೇನಾವೃತಂ ಮಹತ್ ।
ಭೂತಾದಿನಾ ತಥಾಕಾಶೋ ಭೂತಾದಿರ್ಮಹತಾವೃತಃ ॥ ೪೫ ॥

ಅವ್ಯಕ್ತೇನಾವೃತಸ್ತದ್ವನ್ಮಹಾನಿತ್ಯೇವಮಾಸ್ತಿಕೈಃ ।
ಬ್ರಹ್ಮಾಂಡಮಿತಿ ಸಂಪ್ರೋಕ್ತಮಾಚಾರ್ಯೈರ್ಮುನಿಸತ್ತಮ ॥ ೪೬ ॥

ಉಕ್ತಾನಿ ಸಪ್ತಾವರಣಾನ್ಯಸ್ಯ ವಿಶ್ವಸ್ಯ ಗುಪ್ತಯೇ ।
ಚಕ್ರಾದ್ದಶಗುಣಾಧಿಕ್ಯಂ ಸಲಿಲಸ್ಯ ವಿಧೀಯತೇ ॥ ೪೭ ॥

---

ಮತ್ತು ಲಯಗಳು ಒಂದಾಗುತ್ತಲೊಂದು ಎಡಬಿಡದೆ ನಡೆಯುತ್ತಿರುವವು. ಆದ್ದರಿಂದಲೇ ಇದಕ್ಕೆ ಚಕ್ರವೆಂದು ಹೆಸರು ಬಂದಿತು. ಸೃಷ್ಟಿಯೇ ಮೊದಲಾದ ಕಾರ್ಯಗಳು ಬಹಳನಾಗಿ ಈ ಚಕ್ರದಲ್ಲಿ, ನಡೆಯುವುದರಿಂದ ಈ ಚಕ್ರವು ದೊಡ್ಡದಾಗಿರುವುದು ಅಪಾರತೇಜಶ್ಶಾಲಿಯಾದ ಚಿನ್ನದ ಕಾಂತಿಯುಳ್ಳ ಶಂಭುವಿನ ಶಕ್ತಿಯ ಕಾರ್ಯವಾಗಿರುವುದರಿಂದ ಈಚಕ್ರವು ಚಿನ್ನದಂತಿರುವ ಕಾಂತಿಯಿಂದ ಹೊಳೆಯುತ್ತಿರುವುದು.

೪೪-೪೬. ಈ ಚಕ್ರದ ಸುತ್ತಲೂ ನೀರು ಇರುವುದು. ಈ ನೀರಿನ ಸುತ್ತಲೂ ಬೆಂಕಿಯೂ, ಈ ಬೆಂಕಿಯುಸುತ್ತಲೂ, ಗಾಳಿಯೂ, ಈ ಗಾಳಿಯುಸುತ್ತಲೂ, ಆಕಾಶವೂ ಈ ಆಕಾಶವು ಭೂತಸೂಕ್ಷ್ಮಗಳಿಂದಲೂ, ಈಪಂಚತನ್ಮಾತ್ರವು ಮಹತ್ತತ್ತ್ವದಿಂದಲೂ ಈ ಮಹತ್ತತ್ವವು ಅವ್ಯಕ್ತದಿಂದಲೂ, ಆವೃತವಾಗಿರುವುದು. ಎಲೈ ಋಷಿಶ್ರೇಷ್ಠನೇ ಕೇಳು. ಆಸ್ತಿಕರಾದ ದೊಡ್ಡವರು ಈ ಪ್ರಕಾರದಿಂದ ಇರುವ ಇದನ್ನು ಬ್ರಹ್ಮಾಂಡವೆಂದು ಹೇಳುತ್ತಾರೆ.

೪೭. ಈ ಪ್ರಪಂಚದ ರಕ್ಷಣೆಗಾಗಿ ಏಳು ಆವರಣಗಳು ಇರುವವು. ಇದರ ಕ್ರಮವನ್ನು ಹೇಳಿರುವೆನು. ಈಚಕ್ರಕ್ಕಿಂತಲೂ, ಹತ್ತರಷ್ಟು ಹೆಚ್ಚಾಗಿರುವ ನೀರು ಈ ಚಕ್ರದಸುತ್ತಲೂ ಇರುವುದು.

**ಉಪರ್ಯುಪರಿ ಚಾನ್ಯೋನ್ಯಮೇವಂ ದಶಗುಣಾಧಿಕಂ ।**
**ಬ್ರಹ್ಮಾಂಡಮಿತಿ ವಿಜ್ಞೇಯಂ ತದ್ವಿಜ್ಞೈರ್ಮುನಿನಾಯಕ　　॥ ೪೮ ॥**

**ಇಮಮರ್ಥಮುರೀಕೃತ್ಯ ಚಕ್ರಸಾಮೀಪ್ಯವರ್ತನಾತ್ ।**
**ಸಲಿಲಸ್ಯ ಚ ತನ್ಮಧ್ಯೇ ಇತಿ ಪ್ರಾಹ ಶ್ರುತಿಸ್ಸ್ವಯಂ　　॥ ೪೯ ॥**

**ಅನುಗ್ರಹತಿರೋಭಾವಸಂಹೃತಿಸ್ಥಿತಿಸೃಷ್ಟಿಭಿಃ ।**
**ಕರೋತ್ಯವಿರತಂ ಲೀಲಾಮೇಕಶ್ಶಕ್ತಿಯುತಶ್ಶಿವಃ　　॥ ೫೦ ॥**

**ಬಹುನೇಹ ಕಿಮುಕ್ತೇನ ಮುನೇ ಸಾರಂ ವದಾಮಿ ತೇ ।**
**ಶಿವ ಏವೇದಮಖಿಲಂ ಶಕ್ತಿಮಾನಿತಿ ನಿಶ್ಚಿತಂ　　॥ ೫೧ ॥**

**ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ**
**ಉಪಾಸನಾಮೂರ್ತಿವರ್ಣನಂ ನಾಮ ಪಂಚದಶೋಽಧ್ಯಾಯಃ**

---

೪೮. ಈ ನೀರಿನಂತೆಯೇ ಗಾಳಿ, ಅಗ್ನಿ, ಆಕಾಶ, ಪಂಚತನ್ಮಾತ್ರ, ಮಹ ತತ್ತ್ವ, ಅವ್ಯಕ್ತ, ಎಂಬಿವು ಪ್ರತಿಯೊಂದೂ, ಒಂದರನಂತರ ಮತ್ತೊಂದು ಇರುವ ಕ್ರಮವನ್ನು ಅನುಸರಿಸಿ ಪ್ರತಿಯೊಂದೂ ಅದರ ಹತ್ತರಷ್ಟು ಹೆಚ್ಚಾಗಿ ಇರುವವು. ಎಲೈ ಋಷಿಶ್ರೇಷ್ಠನೇ ಕೇಳು. ಇದನ್ನು ಬ್ರಹ್ಮಾಂಡವೆಂದು ಮುನಿಗಳು ಹೇಳುವರು.

೪೯. ಈ ಅರ್ಥವನ್ನನುಸರಿಸಿ, ವೇದವು ಚಕ್ರದ ಸಮೀಪದಲ್ಲಿರುವ ಕಾರಣ "ಸಲಿಲಸ್ಯ ಚ ತನ್ಮಧ್ಯೇ" ನೀರಿನ ಮತ್ತು ಆ ನೀರಿನ ಮಧ್ಯದಲ್ಲಿ ಎಂದು ಹೇಳು ತ್ತಿರುವುದು.

೫೦-೫೧. ಶಿವನು ತನ್ನ ಶಕ್ತಿಯಿಂದ ತಾನೊಬ್ಬನೇ ಅನುಗ್ರಹ, ತಿರೋಭಾವ, ಸಂಹಾರ, ಸ್ಥಿತಿ, ಸೃಷ್ಟಿ ಎಂಬ ಐದು ಕಾರ್ಯಗಳನ್ನು ಲೀಲೆಯಿಂದಲೇ ಯಾವಾ ಗಲೂ ಮಾಡುತ್ತಿರುವನು. ಎಲೈ ಮುನಿಯೇ ಕೇಳು. ಈ ವಿಷಯದಲ್ಲಿ ಬಹಳ ವಾಗಿ ಹೇಳಿದ್ದರಿಂದ ಏನು ಪ್ರಯೋಜನವು? ನಿನಗೆ ಸಾರವಾದ ಅಂಶವನ್ನು ಹೇಳು ವೆನು. ಶಿವನೊಬ್ಬನೇ ಸಮಸ್ತ ಶಕ್ತಿಯುಳ್ಳವನು. ಅವನೊಬ್ಬನೇ ಈ ಎಲ್ಲ ರೂಪ ದಿಂದಿರುವನು. ಇದು ನಿಶ್ಚಯವು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಉಪಾಸನಾ ಮೂರ್ತಿ ವರ್ಣನವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾಪುರಾಣೇ

## ಕೈಲಾಸಸಂಹಿತಾಯಾಂ

## ಷೋಡಶೋಽಧ್ಯಾಯಃ



॥ ಸೂತ ಉವಾಚ ॥

ಶ್ರುತ್ವೋಪದಿಷ್ಟಂ ಗುರುಣಾ ವೇದಾರ್ಥಂ ಮುನಿಪುಂಗವಃ ।
ಪರಮಾತ್ಮನಿ ಸಂದಿಗ್ಧಂ ಪರಿಪಪ್ರಚ್ಛ ಸಾದರಂ ॥ ೧ ॥

॥ ವಾಮದೇವ ಉವಾಚ ॥

ಜ್ಞಾನಶಕ್ತಿಧರ ಸ್ವಾಮಿನ್ಪರಮಾನಂದವಿಗ್ರಹ ।
ಪ್ರಣವಾರ್ಥಾಮೃತಂ ಪೀತಂ ಶ್ರೀಮುಖಾಬ್ಜಾತ್ಪರಿಸ್ರುತಂ ॥ ೨ ॥

---

### ಹದಿನಾರನೆಯ ಅಧ್ಯಾಯ.

೧. ಸೂತಮುನಿಯಿಂತೆಂದನು—ಮುನಿಶ್ರೇಷ್ಠನಾದ ವಾಮದೇವಋಷಿಯು ಗುರುವಾದ ಷಣ್ಮುಖನು ಹೇಳಿದ ವೇದಾರ್ಥವೆಲ್ಲವನ್ನೂ ಕೇಳಿ, ತನಗೆ ಪರಮಾತ್ಮನ ವಿಷಯದಲ್ಲಿ ಉಂಟಾಗಿರುವ ಸಂಶಯವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ವಿಶ್ವಾಸದಿಂದ ಆ ಕುಮಾರಸ್ವಾಮಿಯನ್ನು ಮತ್ತೆ ಪ್ರಶ್ನೆ ಮಾಡಿದನು.

೨. ಎಲೈ ಪ್ರಭುವೇ, ನೀನು ಜ್ಞಾನಶಕ್ತಿಯನ್ನು ಧರಿಸಿರುತ್ತೀಯೆ. ಉತ್ತಮವಾದ ಆನಂದರೂಪದಿಂದ ಇರುತ್ತೀಯೆ. ನಿನ್ನ ಮುಖಕಮಲದಿಂದ ಹೊರಹೊರಟ ಪ್ರಣವಮಂತ್ರದ ಅರ್ಥವೆಂಬ ಅಮೃತವನ್ನು ನಾನು ಪಾನಮಾಡಿರುವೆನು.

ದೃಢಪ್ರಜ್ಞಶ್ಚ ಜಾತೋಽಸ್ಮಿ ಸಂದೇಹೋ ವಿಗತೋ ಮಮ ।
ಕಿಂಚಿದನ್ಯನ್ಮಹಾಸೇನ ಪೃಚ್ಛಾಮಿ ತ್ವಾಂ ಶೃಣು ಪ್ರಭೋ ॥ ೩ ॥

ಸದಾಶಿವಾದಿಕೀಟಾಂತರೂಪಸ್ಯ ಜಗತಃ ಸ್ಥಿತಿಃ ।
ಸ್ತ್ರೀಪುಂರೂಪೇಣ ಸರ್ವತ್ರ ದೃಶ್ಯತೇ ನ ಹಿ ಸಂಶಯಃ ॥ ೪ ॥

ಏವಂ ರೂಪಸ್ಯ ಜಗತಃ ಕಾರಣಂ ಯತ್ಸನಾತನಂ ।
ಸ್ತ್ರೀರೂಪಂ ತತ್ಕಿಮಾಹೋಸ್ವಿತ್ಪುರುಷೋ ವಾ ನಪುಂಸಕಃ ॥ ೫ ॥

ಉತ ಮಿಶ್ರಂ ಕಿಮನ್ಯದ್ವಾ ನ ಜಾತಸ್ತತ್ರ ನಿರ್ಣಯಃ ।
ಬಹುಧಾ ವಿವದಂತೀಹ ವಿದ್ವಾಂಸಶ್ಶಾಸ್ತ್ರಮೋಹಿತಾಃ ॥ ೬ ॥

ಜಗತ್ಸೃಷ್ಟಿವಿಧಾಯಿನ್ಯಃ ಶ್ರುತಯೋ ಜಗತಾ ಸಹ ।
ವಿಷ್ಣುಬ್ರಹ್ಮಾದಯೋ ದೇವಾಃ ಸಿದ್ಧಾಶ್ಚ ನ ವಿದಂತಿ ಹಿ ॥ ೭ ॥

---

೩–೪. ಈ ನಿನ್ನ ಮಾತನ್ನು ಕೇಳಿದ್ದರಿಂದ ನನ್ನ ಸಂದೇಹವೆಲ್ಲವೂ ಪರಿಹಾರವಾಯಿತು. ದೃಢವಾದ ಜ್ಞಾನವು ಉದಿಸಿತು. ಎಲೈ ಪ್ರಭುವಾದ ಮಹಾಸೇನನೇ, ನಾನು ಇನ್ನೊಂದು ವಿಷಯವನ್ನು ಪ್ರಶ್ನೆಮಾಡುವೆನು. ಅದನ್ನು ಕೇಳು. ಸದಾಶಿವನೇ ಮೊದಲಾಗಿ ಸಣ್ಣಕ್ರಿಮಿಯವರಿಗೂ ಎಲ್ಲರೂ ಆಕಾರವನ್ನು [ಶರೀರವನ್ನು] ಧರಿಸಿಕೊಂಡು ಈ ಜಗತ್ತಿನಲ್ಲಿರುವರು. ಇವರುಗಳು ಪ್ರಾಯಿಕವಾಗಿ ಸ್ತ್ರೀರೂಪ ಅಥವಾ ಪುರುಷನರೂಪದಿಂದ ಇರುವರು. ಇದೇ ಜಗತ್ತಿನ ಸ್ಥಿತಿಯು. ಇದರಲ್ಲಿ ಸಂಶಯವಿಲ್ಲ.

೫-೬. ಈ ರೂಪದಿಂದಿರುವ ಜಗತ್ತಿಗೆ ಕಾರಣವಾಗಿ ನಿತ್ಯವೆಂದು ಹೇಳಲ್ಪಡುವ ಬ್ರಹ್ಮನ ರೂಪವು ಸ್ತ್ರೀರೂಪವೋ, ಪುರುಷನ ಆಕಾರವೋ, ಅಥವಾ ನಪುಂಸಕರೂಪವೋ, ಅಥವಾ ಗಂಡುಹೆಣ್ಣು ಎಂಬ ಎರಡು ಲಕ್ಷಣಗಳಿಂದ ಕೂಡಿರುವ ಮಿಶ್ರರೂಪವೋ, ಅಥವಾ ಇದಕ್ಕಿಂತಲೂ ಬೇರೆಯಾಗಿರುವ ರೂಪವೋ, ಯಾವುದೂ ಗೊತ್ತಿಲ್ಲದೆ ಇರುವುದು. ಈ ವಿಷಯದಲ್ಲಿ ಶಾಸ್ತ್ರಗಳನ್ನು ತಿಳಿದವರು ಆಯಾಯ ಶಾಸ್ತ್ರದ ಮರ್ಯಾದೆಯನ್ನು ಅನುಸರಿಸಿ ಬಹಳವಾಗಿ ವಾದವಿವಾದಗಳನ್ನು ಮಾಡುವರು.

೭–೮. ಜಗತ್ತಿನ ಸೃಷ್ಟಿಯಕ್ರಮವನ್ನು ಹೇಳುವ ಶ್ರುತಿಗಳೂ, ಜಗತ್ತೂ, ಬ್ರಹ್ಮ, ವಿಷ್ಣು ಇವರೇ ಮೊದಲಾದ ದೇವತೆಗಳೂ, ಸಿದ್ಧರೂ ಕೂಡ ಈ ವಿಷಯ

ಯಥೈಕ್ಯಭಾವಂ ಗಚ್ಛೇಯುರೇತದಸ್ಯಚ್ಚ ವೇದಯ ।
ಜಾನಾಮೀತಿ ಕರೋಮೀತಿ ವ್ಯವಹಾರಃ ಪ್ರದೃಶ್ಯತೇ ॥ ೮ ॥

ಸ ಹಿ ಸರ್ವಾತ್ಮಸಂಸಿದ್ಧೋ ವಿವಾದೋ ನಾತ್ರ ಕಸ್ಯಚಿತ್ ।
ಸರ್ವದೇಹೇಂದ್ರಿಯಮನೋಬುಧ್ಯಹಂಕಾರಸಂಭವಃ ॥ ೯ ॥

ಆಹೋಸ್ವಿದಾತ್ಮನೋ ರೂಪಂ ಮಹಾನತ್ರಾಪಿ ಸಂಶಯಃ ।
ದ್ವಯಮೇತದ್ಧಿ ಸರ್ವೇಷಾಂ ವಿವಾದಾಸ್ಪದಮುದ್ಭೃತಂ ॥ ೧೦ ॥

ಉತ್ಪಾಟ್ಯಾಜ್ಞಾನಸಂಭೂತಂ ಸಂಶಯಾಖ್ಯಂ ವಿಷದ್ರುಮಂ ।
ಶಿವಾದ್ವೈತಮಹಾಕಲ್ಪವೃಕ್ಷಭೂಮಿರ್ಯಥಾ ಭವೇತ್ ॥ ೧೧ ॥

---

ವನ್ನು ತಿಳಿದಿಲ್ಲ. ಶಿವನನ್ನು ಉಪಾಸನೆ ಮಾಡುವವರು ಯಾವ ಪ್ರಕಾರದಿಂದ ಶಿವನಲ್ಲಿ ಐಕ್ಯವನ್ನು ಹೊಂದುವರು ಎಂಬುದನ್ನೂ ತಿಳಿಸು. "ನಾನು ತಿಳಿಯುತ್ತೇನೆ." "ನಾನು ಮಾಡುತ್ತೇನೆ" ಎಂಬ ವ್ಯವಹಾರವು ಲೋಕದಲ್ಲಿರುವದು. ಈ ವ್ಯವಹಾರದಲ್ಲಿ ನಾನು ಎಂಬುವ ಪದಾರ್ಥವು ಬೇರೆಯಾಗಿರುವುದರಿಂದ ಈ ವಿಷಯವನ್ನು ಎಲ್ಲರೂ ತಿಳಿದಿರುವರು. ಈ ವಿಷಯದಲ್ಲಿ ಯಾರೂ ಸಂಶಯಪಡಬೇಕಾಗಿಲ್ಲವಷ್ಟೆ ?

೯-೧೨. ಈ ವ್ಯವಹಾರಕ್ಕೆ ಆಸ್ಪದವಾಗಿರುವ ನಾನು ಎಂಬ ಪದಾರ್ಥವು — ಎಲ್ಲಾ ಶರೀರಗಳು, ಇಂದ್ರಿಯಗಳು, ಮನಸ್ಸು, ಬುದ್ಧಿ ಅಹಂಕಾರ ಇವುಗಳಿಂದ ಹುಟ್ಟಿದ ಪದಾರ್ಥವಾಗಿರುವುದೋ ಅಥವಾ ಆತ್ಮನ ರೂಪವೋ ಎಂಬುದಾಗಿ ನನಗೆ ಬಹಳ ಸಂಶಯವುಂಟಾಗಿರುವುದು. ಈ ಎರಡು ವಿಧವಾದ ವಿಷಯವು ನನಗೊಬ್ಬನಿಗೇ ಅಲ್ಲದೆ ಎಲ್ಲರಿಗೂ ಸಂಶಯಕ್ಕೆ ಆಸ್ಪದವಾಗಿ ಆಶ್ಚರ್ಯವನ್ನುಂಟುಮಾಡುತ್ತಿರುವುದು. ಅಜ್ಞಾನದಿಂದ ಹುಟ್ಟಿದ ಸಂಶಯವೆಂಬ ವಿಷದ ಮರವನ್ನು ಕಿತ್ತುಹಾಕಿ ಶಿವಾದ್ವೈತವೆಂಬ ದೊಡ್ಡ ಕಲ್ಪವೃಕ್ಷವು ನನ್ನ ಮನಸ್ಸಿನಲ್ಲಿ ಹುಟ್ಟುವ ಹಾಗೆಯೂ, ಹೇಗೆ ಉಪದೇಶಮಾಡಿದರೆ ನನ್ನ ಮನಸ್ಸು ಶಿವಾದ್ವೈತಭಾವವನ್ನು ಹೊಂದುವುದೋ ಆ ಪ್ರಕಾರದಿಂದ ದಯವಿಟ್ಟು ಉಪದೇಶವನ್ನು ಮಾಡು. ಆ ಉಪದೇಶವನ್ನು ಹೊಂದಲು ನಾನು ಸಿದ್ಧನಾಗಿರುವೆನು. ಎಲೈ ದೇವಾಧಿಪನಾದ

ಚಿತ್ತಂ ಮಮ ಯಥಾ ದೇವ ಬೋಧ್ಯೋಽಸ್ಮಿ ಕೃಪಯಾ ತವ ।
ಕೃಪಾತಸ್ತವ ದೇವೇಶ ದೃಢಜ್ಞಾನೀ ಭವಾಮ್ಯಹಂ　　　　॥ ೧೨ ॥

॥ ಸೂತ ಉವಾಚ ॥

ಶ್ರುತ್ವೈವಂ ಮುನಿನಾ ಪೃಷ್ಟಂ ವಚೋ ವೇದಾಂತನಿರ್ವೃತಂ ।
ರಹಸ್ಯಂ ಪ್ರಭುರಾಹೇದಂ ಕಿಂಚಿತ್ಪ್ರಹಸಿತಾನನಃ　　　　॥ ೧೩ ॥

॥ ಸುಬ್ರಹ್ಮಣ್ಯ ಉವಾಚ ॥

ಏತದೇವ ಮುನೇ ಗುಹ್ಯಂ ಶಿವೇನ ಪರಿಭಾಷಿತಂ ।
ಅಂಬಾಯಾಃ ಶೃಣ್ವತೋ ದೇವ್ಯಾ ವಾಮದೇವ ಮಮಾಪಿ ಹಿ　　　　॥ ೧೪ ॥

ತಸ್ಯಾಃ ಸ್ತನ್ಯಂ ತದಾ ಪೀತ್ವಾ ಸಂತೃಪ್ತೋಽಸ್ಮಿ ಮುಹುರ್ಮುಹುಃ ।
ಶ್ರುತವಾನ್ನಿಶ್ಚಲಂ ತದ್ವೈ ನಿಶ್ಚಿತಂ ಮೇ ವಿಚಾರಿತಂ　　　　॥ ೧೫ ॥

---

ಷಣ್ಮುಖನೇ, ನಿನ್ನ ದಯೆಯಿಂದ ನಾನು ದೃಢವಾದ ಜ್ಞಾನವುಳ್ಳವನಾಗುವಂತೆ ಮಾಡು ಎಂದು ಪ್ರಾರ್ಥಿಸಿದನು.

೧೩. ಸೂತನಿಂತೆಂದನು :—ವೇದಾಂತಸಾರ ವಿಷಯವನ್ನೂ, ರಹಸ್ಯವನ್ನೂ ಕೇಳಬಯಸುತ್ತಿರುವ ಆ ವಾಮದೇವಋಷಿಯ ಮಾತನ್ನು ಕೇಳಿ, ಪ್ರಭುವಾದ ಕುಮಾರಸ್ವಾಮಿಯು ಮಂದಹಾಸವನ್ನು ಸೂಸುತ್ತಾ ಇಂತೆಂದನು.

೧೪-೧೬. ಸುಬ್ರಹ್ಮಣ್ಯನು ಹೇಳಿದನು :—ಎಲೈ ಮುನಿಯೇ ಕೇಳು. ಜಗನ್ಮಾತೆಯಾದ ಪಾರ್ವತಿಯು ಪರಮೇಶ್ವರನನ್ನು ಈ ವಿಷಯವಾಗಿ ಪ್ರಶ್ನೆಮಾಡಿ ಕೇಳಿದಾಗ ಶಿವನು ಈ ಪ್ರಶ್ನೆಗೆ ಉತ್ತರವನ್ನು ಹೇಳಿರುವನು. ನಾನೂ ಕೂಡ ಅದೆಲ್ಲವನ್ನೂ ಕೇಳಿರುವೆನು. ನಾನು ಅನೇಕಸಲ ಆ ದೇವಿಯ ಸ್ತನ್ಯಪಾನಮಾಡಿ ತೃಪ್ತನಾಗಿರುವೆನು. ನಿಶ್ಚಲವಾಗಿದ್ದುಕೊಂಡು ಆ ಸಂವಾದವೆಲ್ಲವನ್ನೂ ಕೇಳಿರುವೆನು. ಮನನಮಾಡಿರುವೆನು. ನಾನು ದಯೆಯಿಂದ ಅದನ್ನು ನಿನಗೆ ಹೇಳುವೆನು. ಅದು ಬಹಳ ದೊಡ್ಡ ವಿಷಯವಾಗಿಯೂ, ಬಹಳ ರಹಸ್ಯವಾಗಿಯೂ ಇರುವುದು. ಬಹಳ

ತತ್ತೇ ವದಾಮಿ ದಯಯಾ ವಾಮದೇವ ಮಹಾಮುನೇ ।
ಮಹದ್ಗುಹ್ಯಂ ಚ ಪರಮಂ ಸುತ ತ್ವಂ ಶೃಣು ಸಾಂಪ್ರತಂ ॥ ೧೬ ॥

ಕರ್ಮಾಸ್ತಿತತ್ತ್ವಾದಾರಭ್ಯ ಶಾಸ್ತ್ರವಾದಸ್ಸುವಿಸ್ತರಃ ।
ಯಥಾವಿವೇಕಂ ಶ್ರೋತವ್ಯೋ ಜ್ಞಾನಿನಾ ಜ್ಞಾನದೋ ಮುನೇ ॥ ೧೭ ॥

ತ್ವಯೋಪದಿಷ್ಟಾ ಯೇ ಶಿಷ್ಯಾಸ್ತತ್ರ ಕೋ ವಾ ಭವತ್ಸಮಃ ।
ಕಪಿಲಾದಿಷು ಶಾಸ್ತ್ರೇಷು ಭ್ರಮಂತ್ಯದ್ಯಾಪಿ ತೇಽಧಮಾಃ ॥ ೧೮ ॥

ತೇ ಶಪ್ತಾ ಮುನಿಭಿಃ ಷಡ್ಭಿಶ್ಶಿವನಿಂದಾಪರಾಃ ಪುರಾ ।
ನ ಶ್ರೋತವ್ಯಾ ಹಿ ತದ್ವಾರ್ತಾಸ್ತೇಽನ್ಯಥಾ ವಾದಿನೋ ಯತಃ ॥ ೧೯ ॥

ಅನುಮಾನಪ್ರಯೋಗಸ್ಯಾಪ್ಯವಕಾಶೋ ನ ವಿದ್ಯತೇ ।
ಪಂಚಾವಯವಯುಕ್ತಸ್ಯ ಸ ತು ಧೂಮಸ್ಯ ದರ್ಶನಾತ್ ॥ ೨೦ ॥

---

ಉತ್ತಮವಾದ ಈ ವಿಷಯವನ್ನು ಈಗ ಹೇಳುವೆನು. ಎಲೈ ಪುತ್ರನೇ, ನೀನು ಇದನ್ನು ಆದರದಿಂದ ಕೇಳು.

೧೭. ಜ್ಞಾನಿಯಾದವನು, ಕರ್ಮಗಳನ್ನು ಬೋಧಿಸುವ ಶಾಸ್ತ್ರಗಳನ್ನು ಮೊದಲುಗೊಂಡು ಬಹಳ ವಿಸ್ತಾರವಾಗಿರುವ ಜ್ಞಾನವನ್ನುಂಟುಮಾಡುವ, ಶಾಸ್ತ್ರಗಳನ್ನು ತನಗಿರುವ ವಿವೇಕಕ್ಕನುಸಾರವಾಗಿ ತಿಳಿದುಕೊಳ್ಳಬೇಕು.

೧೮-೧೯. ನಿನ್ನಿಂದ ಉಪದೇಶವನ್ನು ಪಡೆದ ನಿನ್ನ ಶಿಷ್ಯರಲ್ಲಿ ಯಾರು ತಾನೇ ನಿನಗೆ ಸಮನಾಗಿರುವರು ? ಅವರು ಕಪಿಲಋಷಿಯು ಮಾಡಿರುವ ಶಾಸ್ತ್ರಗಳನ್ನು ನಂಬಿಕೊಂಡು ನೀಚರಾಗಿ ಈಗಲೂ ಭ್ರಾಂತರಾಗಿರುವರು. ಅವರೆಲ್ಲರೂ ಶಿವಜ್ಞಾನರಹಿತರಾಗಿ ಬೇರೆಯ ವಿಧವಾಗಿ ಹೇಳುತ್ತಾ ಇರುವುದರಿಂಧ ಅವರ ಮಾತುಗಳನ್ನು ಕೇಳಬಾರದು. ಅವರು ಶಿವನ ನಿಂದೆಯನ್ನು ಮಾಡುವುದರಲ್ಲಿ ಆಸಕ್ತರಾಗಿರುವುದರಿಂದ ಪೂರ್ವದಲ್ಲಿ ಆರುಜನ ಋಷಿಗಳು ಅವರಿಗೆ ಶಾಪವನ್ನು ಕೊಟ್ಟಿರುವರು.

೨೦-೨೧. ಪಂಚಾವಯವ ಎಂದರೆ ಪ್ರತಿಜ್ಞಾ, ಹೇತು, ಉದಾಹರಣ, ಉಪಮೇಯ, ವಿನಿಮಯ ಎಂಬ ಐದು ಅವಯವಗಳುಳ್ಳ ಅನುಮಾನ ಪ್ರಮಾಣಕ್ಕೆ ಇಲ್ಲಿ ಅವಕಾಶವೇ ಇರುವುದಿಲ್ಲ. ಪರ್ವತದಲ್ಲಿ ಹೊಗೆಯು ಇರುವುದನ್ನು ನೋಡಿ ಅಲ್ಲಿ ಅಗ್ನಿಯು ಇದ್ದೇ ಇರುವುದೆಂದು ಅಗ್ನಿಸದ್ಭಾವವನ್ನು ತಾರ್ಕಿಕರು ಊಹಿಸಿ ಹೇಳು

ಪರ್ವತಸ್ಯಾಗ್ನಿಮುದ್ಭಾವಂ ವದಂತ್ಯತ್ರಾಪಿ ಸುವ್ರತ ।
ಪ್ರತ್ಯಕ್ಷಸ್ಯ ಪ್ರಪಂಚಸ್ಯ ದರ್ಶನಾಲಂಬನಂ ತ್ವತಃ ॥ ೨೧ ॥

ಜ್ಞಾತವ್ಯಃ ಪರಮೇಶಾನಃ ಪರಮಾತ್ಮಾ ನ ಸಂಶಯಃ ।
ಸ್ತ್ರೀಪುಂರೂಪಮಯಂ ವಿಶ್ವಂ ಪ್ರತ್ಯಕ್ಷೇಣೈವ ದೃಶ್ಯತೇ ॥ ೨೨ ॥

ಷಟ್ಕೋಶರೂಪಃ ಪಿಂಡೋ ಹಿ ತತ್ರ ಚಾದ್ಯತ್ರಯಂ ಭವೇತ್ ।
ಮಾತ್ರಂಶಜಂ ಪುನಶ್ಚಾನ್ಯತ್ಪಿತ್ರಂಶಜಮಿತಿ ಶ್ರುತಿಃ ॥ ೨೩ ॥

ಏವಂ ಸರ್ವಶರೀರೇಷು ಸ್ತ್ರೀಪುಂಭಾವವಿದೋ ಜನಾಃ ।
ಪರಮಾತ್ಮನ್ಯಪಿ ಮುನೇ ಸ್ತ್ರೀಪುಂಭಾವವಿದುರ್ಬುಧಾಃ ॥ ೨೪ ॥

---

ಪರು. ಪ್ರತ್ಯಕ್ಷವಾಗಿರುವ ಪ್ರಪಂಚದ ದರ್ಶನದಿಂದ ಎಂದರೆ ಪ್ರತ್ಯಕ್ಷಪ್ರಮಾಣ ದಿಂದಲೇ ಪರಮೇಶ್ವರನನ್ನು ತಿಳಿಯುವುದಕ್ಕೆ ಸಾಧ್ಯವಾಗಿರುವಾಗ ಅನುಮಾನ ಪ್ರಮಾಣವೇತಕ್ಕೆ? ಈ ವಿಷಯದಲ್ಲಿ ಸಂಶಯಪಡಬಾರದು.

೨೨-೨೪. ಸ್ತ್ರೀಪುರುಷರ ರೂಪದಿಂದ ಕೂಡಿರುವ ಜೀವರುಗಳಿಂದ ಪ್ರಪಂಚವು ತುಂಬಿರುವುದು. ಪ್ರತ್ಯಕ್ಷವಾಗಿ ಕಾಣುತ್ತಿರುವುದು. ಈ ಪಾಂಚಭೌತಿಕಶರೀರವು ಆರು ಕೋಶರೂಪವುಳ್ಳದ್ದಾಗಿರುವುದು. ಅವುಗಳಲ್ಲಿ ಮೂರು ಕೋಶಗಳು ಎಂದರೆ ಅಸ್ಥಿ, ಸ್ನಾಯು, ಮಜ್ಜಾ ಇವುಗಳು ತಂದೆಯ ಅಂಶ ಗಳಾಗಿಯೂ ಚರ್ಮ, ಮಾಂಸ, ರಕ್ತ ಈ ಮೂರೂ ತಾಯಿಯ ಅಂಶಗಳಾಗಿಯೂ ಇರುವವೆಂದು ವೇದವು ಹೇಳುವುದು. ಎಲ್ಲಾ ಶರೀರಗಳ ವಿಷಯದಲ್ಲಿಯೂ, ಇದೇ ಪ್ರಕಾರವಾಗಿರುವುದೆಂದು ಸ್ತ್ರೀಪುರುಷರ ಸ್ವರೂಪವನ್ನು ತಿಳಿದಿರುವ ಜನರು ಪರ ಮಾತ್ಮನಲ್ಲಿಯೂ ಕೂಡ ಸ್ತ್ರೀಪುರುಷಭಾವವನ್ನು ಕಲ್ಪಿಸುವರು. ಪರಮಾತ್ಮನಿಗೆ ಆ ಲಿಂಗಭೇದವಿಲ್ಲ ಎಂದರೆ ಪರಮಾತ್ಮನೂ ಪುರುಷನೂ ಅಲ್ಲ ಸ್ತ್ರೀಯೂ ಅಲ್ಲ, ನಪುಂಸಕವಸ್ತುವೂ ಅಲ್ಲ. ಇವೆಲ್ಲಾ ಜಗದ್ವ್ಯವಹಾರಕ್ಕಾಗಿ ಪರಮೇಶ್ವರನೇ ಕಲ್ಪಿಸಿರುವ ರೂಪಗಳು. "ನತಸ್ಯ ಕಶ್ಚಿತ್ಪತಿರಸ್ತಿ ಲೋಕೇ ನ ಚೇಶಿತಾ ನೈವ ಚ ತಸ್ಯ ಲಿಂಗಂ" ಎಂದು ಶ್ವೇತಾಶ್ವರೋಪನಿಷತ್ತಿನಲ್ಲಿ ಹೇಳಿರುವುದು. [ಶ್ವೆ. ಉ. ೬-೮.] ಇಲ್ಲಿ ಪ್ರಕಾರಾಂತರವಾಗಿ ಕೆಲವರ ಅಭಿಮತದಂತೆ ಪರಮಾತ್ಮನ ಸಚ್ಚಿದ್ರೂಪಗಳನ್ನೇ ಪುರುಷಸ್ತ್ರೀರೂಪಗಳನ್ನಾಗಿ ಭಾವಿಸಿ ವಿವರಿಸುವರು.

ಸಚ್ಚಿದಾನಂದರೂಪತ್ವಂ ವದತಿ ಬ್ರಹ್ಮಣಃ ಶ್ರುತಿಃ ।
ಅಸನ್ನಿವರ್ತಕಃ ಶಬ್ದಃ ಸದಾತ್ಮೇತಿ ನಿಗದ್ಯತೇ ॥ ೨೫ ॥

ನಿವರ್ತನಂ ಜಗತ್ತ್ವಸ್ಯ ಚಿಚ್ಛಬ್ದೇನ ವಿಧೀಯತೇ ।
ತ್ರಿಲಿಂಗವರ್ತೀ ಸಚ್ಛಬ್ದಃ ಪುರುಷೋಽತ್ರ ವಿಧೀಯತಾಂ ॥ ೨೬ ॥

ಪ್ರಕಾಶವಾಚೀ ಸ ಭವೇತ್ಸಪ್ರಕಾಶ ಇತಿ ಸ್ಫುಟಂ ।
ಜ್ಞಾನಶಬ್ದಸ್ಯ ಪರ್ಯಾಯಶ್ಚಿಚ್ಛಬ್ದಃ ಸ್ತ್ರೀತ್ವಮಾಗತಃ ॥ ೨೭ ॥

---

೨೫-೨೬. "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಆನಂದೋ ಬ್ರಹ್ಮೇತಿ ವ್ಯಜಾನಾತ್" [ತೈ. ಉ.] ಮುಂತಾದ ಶ್ರುತಿಗಳು ಬ್ರಹ್ಮನಿಗೆ ಸಚ್ಚಿದಾನಂದ ರೂಪವು ಇರುವುದೆಂದು ಹೇಳುವುದು. ಅಸತ್ ಎಂಬ ಶಬ್ದವು ನಿವರ್ತಕಪರವಾಗಿ ರುವುದು ಎಂದರೆ ಪ್ರಪಂಚದಲ್ಲಿರುವ ವಸ್ತುಗಳಿಗಿಂತ ಬೇರೆಯಾದದ್ದು ಅಥವಾ ವಿಲಕ್ಷಣವಾದದ್ದು. ಇದು ಅವ್ಯಕ್ತರೂಪದಿಂದ ಸಮಸ್ತ ವಿಶ್ವವನ್ನೂ ವ್ಯಾಪಿಸಿ ಇರುವುದು. ಇದಕ್ಕೆ ನಾಶವಿಲ್ಲ. ಸೃಷ್ಟಿಗೆ ಪೂರ್ವದಲ್ಲಿ ಇದೇ ಇದ್ದಿತು. "ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ" ಎಂದು ಶ್ರುತಿಯು ಹೇಳುವುದು ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಅಸತ್ಪದಾರ್ಥ ಎಂದರೆ ಅವ್ಯಕ್ತರೂಪದಿಂದಿರುವ ಪರಬ್ರಹ್ಮವೊಂದೇ ಎಲ್ಲೆಲ್ಲಿಯೂ ಇದ್ದಿತು. ಅದರಿಂದ ಸತ್ ಎಂದರೆ ವ್ಯಕ್ತರೂಪವು ಉಂಟಾಯಿತು. ಇದಕ್ಕೆ ಆತ್ಮವೆಂದು ಹೆಸರು. "ಸದೈವ ಸೌಮ್ಯೇದಮಗ್ರ ಆಸೀತ್" ಎಂತಲೂ ಶ್ರುತಿ ಇರುವುದು. ಜಡಪದಾರ್ಥವಾದ ಜಗತ್ತಿಗಿಂತಲೂ ಭಿನ್ನವಾದ ಸತ್ಪದಾರ್ಥವು. ಚಿಚ್ಛಬ್ದದಿಂಧ ವಿವರಿಸಲ್ಪಡುವುದು. ಚಿತ್ ಎಂದರೆ ಚೈತನ್ಯವು. ಇದು ಸ್ತ್ರೀಲಿಂಗವಾಚಕವು. ಸಚ್ಛಬ್ಧವು ಮೂರುಲಿಂಗಗಳಲ್ಲಿಯೂ ಪ್ರಯೋಗಿಸಲ್ಪಡುವುದು. ಆದುದರಿಂದ ಇಲ್ಲಿ ಸಚ್ಛಬ್ದವು ಪುರುಷವಾಚಕವಾಗಿರುವುದು ಎಂದರೆ ಪುರುಷನನ್ನು ಸೂಚಿಸುವುದು.

೨೭. ಪುರುಷಶಬ್ದವು ಪ್ರಕಾಶವುಳ್ಳವನೆಂದು ಅರ್ಥವಾಗುವಕಾರಣ ಪ್ರಕಾಶದಿಂದ ಕೂಡಿರವನೆಂದು ಅರ್ಥವಾಗುವುದು. ಜ್ಞಾನ ಎಂಬ ಶಬ್ದಕ್ಕೆ ಚಿತ್ ಎಂಬ ಶಬ್ದವು ಪರ್ಯಾಯವಾಚಕವಾಗಿ ಇರುವುದು. ಅದು ಸ್ತ್ರೀಲಿಂಗದಿಂದ ಇರುವ ಕಾರಣ ಸ್ತ್ರೀ ಎಂದು ತಿಳಿಯತಕ್ಕದ್ದು. ಪುರುಷನೆಂದು ಹೆಸರುಳ್ಳ ಪ್ರಕಾಶವು ಚಿತ್ ಎಂಬ ಸ್ತ್ರೀಯೂ (ಇವೆರಡೂ) ಸೇರಿ ಸ್ತ್ರೀಪುರುಷರ ಒಂದು ಮಿಥುನವಾಗಿರುವುದು. ಇವೆರಡೂ ಸೇರಿ ಜಗತ್ತಿಗೆ ಕಾರಣವಾಗಿರುವುದು.

ಪ್ರಕಾಶಶ್ಚಿಚ್ಚ ಮಿಥುನಂ ಜಗತ್ಕಾರಣತಾಂ ಗತಂ ।
ಸಚ್ಚಿದಾತ್ಮಸ್ಯಪಿ ತಥಾ ಜಗತ್ಕಾರಣತಾಂ ಗತೇ ॥ ೨೮ ॥

ಏಕತ್ರೈವ ಶಿವಶ್ಶಕ್ತಿರಿತಿ ಭಾವೋ ವಿಧೀಯತೇ ।
ತೈಲವರ್ತ್ಯಾದಿಮಾಲಿನ್ಯಾತ್ಪ್ರಕಾಶಸ್ಯಾಪಿ ವರ್ತತೇ ॥ ೨೯ ॥

ಮಾಲಿನ್ಯಮಶಿವತ್ವಂ ಚ ಚಿತಾಗ್ನ್ಯಾದಿಷು ದೃಶ್ಯತೇ ।
ಏವಂ ವಿವರ್ತಕತ್ವೇನ ಶಿವತ್ವಂ ಶ್ರುತಿಚೋದಿತಂ ॥ ೩೦ ॥

ಜೀವಾಶ್ರಿತಾಯಾಶ್ಚಿಚ್ಛಕ್ತೇರ್ದೌರ್ಬಲ್ಯಂ ವಿದ್ಯತೇ ಸದಾ ।
ತನ್ನಿವೃತ್ತ್ಯರ್ಥಮೇವಾತ್ರ ಶಕ್ತಿತ್ವಂ ಸಾರ್ವಕಾಲಿಕಂ ॥ ೩೧ ॥

ಬಲವಾಂಚ್ಛಕ್ತಿಮಾಂಶ್ಚೇತಿ ವ್ಯವಹಾರಃ ಪ್ರದೃಶ್ಯತೇ ।
ಲೋಕೇ ವೇದೇ ಚ ಸತತಂ ವಾಮದೇವ ಮಹಾಮುನೇ ॥ ೩೨ ॥

---

೨೮-೩೦. ಈ ಪ್ರಕಾರವಾಗಿ ಪ್ರಕಾಶವೂ (ಸತ್) ಚಿತ್‌ಎಂಬ ಪದಾರ್ಥವೂ, (ಚೈತನ್ಯ) ಎರಡೂ ಸೇರಿ ಸಚ್ಚಿದ್ರೂಪದಿಂದ ಜಗತ್ತಿಗೆ ಕಾರಣಭಾವವನ್ನು ಹೊಂದಿರುವದರಿಂದ ಈ ಸಮೂಹಕ್ಕೆ (ಸಚ್ಚಿದ್ರೂಪಕ್ಕೆ) ಶಿವಶಕ್ತಿ ಎಂದು ಒಂದು ಭಾವನೆಯನ್ನು ಮಾಡತಕ್ಕದ್ದು. ಎಣ್ಣೆಯೂ, ಬತ್ತಿಯೂ ಈ ಮೊದಲಾದ ಪದಾರ್ಥಗಳ ಮಲಿನತೆಯಿಂದ ದೀಪವು ಮಾಲೀನ್ಯವನ್ನು ಹೊಂದುವದು. ಅದರಂತೆಯೇ ಚಿತ್ಪದಾರ್ಥವು ಮಲಿನವಾದರೆ ಪ್ರಕಾಶಕ್ಕೂ ಮಾಲೀನ್ಯವು ಉಂಟಾಗುವದು. ಹೀಗೆಯೇ ಕೇವಲ ಪ್ರಕಾಶರೂಪದಿಂದ ಇರುವ ಪದಾರ್ಥವು ಚಿತ್ಸಂಬಂಧದಿಂದ ಶಿವಸ್ವರೂಪವನ್ನು ಹೊಂದಿರುವದೆಂದು ಶ್ರುತಿಯಲ್ಲಿ ಹೇಳಿರುವದು.

೩೧-೩೨. ಜೀವವನ್ನು ಆಶ್ರಯಿಸಿರುವ ಚಿಚ್ಛಕ್ತಿಗೆ ದುರ್ಬಲತ್ವವು ಯಾವಾಗಲೂ ಇರುವದು. ಎಲೈ ವಾಮದೇವಮುನಿಯೇ ಕೇಳು. ಬಲವುಳ್ಳವನು, ಶಕ್ತಿವಂತನು ಎಂದು ವ್ಯವಹಾರವು ಲೋಕದಲ್ಲಿಯೂ, ವೇದದಲ್ಲಿಯೂ, ಇರುವದರಿಂದ ದೌರ್ಬಲ್ಯವನ್ನು ನಾಶಪಡಿಸುವದೇ ಶಕ್ತಿಯ ಸಾಮರ್ಥ್ಯವು. ಜೀವಗತವಾದ ಚಿಚ್ಛಕ್ತಿಯು ಎಲ್ಲಾ ಕಾಲದಲ್ಲಿಯೂ, ಇರುವದು. ಇದು ಹೆಚ್ಚುಕಡಿಮೆಯಾದಂತೆ ಶಕ್ತಿಯೂ ಹೆಚ್ಚುಕಡಮೆಯಾಗುವುದು. ಪರಮಾತ್ಮನ ವಿಷಯದಲ್ಲಿ ಶಿವತ್ವವೂ

ಏವಂ ಶಿವತ್ವಂ ಶಕ್ತಿತ್ವಂ ಪರಮಾತ್ಮನಿ ದರ್ಶಿತಂ ।
ಶಿವಶಕ್ತ್ಯೋಸ್ತು ಸಂಯೋಗಾದಾನಂದಸ್ಸತತೋದಿತಃ ॥ ೩೩ ॥

ಅತೋ ಮುನೇ ತಮುದ್ದಿಶ್ಯ ಮುನಯಃ ಕ್ಷೀಣಕಲ್ಮಷಾಃ ।
ಶಿವೇ ಮನಸ್ಸಮಾಧಾಯ ಪ್ರಾಪ್ತಾಶ್ಶಿವಮನಾಮಯಂ ॥ ೩೪ ॥

ಸರ್ವಾತ್ಮತ್ವಂ ತಯೋರೇವಂ ಬ್ರಹ್ಮೇತ್ಯುಪನಿಷತ್ಸು ಚ ।
ಗೀಯತೇ ಬ್ರಹ್ಮಶಬ್ದೇನ ಬೃಂಹಿಧಾತ್ವರ್ಥಗೋಚರಂ ॥ ೩೫ ॥

ಬೃಂಹಣತ್ವಂ ಬೃಹತ್ವಂ ಚ ಸದಾ ಶಂಭ್ವಾಖ್ಯವಿಗ್ರಹೇ ।
ಪಂಚಬ್ರಹ್ಮಮಯೋ ವಿಶ್ವಪ್ರತೀಕೈರ್ಬ್ರಹ್ಮಶಬ್ದಿತಾ ॥ ೩೬ ॥

---

ಶಕ್ತಿಯ ರೂಪಸಂಬಂಧವೂ ಉಂಟಾಗಿರುವ ರೀತಿಯನ್ನು ನಾನು ಹೇಳಿರುವೆನು. ಶಿವ ಮತ್ತು ಶಕ್ತಿ ಇವರಿಬ್ಬರ ಸಂಬಂಧದಿಂದ ಆನಂದವೆಂಬುದು ಯಾವಾಗಲೂ ಉಂಟಾಗುವುದು.

೩೩–೩೬. ಈ ಕಾರಣದಿಂದಲೇ ಪಾಪಸಂಬಂಧವಿಲ್ಲದಿರುವ ಮುನಿಗಳು ಶಿವನ ಸಂಬಂಧವಾದ ಆನಂದವನ್ನು (ಬ್ರಹ್ಮಾನಂದ) ಹೊಂದುವುದಕ್ಕಾಗಿ ಪ್ರಯತ್ನಪಟ್ಟು ಶಿವನಲ್ಲಿ ಮನಸ್ಸನ್ನು ಇರಿಸಿ ಆ ಆನಂದವನ್ನು ಹೊಂದಿ ಯಾವ ವಿಧವಾದ ತೊಂದರೆಯೂ ಇಲ್ಲದಿರುವ ಶಿವಭಾವವನ್ನು ಹೊಂದುವರು. ಆ ಶಿವಶಕ್ತಿರೂಪದಿಂದ ಇರುವ ಅವರಿಬ್ಬರಿಗೇನೆ ಸರ್ವಾತ್ಮತ್ವವು ಹೀಗೆ ಉಂಟಾಗಿರುವುದೆಂದೂ, ಇದೇ ಬ್ರಹ್ಮಸ್ವರೂಪವೆಂದೂ, ಉಪನಿಷತ್ತುಗಳಲ್ಲಿ ಬ್ರಹ್ಮಶಬ್ದದ ಅರ್ಥವು "ಸತ್ಯಂ ಜ್ಞಾನಮನಂತಂ ಬ್ರಹ್ಮ" "ತದ್ಬ್ರಹ್ಮೇತಿ" ಎಂದು ಶ್ರುತಿಯು ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವದು. ಬೃಂಹಧಾತುವಿನ ಅರ್ಥವು ಬೃಹತ್ವವೆಂದು ಇರುವದು. ಇದರಿಂದ ಬ್ರಹ್ಮ ಎಂಬ ಶಬ್ದವು ಉಂಟಾಗಿರುವದು.—"ಅಸ್ತಿ ತಾವದ್ಬ್ರಹ್ಮ ನಿತ್ಯಶುದ್ಧಮುಕ್ತಸ್ವಭಾವಃ ಸರ್ವಜ್ಞಃ ಸರ್ವಶಕ್ತಿರಿತಿ" ಎಂದು ಶಾರೀರಕಮೀಮಾಂಸವಿರುವದು. ಈ ಬ್ರಹ್ಮನಿಗೆ ಶುದ್ಧತ್ವ, ಸರ್ವವ್ಯಾಪಿತ್ವ ಮೊದಲಾದ ಗುಣಗಳಿರುವವು. ಇದು ಯಾವಾಗಲೂ ಶಿವನೆಂದು ಹೆಸರುಳ್ಳ ರೂಪದಿಂದ ಇರುವದು. ಈ ಶಿವನೆಂಬ ಆಕಾರವು, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ, ಈಶಾನರೆಂಬ ಪಂಚಬ್ರಹ್ಮರೂಪಗಳಿಂದ ಪ್ರಪಂಚದಲ್ಲಿ ಪ್ರಸಿದ್ಧವಾಗಿ ಬ್ರಹ್ಮನೆಂದು ಹೆಸರನ್ನು ಹೊಂದಿರುವದು.

ಪ್ರತಿಲೋಮಾತ್ಮಕೇ ಹಂಸೇ ವಕ್ಷ್ಯಾಮಿ ಪ್ರಣವೋದ್ಭವಂ ।
ತವ ಸ್ನೇಹಾದ್ವಾಮದೇವ ಸಾವಧಾನತಯಾ ಶೃಣು　　　॥ ೩೭ ॥

ವ್ಯಂಜನಸ್ಯ ಸಕಾರಸ್ಯ ಹಕಾರಸ್ಯ ಚ ವರ್ಜನಾತ್ ।
ಓಮಿತ್ಯೇವ ಭವೇತ್ಸ್ಥೂಲೋ ವಾಚಕಃ ಪರಮಾತ್ಮನಃ　　　॥ ೩೮ ॥

ಮಹಾಮಂತ್ರಸ್ಸ ವಿಜ್ಞೇಯೋ ಮುನಿಭಿಸ್ತತ್ತ್ವದರ್ಶಿಭಿಃ ।
ತತ್ರ ಸೂಕ್ಷ್ಮೋ ಮಹಾಮಂತ್ರಸ್ತದುದ್ಧಾರಂ ವದಾಮಿ ತೇ　　　॥ ೩೯ ॥

ಆದ್ಯೇ ತ್ರಿಪಂಚರೂಪೇ ಚ ಸ್ವರೇ ಷೋಡಶಕೇ ತ್ರಿಷು ।
ಮಹಾಮಂತ್ರೋ ಭವೇದಾದೌ ಸಸಕಾರೋ ಭವೇದ್ಯದಾ　　　॥ ೪೦ ॥

ಹಂಸಸ್ಯ ಪ್ರತಿಲೋಮಃ ಸ್ಯಾತ್ಸಕಾರಾರ್ಥಶ್ಶಿವಃ ಸ್ಮೃತಃ ।
ಶಕ್ತ್ಯಾತ್ಮಕೋ ಮಹಾಮಂತ್ರವಾಚ್ಯಃ ಸ್ಯಾದಿತಿ ನಿರ್ಣಯಃ　　　॥ ೪೧ ॥

---

೩೭–೪೦. ಹಂಸ ಎಂಬ ಶಬ್ದದಲ್ಲಿ ವರ್ಣಗಳು ಹಿಂದು ಮುಂದಾಗಿರುವ ಕಾರಣ ಅದರಲ್ಲಿ ಪ್ರಣವ ಶಬ್ದವು ಹೇಗೆ ಹುಟ್ಟಿರುವುದೆಂಬುದನ್ನು ನಿನ್ನಲ್ಲಿರುವ ಸ್ನೇಹದಿಂದ ವಿವರಿಸಿ ಹೇಳುವೆನು. ಸಮಾಧಾನವಾದ ಮನಸ್ಸಿನಿಂದ ಕೇಳು. ಸಕಾರ ಮತ್ತು ಹಕಾರ ಇವೆರಡನ್ನೂ ಬಿಟ್ಟರೆ ಓಂ ಎಂದು ಪರಮಾತ್ಮನ ವಾಚಕವಾದ ಪ್ರಣವವು ಉಳಿಯುವುದು. ಇದು ಪ್ರಣವದ ಸ್ಥೂಲರೂಪವು. ಅದು ಮಹಾಮಂತ್ರವೆಂದು ತಿಳಿಯತಕ್ಕದ್ದೆಂದು ತತ್ತ್ವಗಳನ್ನು ಬಲ್ಲವರಾದ ಋಷಿಗಳು ಹೇಳಿರುವರು. ಇನ್ನೂ ಈ ಮಹಾಮಂತ್ರದ ಸೂಕ್ಷ್ಮರೂಪವನ್ನೂ, ಅದನ್ನು ಉದ್ಧಾರ ಮಾಡುವ (ವಿವರಿಸುವ) ಕ್ರಮವನ್ನೂ ನಿನಗೆ ಹೇಳುವೆನು. ಒಂದನೆಯ ಸ್ವರವೂ ಹದಿನೈದನೆಯ ಸ್ವರವೂ, ಹದಿನಾರನೆಯ ಸ್ವರವೂ ಸಕಾರಪರವಾದ ಹಕಾರವೂ ಸಕಾರವೂಸೇರಿ ಈ ಮಹಾಮಂತ್ರವಾಗುವುದು. ಎಂದರೆ ಒಂದನೆಯ ಸ್ವರ=ಅ, ಹದಿನೈದನೆಯ ಸ್ವರ=ಅಂ, ಹದಿನಾರನೆಯ ಸ್ವರ=ಅಃ ಈಗ ಹಕಾರವನ್ನೂ ಸಕಾರವನ್ನೂ ಸೇರಿಸಿದರೆ ಹ್+ಅ+ಮ್+ಸ್+ಅಃ=ಹಂಸಃ ಎಂದಾಗುವುದು. ಇದು ಪ್ರಣವ ಮಂತ್ರದ ಸೂಕ್ಷ್ಮರೂಪವೆನಿಸುವುದು. ಇದು ಮಹಾಮಂತ್ರವು.

೪೧–೪೨. ಈ ಹಂಸವೆಂಬ ಮಂತ್ರವು ಪ್ರತಿಲೋಮ ಎಂದರೆ ಹಿಂದು ಮುಂದಾಗಿರುವ ರೂಪದಿಂದ ಇರುವುದು. ಎಂದರೆ ಹಂಸಶಬ್ದದ ಪ್ರತಿಲೋಮ

ಗುರೂಪದೇಶಕಾಲೇ ತು ಸೋಽಹಂಶಕ್ತ್ಯಾತ್ಮಕಶ್ಶಿವಃ ।
ಇತಿ ಜೀವಪರೋ ಭೂಯಾನ್ಮಹಾಮಂತ್ರಸ್ತದಾ ಪಶುಃ ॥ ೪೨ ॥

ಶಕ್ತ್ಯಾತ್ಮಕಶ್ಶಿವಾಂಶಶ್ಚ ಶಿವೈಕ್ಯಾಚ್ಛಿವಸಾಮ್ಯಭಾಕ್ ।
ಪ್ರಜ್ಞಾನಂ ಬ್ರಹ್ಮವಾಕ್ಯೇ ತು ಪ್ರಜ್ಞಾನಾರ್ಥಃ ಪ್ರದೃಶ್ಯತೇ ॥ ೪೩ ॥

ಪ್ರಜ್ಞಾನಶಬ್ದಶ್ಚೈತನ್ಯಪರ್ಯಾಯಃ ಸ್ಯಾನ್ನ ಸಂಶಯಃ ।
ಚೈತನ್ಯಮಾತ್ಮೇತಿ ಮುನಯೇ ಶಿವಸೂತ್ರಂ ಪ್ರವರ್ತಿತಂ ॥ ೪೪ ॥

ಚೈತನ್ಯಮಿತಿ ವಿಶ್ವಸ್ಯ ಸರ್ವಜ್ಞಾನಕ್ರಿಯಾತ್ಮಕಂ ।
ಸ್ವಾತಂತ್ರ್ಯಂ ತತ್ಸ್ವಭಾವೋ ಯಃ ಸ ಆತ್ಮಾ ಪರಿಕೀರ್ತಿತಃ ॥ ೪೫ ॥

ಇತ್ಯಾದಿಶಿವಸೂತ್ರಾಣಾಂ ವಾರ್ತಿಕಂ ಕಥಿತಂ ಮಯಾ ।
ಜ್ಞಾನಂ ಬಂಧ ಇತೀದಂ ತು ದ್ವಿತೀಯಂ ಸೂತ್ರಮೀಶಿತುಃ ॥ ೪೬ ॥

---

ರೂಪವು ಸೋಽಹಂ ಎಂದು. ಇದರಲ್ಲಿ ಸಕಾರದ ಅರ್ಥವು ಶಿವನಾಗಿರುವನು. ಈ ಶಿವನು ಶಕ್ತ್ಯಾತ್ಮಕವಾದ ಮಹಾಮಂತ್ರದಿಂದ ಹೇಳಲ್ಪಡುವವನಾಗಿರುವನೆಂದು ನಿರ್ಣಯವಾಗಿರುವುದು. ಗುರುವು ಉಪದೇಶಮಾಡುವ ಕಾಲದಲ್ಲಿ ಶಿವನು ಸೋಽಹಂ ಎಂಬ ಮಂತ್ರರೂಪದಿಂದ ಇರುವ ಶಕ್ತಿಯ ಸಂಬಂಧವಾದ ಮಂತ್ರಾತ್ಮಕನಾಗಿರುವ ಕಾರಣ ಮಹಾಮಂತ್ರವು ಆಗ ಜೀವಪರವಾಗಿ ಪಶುವನ್ನು ಬೋಧಿಸುವುದಾಗಿರುವುದು. ಎಂದರೆ ಸಕಾರವು ಸರ್ವೋತ್ತಮನೂ, ವಿಶುದ್ಧಸ್ವಭಾವವುಳ್ಳವನೂ ಆದ ಶಿವನನ್ನು ಬೋಧಿಸುವುದು. ಅಹಂ ಶಬ್ದವು ಪಶುರೂಪನಾದ ಜೀವನನ್ನು ಬೋಧಿಸುವುದು. ಈ ಎರಡು ಶಬ್ದಗಳ ಸಂಯೋಗವು ಸೋಽಹಂ ಎಂದಾಗಿ ಜೀವಪರಮಾತ್ಮೈಕ್ಯವನ್ನು ಬೋಧಿಸುವುದು.

೪೩-೪೬. ಶಕ್ತ್ಯಾತ್ಮಕವಾದ ಶಿವನ ಅಂಶವೂ ಕೂಡ ಶಿವನಲ್ಲಿ ಐಕ್ಯವಾಗಿ ಶಿವನ ಸಾಮ್ಯವನ್ನು ಹೊಂದುವುದಾಗಿರುವುದು. "ಪ್ರಜ್ಞಾನಂ ಬ್ರಹ್ಮ" ಎಂಬ ವಾಕ್ಯದಲ್ಲಿ ಪ್ರಜ್ಞಾನ ಶಬ್ದಾರ್ಥವು ಚೇತನಪರ್ಯಾಯವಾಚಕವಾಗಿರುವುದು. ಪ್ರಜ್ಞಾನ ಶಬ್ದವು ಜ್ಞಾನಪರ್ಯಾಯವೆಂಬುದರಲ್ಲಿ ಸಂಶಯವಿಲ್ಲವು. ಚೈತನ್ಯವೇ ಆತ್ಮನೆಂದು ಶಿವಸೂತ್ರವಿರುವುದು. ಚೈತನ್ಯವೆಂದರೆ ಪ್ರಪಂಚದ ಎಲ್ಲಾ ವಿಧವಾದ ಜ್ಞಾನಕ್ರಿಯಾರೂಪವೆಂದು ತಿಳಿಯತಕ್ಕದ್ದು. ಆತ್ಮಶಬ್ದವು—ಸ್ವಾತಂತ್ರ್ಯ ಮತ್ತು

ಜ್ಞಾನಮಿತ್ಯಾತ್ಮನಸ್ತಸ್ಯ ಕಿಂಚಿಜ್ಜ್ಞಾನಕ್ರಿಯಾತ್ಮಕಂ ।
ಇತ್ಯಾಹಾದ್ಯಪದೇನೇಶಃ ಪಶುವರ್ಗಸ್ಯ ಲಕ್ಷಣಂ ॥ ೪೭ ॥

ಏತದ್ದ್ವಯಂ ಪರಾಶಕ್ತೇಃ ಪ್ರಥಮಂ ಸ್ಪಂದತಾಂ ಗತಂ ।
ಏತಾಮೇವ ಪರಾಂ ಶಕ್ತಿಂ ಶ್ವೇತಾಶ್ವತರಶಾಖಿನಃ ॥ ೪೮ ॥

ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚೇತ್ಯಸ್ತುವನ್ಮುದಾ ।
ಜ್ಞಾನಕ್ರಿಯೇಚ್ಛಾರೂಪಂ ಹಿ ಶಂಭೋರ್ದೃಷ್ಟಿತ್ರಯಂ ವಿದುಃ ॥ ೪೯ ॥

ಏತನ್ಮನೋಮಧ್ಯಗಂ ಸದಿಂದ್ರಿಯಜ್ಞಾನಗೋಚರಂ ।
ಅನುಪ್ರವಿಶ್ಯ ಜಾನಾತಿ ಕರೋತಿ ಚ ಪಶುಃ ಸದಾ ॥ ೫೦ ॥

---

ಇನ್ನೊಬ್ಬರ ಅಧೀನಕ್ಕೆ ಒಳಪಡದಿರುವ ಸ್ವಭಾವವು ಆತ್ಮವೆಂದೆನಿಸುವುದು. ಇವೇ ಮೊದಲಾದ ಶಿವಸೂತ್ರಗಳ ವಾರ್ತಿಕಗಳನ್ನು ವಿವರಿಸಿ ಹೇಳಿದೆನು. ಶಿವಸೂತ್ರದಲ್ಲಿ " ಜ್ಞಾನಂ ಬಂಧಃ " ಎಂದು ಎರಡನೆಯ ಸೂತ್ರವಿರುವುದು.

೪೭-೪೯. ಈ ಸೂತ್ರದಲ್ಲಿರುವ ಮೊದಲನೆಯ ಪದವಾದ ಜ್ಞಾನಶಬ್ದಕ್ಕೆ ಆತ್ಮನಿಗಿರುವ ಕೊಂಚಮಟ್ಟಿನ ಜ್ಞಾನಕ್ರಿಯಾತ್ಮಕವಾದ ರೂಪವು ಎಂಬುದಾಗಿ ಶಿವನು ಅರ್ಥವನ್ನು ವಿವರಿಸಿ ಈ ರೂಪವು ಪಶುಗಳ (ಜೀವರುಗಳ) ಲಕ್ಷಣವೆಂದು ಹೇಳಿರುವನು. ಇಂತಹ ಅಲ್ಪಜ್ಞಾನ, ಬಂಧ (ಸಂಸಾರಬಂಧ) ಇವೆರಡೂ ಪರಾ ಶಕ್ತಿಯ ಮೊದಲನೆಯ ಸ್ಪಂದರೂಪವಾಗಿರುವ ಸೃಷ್ಟಿಯಾಗಿರುವದು. ಈ ಪರಾಶಕ್ತಿ ಯನ್ನೇ ಶ್ವೇತಾಶ್ವತರ ಎಂಬ ಉಪನಿಷತ್ತಿನ ಅರ್ಥವನ್ನು ವಿವರಿಸುವ ಕಾಲದಲ್ಲಿ ಯಾವಾಗಲೂ, ಶಿವನಿಗೆ ಜ್ಞಾನ, ಬಲ, ಕ್ರಿಯಾ ಇವುಗಳು ಸ್ವಭಾವಸಿದ್ಧವಾದದ್ದು ಎಂದು ಅರ್ಥಕೊಡುವ " ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯ ಧಿಕಶ್ಚ ಶ್ರೂಯತೇ । ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ " ( ಶ್ವೇತಾಶ್ವತರ ಉಪನಿಷತ್ತು ೬-೭ ) ಎಂಬ ವಾಕ್ಯವನ್ನು ಹೇಳಿ ಶಿವನನ್ನು ಸ್ತುತಿಮಾಡುವರು. ಜ್ಞಾನ, ಕ್ರಿಯಾ, ಇಚ್ಛಾ ಎಂಬ ಈ ಮೂರೂ ಶಿವನ ಮೂರು ದೃಷ್ಟಿಯಾಗಿರುವವು. (ಮೂರು ಕಣ್ಣುಗಳು.)

ತಸ್ಮಾದಾತ್ಮನ ಏವೇದಂ ರೂಪಮಿತ್ಯೇವ ನಿಶ್ಚಿತಂ ।
ಪ್ರಪಂಚಾರ್ಥಂ ಪ್ರವಕ್ಷ್ಯಾಮಿ ಪ್ರಣವೈಕ್ಯಪ್ರದರ್ಶನಂ ॥ ೫೧ ॥

ಓಮಿತೀದಂ ಸರ್ವಮಿತಿ ಶ್ರುತಿರಾಹ ಸನಾತನೀ ।
ತಸ್ಮಾದ್ವೇತೀತ್ಯುಪಕ್ರಮ್ಯ ಜಗತ್ಸೃಷ್ಟಿಃ ಪ್ರಕೀರ್ತಿತಾ ॥ ೫೨ ॥

ತಸ್ಯಾಃ ಶ್ರುತೇಸ್ತು ತಾತ್ಪರ್ಯಂ ವಕ್ಷ್ಯಾಮಿ ಶ್ರೂಯತಾಮಿದಂ ।
ತವ ಸ್ನೇಹಾದ್ವಾಮದೇವ ವಿವೇಕಾರ್ಥವಿಜೃಂಭಿತಂ ॥ ೫೩ ॥

ಶಿವಶಕ್ತಿಸಮಾಯೋಗಃ ಪರಮಾತ್ಮೇತಿ ನಿಶ್ಚಿತಂ ।
ಪರಾಶಕ್ತೇಸ್ತು ಸಂಜಾತಾ ಚಿಚ್ಛಕ್ತಿಸ್ತು ತದುದ್ಭವಾ ॥ ೫೪ ॥

---

೫೦–೫೧. ಪಶುವಾದ ಜೀವನು ಯಾವಾಗಲೂ ತನ್ನ ಹೃದಯ ಮಧ್ಯದಲ್ಲಿರುವ ಈ ಸತ್ಪದಾರ್ಥವಾದ ಮತ್ತು ಇಂದ್ರಿಯ ಜ್ಞಾನಗೋಚರನಾದ ಶಿವನ ಪ್ರೇರಣೆಯಿಂದ ಕಾರ್ಯಗಳನ್ನು ಮಾಡುವನು. ಆದ್ದರಿಂದ ಇದು ಆತ್ಮನ ರೂಪವೆಂದೇ ನಿಶ್ಚಯವಾಗಿರುವುದು. "ಸರ್ವಾಜೀವೇ ಸರ್ವಸಂಸ್ಥೇ ಬೃಹಂತೇ ತಸ್ಮಿನ್ ಹಂಸೋ ಭ್ರಾಮ್ಯತೇ ಬ್ರಹ್ಮಚಕ್ರೇ । ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ'' (ಶ್ವೇ. ಉ. ೧-೬) ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿಯೂ "ಅಂತಃಪ್ರವಿಷ್ಟಃ ಶಾಸ್ತಾ ಜನಾನಾಗ್ಂ ಸರ್ವಾತ್ಮಾ" ಎಂದೂ ತೈತ್ತಿರೀಯಾರಣ್ಯಕದಲ್ಲಿಯೂ " ಏಕೋದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ'' (ಶ್ವೇ. ಉ. ೬-೧೧) ಎಂದೂ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಹೇಳಿರುವುದು.

೫೨-೫೩. ಇನ್ನುಮುಂದೆ ಪ್ರಣವಮಂತ್ರಕ್ಕೆ ಐಕ್ಯವನ್ನು ಹೇಳುವ ಕ್ರಮವನ್ನು ಪ್ರಪಂಚದ ಹಿತಕ್ಕಾಗಿ ಹೇಳುವೆನು. "ಓಮಿತೀದಂ ಸರ್ವಂ'' [ತೈ.ಉ. ೧-೮] ಎಂದು ನಿತ್ಯವಾದ ಶ್ರುತಿಯು ಹೇಳುವದು. "ತಸ್ಮಾದ್ವಾ ಎತಸ್ಮಾದಾತ್ಮನ ಆಕಾಶಃ ಸಂಭೂತಃ" [ತೈ.ಉ. ೨-೧] ಎಂದು ಪ್ರಾರಂಭಮಾಡಿ ಜಗತ್ತಿನ ಸೃಷ್ಟಿಯು ಶ್ರುತಿಯಲ್ಲಿ ಹೇಳಿರುವದು. ಈ ಶ್ರುತಿಗಳ ತಾತ್ಪರ್ಯವನ್ನು ನಿನ್ನಲ್ಲಿರುವ ಪ್ರೀತಿಯಿಂದ ಹೇಳುವೆನು ಕೇಳು.

೫೪–೫೫. ಶಿವ ಮತ್ತು ಶಕ್ತಿ ಇವರ ಸಮಷ್ಟಿಯು ಪರಮಾತ್ಮನೆಂದು ನಿಶ್ಚಿತವಾಗಿರುವದು. ಪರಾಶಕ್ತಿಯಿಂದ ಚಿಚ್ಛಕ್ತಿಯೆಂಬುವದು ಹುಟ್ಟಿರುವದು.

ಆನಂದಶಕ್ತಿಸ್ತಜ್ಞಾ ಸ್ಯಾದಿಚ್ಛಾ ಶಕ್ತಿಸ್ತದುದ್ಭವಾ ।
ಜ್ಞಾನಶಕ್ತಿಸ್ತತೋ ಜಾತಾ ಕ್ರಿಯಾಶಕ್ತಿಸ್ತು ಪಂಚಮೀ ।
ಏತಾಭ್ಯ ಏವ ಸಂಜಾತಾ ನಿವೃತ್ತ್ಯಾದ್ಯಾಃ ಕಲಾ ಮುನೇ　　॥ ೫೫ ॥

ಚಿದಾನಂದಸಮುತ್ಪನ್ನೌ ನಾದಬಿಂದೂ ಪ್ರಕೀರ್ತಿತೌ ।
ಇಚ್ಛಾಶಕ್ತೇರ್ಮಕಾರಸ್ತು ಜ್ಞಾನಶಕ್ತೇಸ್ತು ಪಂಚಮಃ　　॥ ೫೬ ॥

ಸ್ವರಃ ಕ್ರಿಯಾಶಕ್ತಿಜಾತೋ ಹ್ಯಕಾರಸ್ತು ಮುನೀಶ್ವರ ।
ಇತ್ಯುಕ್ತಾ ಪ್ರಣವೋತ್ಪತ್ತಿಃ ಪಂಚಬ್ರಹ್ಮೋದ್ಭವಂ ಶೃಣು　　॥ ೫೭ ॥

ಶಿವಾದೀಶಾನ ಉತ್ಪನ್ನಸ್ತತಸ್ತತ್ಪುರುಷೋದ್ಭವಃ ।
ತತೋಽಘೋರಸ್ತತೋ ವಾಮಸ್ಸದ್ಯೋಜಾತೋದ್ಭವಸ್ತತಃ　　॥ ೫೮ ॥

---

ಚಿಚ್ಛಕ್ತಿಯಿಂದ ಆನಂದ ಶಕ್ತಿಯು ಹುಟ್ಟಿರುವದು. ಆನಂದಶಕ್ತಿಯಿಂದ ಇಚ್ಛಾ ಶಕ್ತಿಯು ಹುಟ್ಟಿರುವದು. ಇಚ್ಛಾಶಕ್ತಿಯಿಂದ ಜ್ಞಾನಶಕ್ತಿಯೂ ಜ್ಞಾನಶಕ್ತಿಯಿಂದ ಕ್ರಿಯಾಶಕ್ತಿಯೂ ಹುಟ್ಟಿರುವವು. ಚಿಚ್ಛಕ್ತಿ, ಆನಂದಶಕ್ತಿ, ಇಚ್ಛಾಶಕ್ತಿ, ಜ್ಞಾನ ಶಕ್ತಿ, ಕ್ರಿಯಾಶಕ್ತಿ ಎಂಬ ಐದು ಶಕ್ತಿಗಳಿರುವವು. ಇವುಗಳಿಂದಲೇ ನಿವೃತ್ತಿಯೇ ಮೊದಲಾದ ಕಲೆಗಳು ಹುಟ್ಟಿರುವವು. ಚಿದಾನಂದಗಳಿಂದ ನಾದಬಿಂದುಗಳು ಹುಟ್ಟಿ ರುವವು.

೫೬–೫೭. ಇಚ್ಛಾಶಕ್ತಿಯಿಂದ ಮಕಾರವು, ಜ್ಞಾನಶಕ್ತಿಯಿಂದ ಐದನೆಯು ಸ್ವರವಾದ ಉಕಾರವು, ಕ್ರಿಯಾಶಕ್ತಿಯಿಂದ ಅಕಾರವು ಹುಟ್ಟಿರುವವು. ಈ ಪ್ರಕಾರ ಪ್ರಣವದ ಉತ್ಪತ್ತಿಯು ಕ್ರಮವನ್ನು ಹೇಳಿರುವೆನು. ಇನ್ನು ಮುಂದೆ ಪಂಚಬ್ರಹ್ಮರ ಉತ್ಪತ್ತಿಯನ್ನು ಹೇಳುವೆನು ಕೇಳು.

೫೮. ಶಿವನಿಂದ ಈಶಾನಮೂರ್ತಿಯು ಹುಟ್ಟಿದನು. ಈಶಾನದೇವನಿಂದ ತತ್ಪುರುಷನು ಹುಟ್ಟಿದನು. ತತ್ಪುರುಷನಿಂದ ಅಘೋರದೇವನು ಹುಟ್ಟಿದನು. ಅಘೋರಮೂರ್ತಿಯಿಂದ ವಾಮದೇವನು ಹುಟ್ಟಿದನು. ಈ ವಾಮದೇವನಿಂದ ಸದ್ಯೋಜಾತನು ಉತ್ಪನ್ನನಾದನು.

ಏತಸ್ಮಾನ್ಮಾತೃಕಾದಷ್ಟತ್ರಿಂಶನ್ಮಾತೃಸಮುದ್ಭವಃ ।
ಈಶಾನಾಚ್ಛಾಂತ್ಯತೀತಾಖ್ಯಾ ಕಲಾ ಜಾತಾಥ ಪೂರುಷಾತ್ ।
ಉತ್ಪದ್ಯತೇ ಶಾಂತಿಕಲಾ ವಿದ್ಯಾಽಘೋರಸಮುದ್ಭವಾ ॥ ೫೯ ॥

ಪ್ರತಿಷ್ಠಾ ಚ ನಿವೃತ್ತಿಶ್ಚ ವಾಮಸದ್ಯೋದ್ಭವೇ ಮತೇ ।
ಈಶಾಚ್ಚಿಚ್ಛಕ್ತಿಮುಖತೋ ವಿಭೋರ್ಮಿಥುನಪಂಚಕಂ ॥ ೬೦ ॥

ಅನುಗ್ರಹಾದಿಕೃತ್ಯಾನಾಂ ಹೇತುಃ ಪಂಚಕಮಿಷ್ಯತೇ ।
ತದ್ವಿದ್ಭಿರ್ಮುನಿಭಿಃ ಪ್ರಾಜ್ಞೈರ್ವರತತ್ತ್ವಪ್ರದರ್ಶಿಭಿಃ ॥ ೬೧ ॥

ವಾಚ್ಯವಾಚಕಸಂಬಂಧಾನ್ಮಿಥುನತ್ವಮುಪೇಯುಷಿ ।
ಕಲಾವರ್ಣಸ್ವರೂಪೇಽಸ್ಮಿನ್ಪಂಚಕೇ ಭೂತಪಂಚಕಂ ॥ ೬೨ ॥

ನಿಯದಾದಿಕ್ರಮಾದಾಸೀದುತ್ಪನ್ನಂ ಮುನಿಪುಂಗವ ।
ಆದ್ಯಂ ಮಿಥುನಮಾರಭ್ಯ ಪಂಚಮಂ ಯನ್ಮಯಂ ವಿದುಃ ॥ ೬೩ ॥

---

೫೯–೬೧. ಅಕಾರಾದಿ ವರ್ಣಗಳಿಂದ ಮೂವತ್ತೆಂಟು ಕಲೆಗಳು ಹುಟ್ಟುವವು. ಈಶಾನದೇವನಿಂದ ಶಾಂತ್ಯತೀತವೆಂಬ ಕಲೆಯೂ, ತತ್ಪುರುಷನಿಂದ ಶಾಂತಿಕಲೆಯೂ, ಅಘೋರಮೂರ್ತಿಯಿಂದ ವಿದ್ಯಾ ಎಂಬ ಕಲೆಯೂ, ವಾಮದೇವಮೂರ್ತಿಯಿಂದ ಪ್ರತಿಷ್ಠಾಎಂಬ ಕಲೆಯೂ, ಸದ್ಯೋಜಾತನಿಂದ ನಿವೃತ್ತಿಎಂಬ ಕಲೆಯೂ, ಹುಟ್ಟಿರುವವು. ಈಶ್ವರನ ಚಿಚ್ಛಕ್ತಿಯ ಮುಖದಿಂದ ಐದು ಮಿಥುನಗಳು ಹುಟ್ಟಿರುವವು. ಅನುಗ್ರಹ, ತಿರೋಭಾವ, ಸಂಹಾರ, ಸ್ಥಿತಿ, ಸೃಷ್ಟಿ, ಮೊದಲಾದ ಕಾರ್ಯಗಳನ್ನು ಮಾಡಲು ಈ ಮಿಥುನಪಂಚಕವೇ ಕಾರಣದೇವತೆಗಳಾಗಿರುವರೆಂದು ತತ್ತ್ವಗಳನ್ನು ಚೆನ್ನಾಗಿ ತಿಳಿದಿರುವ ಬುದ್ಧಿವಂತರಾದ ಋಷಿಗಳು ಅಭಿಪ್ರಾಯಪಟ್ಟಿರುವರು.

೬೨–೬೩. ವಾಚ್ಯವಾಚಕ ಎಂಬ ಸಂಬಂಧದಿಂದ ಮಿಥುನ ಭಾವವನ್ನು ಹೊಂದಿರುವ ಕಲಾವರ್ಣರೂಪದಿಂದ ಇರುವ ಈ ಪಂಚಕದಲ್ಲಿ ಮಹಾಭೂತಗಳ ಪಂಚಕವು ಆಕಾಶವೇ ಮೊದಲಾದ ಕ್ರಮದಿಂದ ಹುಟ್ಟಿರುವದು. ಆದರಲ್ಲಿ ಮೊದಲನೆಯ ಮಿಥುನವನ್ನು ಆರಂಭಿಸಿಕೊಂಡು ಐದನೆಯ ಮಿಥುನದವರಿಗೂ ಆಯಾಯರೂಪದಿಂದ ವ್ಯಾಪ್ತವೆಂದು ಹೇಳುವರು_ಎಂದರೆ,

ಶಬ್ದೈಕಗುಣ ಆಕಾಶಃ ಶಬ್ದಸ್ಪರ್ಶಗುಣೋ ಮರುತ್ ।
ಶಬ್ದಸ್ಪರ್ಶರೂಪಗುಣಪ್ರಧಾನೋ ವಹ್ನಿರುಚ್ಯತೇ ॥ ೬೪ ॥

ಶಬ್ದಸ್ಪರ್ಶರೂಪರಸಗುಣಕಂ ಸಲಿಲಂ ಸ್ಮೃತಂ ।
ಶಬ್ದಸ್ಪರ್ಶರೂಪರಸಗಂಧಾಢ್ಯಾ ಪೃಥಿವೀ ಸ್ಮೃತಾ ॥ ೬೫ ॥

ವ್ಯಾಪಕತ್ವಂ ಚ ಭೂತಾನಾಮಿದಮೇವ ಪ್ರಕೀರ್ತಿತಂ ।
ವ್ಯಾಪ್ಯತ್ವಂ ವೈಪರೀತ್ಯೇನ ಗಂಧಾದಿಕ್ರಮತೋ ಭವೇತ್ ॥ ೬೬ ॥

ಭೂತಪಂಚಕರೂಪೋಽಯಂ ಪ್ರಪಂಚಃ ಪರಿಕೀರ್ತ್ಯತೇ ।
ವಿರಾಟ್ ಸರ್ವಸಮಷ್ಟ್ಯಾತ್ಮಾ ಬ್ರಹ್ಮಾಂಡಮಿತಿ ಚ ಸ್ಫುಟಂ ॥ ೬೭ ॥

ಪೃಥಿವೀತತ್ತ್ವಮಾರಭ್ಯ ಶಿವತತ್ತ್ವಾವಧಿ ಕ್ರಮಾತ್ ।
ನಿಲೀಯ ತತ್ತ್ವಸಂದೋಹೇ ಜೀವ ಏವ ವಿಲೀಯತೇ ॥ ೬೮ ॥

---

೬೪-೬೫. ಆಕಾಶದಲ್ಲಿ ಶಬ್ದ ಎಂಬ ಒಂದೇ ಗುಣವಿರುವದು. ಶಬ್ದ, ಸ್ಪರ್ಶ ಎಂಬ ಎರಡು ಗುಣಗಳು ವಾಯುವಿನಲ್ಲಿರುವವು. ಶಬ್ದ, ಸ್ಪರ್ಶ, ರೂಪ ಈ ಮೂರು ಗುಣಗಳು ತೇಜಸ್ಸಿನಲ್ಲಿರುವವು. ಶಬ್ದ, ಸ್ಪರ್ಶ, ರೂಪ, ರಸವೆಂಬ ನಾಲ್ಕು ಗುಣಗಳು ನೀರಿನಲ್ಲಿರುವವು. ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಐದು ಗುಣಗಳು ಪೃಥ್ವಿಯಲ್ಲಿರುವವು.

೬೬-೬೮. ಈ ಪ್ರಕಾರವಾದ ಗುಣಗಳಿಂದ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡು ಇರುವದೇ ಪಂಚಮಹಾಭೂತಗಳಿಗೆ ವ್ಯಾಪಕತ್ವವೆನಿಸುವದು. ಈ ಕ್ರಮಕ್ಕೆ ವಿಪರೀತವಾದ ಎಂದರೆ ವಿರುದ್ಧವಾದ ಕ್ರಮದಿಂದ ಗಂಧವೇ ಮೊದಲಾದ ಗುಣಗಳು ಇರುವದು, ವ್ಯಾಪ್ಯತ್ವವೆನಿಸುವದು. ಈ ಪ್ರಪಂಚವು ಐದು ಪಂಚಮಹಾಭೂತಗಳಿಂದ ಕೂಡಿರುವುದು. ವಿರಾಟ್ಪುರುಷನು ಎಲ್ಲಕ್ಕೂ ಸಮಷ್ಟಿರೂಪದಿಂದ ಇರುವನು. ಇದಕ್ಕೆ ಬ್ರಹ್ಮಾಂಡವೆಂದು ಹೆಸರು. ಪೃಥಿವೀತತ್ತ್ವವನ್ನು ಮೊದಲುಗೊಂಡು ಶಿವತತ್ತ್ವದ ಕೊನೆಯವರಿವಿಗೂ ಕ್ರಮವಾಗಿ ತತ್ತ್ವಗಳ ಸಮೂಹವು ಒಂದರಲ್ಲೊಂದು ಲೀನವಾಗಿ ಪರಮಾತ್ಮನಲ್ಲಿ ಅಡಗುವದು. ಶಕ್ತಿಯಿಂದ ಸಹಿತ

ಸಂಶಕ್ತಿಕಃ ಪುನಸ್ಸೃಷ್ಟ್ವಾ ಶಕ್ತಿದ್ವಾರಾ ವಿನಿರ್ಗತಃ ।
ಸ್ಥೂಲಪ್ರಪಂಚರೂಪೇಣ ತಿಷ್ಠತ್ಯಾಪ್ರಲಯಂ ಸುಖಂ ॥ ೧೯ ॥

ನಿಜೇಚ್ಛಯಾ ಜಗತ್ಸ್ರಷ್ಟುಮುದ್ಯುಕ್ತಸ್ಯ ಮಹೇಶಿತುಃ ।
ಪ್ರಥಮೋ ಯಃ ಪರಿಸ್ಪಂದಶ್ಶಿವತತ್ತ್ವಂ ತದುಚ್ಯತೇ ॥ ೨೦ ॥

ಏಷೈವೇಚ್ಛಾಶಕ್ತಿತತ್ತ್ವಂ ಸರ್ವಕೃತ್ಯಾನುವರ್ತನಾತ್ ।
ಜ್ಞಾನಕ್ರಿಯಾಶಕ್ತಿಯುಗ್ಮೇ ಜ್ಞಾನಾಧಿಕ್ಯೇ ಸದಾಶಿವಃ ॥ ೨೧ ॥

ಮಹೇಶ್ವರಂ ಕ್ರಿಯೋದ್ರೇಕೇ ತತ್ತ್ವಂ ವಿದ್ಧಿ ಮುನೀಶ್ವರ ।
ಜ್ಞಾನಕ್ರಿಯಾಶಕ್ತಿಸಾಮ್ಯಂ ಶುದ್ಧವಿದ್ಯಾತ್ಮಕಂ ಮತಂ ॥ ೨೨ ॥

ಸ್ವಾಂಗರೂಪೇಷು ಭಾವೇಷು ಮಾಯಾತತ್ತ್ವವಿಭೇದಧೀಃ ।
ಶಿವೋ ಯದಾ ನಿಜಂ ರೂಪಂ ಪರಮೈಶ್ವರ್ಯಪೂರ್ವಕಂ ॥ ೨೩ ॥

---

ನಾಗಿ ಶಿವನು ಪುನಃ ಸೃಷ್ಟಿಯನ್ನು ಮಾಡುವಾಗ ಶಕ್ತಿಯ ಮೂಲಕವಾಗಿ ಈ ತತ್ತ್ವಗಳೆಲ್ಲವೂ ಪುನಃ ಸೃಷ್ಟಿಮಾಡಲ್ಪಟ್ಟು ಸ್ಥೂಲರೂಪದಿಂದ ಇರುವ ಪ್ರಪಂಚದ ಆಕಾರವನ್ನು ಹೊಂದಿ ಪ್ರಳಯವಾಗುವವರೆಗೂ, ಹಾಗೆಯೇ ಇರುವದು.

೨೦–೨೨. ಮಹೇಶ್ವರನು ತನ್ನ ಇಚ್ಛೆಯಿಂದ ಪುನಃ ಸೃಷ್ಟಿಮಾಡಲು ಉದ್ಯುಕ್ತನಾದಾಗ ಆ ಶಿವನ ಮೊದಲನೆಯ ಕ್ರಿಯಾವಿಶೇಷದಿಂದ (ಪರಿಸ್ಪಂದದಿಂದ) ಉತ್ಪನ್ನವಾದ ತತ್ತ್ವವು ಶಿವತತ್ತ್ವವೆನಿಸುವದು. ಈ ಶಿವತತ್ತ್ವವು ಎಲ್ಲಾ ಕಾರ್ಯಗಳಿಗೂ ಬೇಕಾಗುವದರಿಂದ ಇಚ್ಛಾಶಕ್ತಿತತ್ತ್ವವೆನಿಸುವದು. ಜ್ಞಾನಶಕ್ತಿ ಕ್ರಿಯಾಶಕ್ತಿ ಎಂಬ ಎರಡರಲ್ಲಿ ಜ್ಞಾನಾಧಿಕವಾದ ಅಂಶವು ಸದಾಶಿವತತ್ತ್ವವೆನಿಸುವದು. ಕ್ರಿಯಾಶಕ್ತಿಯು ಅಧಿಕವಾಗಿರುವ ಅಂಶವು ಮಹೇಶ್ವರನೆನಿಸುವುದು. ಎಲೈ ಋಷಿಶ್ರೇಷ್ಠನೇ ಕೇಳು, ಜ್ಞಾನಕ್ರಿಯಾಶಕ್ತಿಗಳ ಸಾಮ್ಯಾವಸ್ಥೆಯು ಶುದ್ಧವಿದ್ಯಾರೂಪದಿಂದ ಇರುವದೆಂದು ನಿಶ್ಚಯಮಾಡಲ್ಪಟ್ಟಿರುವದು.

೨೩–೨೬. ಶಿವನು ತನ್ನ ಅಂಗರೂಪವಾದ ಪದಾರ್ಥಗಳಲ್ಲಿ ಮಾಯಾತತ್ತ್ವಸಂಬಂಧದಿಂದ ಭೇದವನ್ನು ಕಲ್ಪನೆಮಾಡಿ ತನ್ನ ಸ್ವಭಾವಸಿದ್ಧವಾದ ಪರಮೈಶ್ವರ್ಯದಿಂದ ಕೂಡಿರುವ ರೂಪವನ್ನು ನಿಗ್ರಹಮಾಡಿಕೊಂಡು ಮಾಯೆಗೆ ಅಧೀನನಾಗಿ

ನಿಗೃಹ್ಯ ಮಾಯಯಾಶೇಷಪದಾರ್ಥಗ್ರಾಹಕೋ ಭವೇತ್ ।
ತದಾ ಪುರುಷ ಇತ್ಯಾಖ್ಯಾ ತತ್ಸೃಷ್ಟ್ವೇತ್ಯಭವಚ್ಛ್ರುತಿಃ ॥ ೭೪ ॥

ಅಯಮೇವ ಹಿ ಸಂಸಾರೀ ಮಾಯಯಾ ಮೋಹಿತೋ ಪಶುಃ ।
ಶಿವಜ್ಞಾನವಿಹೀನೋ ಹಿ ನಾನಾಕರ್ಮವಿಮೂಢಧೀಃ ॥ ೭೫ ॥

ಶಿವಾದಭಿನ್ನಂ ನ ಜಗದಾತ್ಮಾನಂ ಭಿನ್ನಮಿತ್ಯಪಿ ।
ಜಾನತೋಽಸ್ಯ ಪಶೋರೇವ ಮೋಹೋ ಭವತಿ ನ ಪ್ರಭೋಃ ॥ ೭೬ ॥

ಯಥೇಂದ್ರಜಾಲಿಕಸ್ಯಾಪಿ ಯೋಗಿನೋ ನ ಭವೇದ್ಭ್ರಮಃ ।
ಗುರುಣಾ ಜ್ಞಾಪಿತೈಶ್ವರ್ಯಶ್ಶಿವೋ ಭವತಿ ಚಿದ್ಘನಃ ॥ ೭೭ ॥

---

ಆಯಾಯ ಪದಾರ್ಥಗಳೆಲ್ಲವನ್ನೂ ತಿಳಿಯಲು ಉದ್ಯುಕ್ತನಾಗುವನೋ ಆಗ ಅವನಿಗೆ ಪುರುಷನೆಂದು ಹೆಸರು ಬರುವದು. ಈ ಕ್ರಮವನ್ನು ವೇದವು "ತತ್ಸೃಷ್ಟ್ವಾ। ತದೇವಾನುಪ್ರಾವಿಶತ್" (ತೈ. ಉ. ೨-೬) ಎಂಬುದಾಗಿ ಹೇಳಿರುವದು. ಈ ಪುರುಷನೇ ಮಾಯೆಯಿಂದ ಮೋಹವುಳ್ಳವನಾಗಿ ಪಶುಭಾವವನ್ನು ವಹಿಸುವನು ಮತ್ತು ಇವನೇ ಸಂಸಾರಿಯಾಗಿರುವನು. ಶಿವಜ್ಞಾನದಿಂದ ರಹಿತನಾಗಿ ಈ ಪಶುಭಾವವನ್ನು ಹೊಂದಿರುವವನು, ಈ ಪ್ರಪಂಚವು ಶಿವನಿಗಿಂತಲೂ ಬೇರೆಯಾದುದು. ತಾನೂ ಬೇರೆಯಾದವನು ಎಂಬುದಾಗಿ ತಿಳಿಯುವನು. ಈ ಪ್ರಕಾರವಾದ ಭ್ರಾಂತಿಯು ಈ ಪಶುಭಾವವನ್ನು ಹೊಂದಿರುವವನಿಗೆ ಉಂಟಾಗುವದು. ಪ್ರಭುವಾದ ಶಿವನಿಗೆ ಈ ಪ್ರಕಾರವಾದ ಮೋಹವು ಉಂಟಾಗುವದಿಲ್ಲ.

೭೭. ಇಂದ್ರಜಾಲ (ಕಣ್ಣುಕಟ್ಟುಮಾಯೆ) ವನ್ನು ತಿಳಿದಿರುವ ಯೋಗಿಗೆ ಭ್ರಮವು ಉಂಟಾಗುವದಿರುವಂತೆ, ಶಿವನಿಗೆ ಭ್ರಮೆಯುಂಟಾಗಲವಕಾಶವಿಲ್ಲ. ಈ ಪಶುಭಾವವನ್ನು ಹೊಂದಿರುವವನು ತನ್ನ ಗುರುವಿನ ಅನುಗ್ರಹಕ್ಕೆ ಪಾತ್ರನಾಗಿ ಅವನಿಂದ ತನ್ನ ನಿಜರೂಪದ ಮಹಿಮೆಯನ್ನು ಚೆನ್ನಾಗಿ ತಿಳಿದನಂತರ ತಾನೂ ಚಿದ್ರೂಪನಾಗಿ ತನ್ನ ಪಶುಭಾವವನ್ನು ಹೋಗಲಾಡಿಸಿಕೊಳ್ಳುವನು ಮತ್ತು ಶಿವನೇ ಆಗುವನು.

ಸರ್ವಕರ್ತೃತ್ವರೂಪಾ ಚ ಸರ್ವಜ್ಞತ್ವಸ್ವರೂಪಿಣೀ ।
ಪೂರ್ಣತ್ವರೂಪಾ ನಿತ್ಯತ್ವವ್ಯಾಪಕತ್ವಸ್ವರೂಪಿಣೀ ॥ ೭೮ ॥

ಶಿವಸ್ಯ ಶಕ್ತಯಃ ಪಂಚ ಸಂಕುಚದ್ರೂಪಭಾಸ್ವರಾಃ ।
ಅಪಿ ಸಂಕೋಚರೂಪೇಣ ವಿಭಾಂತ್ಯ ಇತಿ ನಿತ್ಯಶಃ ॥ ೭೯ ॥

ಪಶೋಃ ಕಲಾಖ್ಯವಿದ್ಯೇತಿ ರಾಗಕಾಲೌ ನಿಯತ್ಯಪಿ ।
ತತ್ತ್ವಪಂಚಕರೂಪೇಣ ಭವತ್ಯತ್ರ ಕಲೇತಿ ಸಾ ॥ ೮೦ ॥

ಕಿಂಚಿತ್ಕರ್ತೃತ್ವಹೇತುಸ್ಸ್ಯಾತ್ಕಿಂಚಿತ್ತತ್ತ್ವೈಕಸಾಧನಂ ।
ಸಾ ವಿದ್ಯಾ ತು ಭವೇದ್ರಾಗೋ ವಿಷಯೇಷ್ವನುರಂಜಕಃ ॥ ೮೧ ॥

ಕಾಲೋ ಹಿ ಭಾವಭಾನಾನಾಂ ಭಾಸಾನಾಂ ಭಾಸನಾತ್ಮಕಃ ।
ಕ್ರಮಾವಚ್ಛೇದಕೋ ಭೂತ್ವಾ ಭೂತಾದಿರಿತಿ ಕಥ್ಯತೇ ॥ ೮೨ ॥

---

೭೮. ಸಮಸ್ತವನ್ನೂ ಸೃಷ್ಟಿಸುವ ಅಥವಾ ಸಮಸ್ತಕಾರ್ಯಗಳನ್ನೂ ಮಾಡುವ ಸಾಮರ್ಥ್ಯವೂ, ಸರ್ವತತ್ತ್ವಗಳನ್ನೊಳಗೊಂಡಿರುವ ರೂಪವೂ, ಪೂರ್ಣತ್ವರೂಪವೂ, ನಿತ್ಯತ್ವವೂ (ಎಂದರೆ ನಾಶವಿಲ್ಲದಿರುವಿಕೆಯೂ) ಸರ್ವಪ್ರದೇಶ ಮತ್ತು ಸರ್ವವಸ್ತುಗಳಲ್ಲಿ ವ್ಯಾಪಕತ್ವವೂ ಈ ಐದೂ ಶಿವನ ಪಂಚಶಕ್ತಿಗಳು.

೭೯-೮೧. ಶಿವನ ಈ ಐದು ಶಕ್ತಿಗಳು, ಸಂಕೋಚವುಳ್ಳ ಆಕಾರದಿಂದ ತಮ್ಮ ಸೂಕ್ಷ್ಮರೂಪದಿಂದಲೇ ಯಾವಾಗಲೂ ಪ್ರಕಾಶಿಸುತ್ತಿರುವವು. ಪಶುವಾದ ಜೀವನನ್ನುಂಟುಮಾಡಲು ಕಲಾ, ವಿದ್ಯಾ, ರಾಗ, ಕಾಲ, ನಿಯತಿ ಎಂಬ ಐದು ತತ್ತ್ವಗಳ ರೂಪದಿಂದ ಸಮರ್ಥವಾಗಿರುವದು. "ಕಾಲಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಂ" (ಶ್ವೇ. ಉ. ೧-೨) ಎಂದು ಉಪನಿಷದ್ವಾಕ್ಯವಿರುವದು. ಅವುಗಳಲ್ಲಿ ಕಲಾ ಎಂಬುದು ಕೊಂಚಮಟ್ಟಿಗೆ ಕರ್ತೃತ್ವವನ್ನುಂಟುಮಾಡುವದಾಗಿಯೂ ತತ್ತ್ವಭಾವವನ್ನು ಉಂಟುಮಾಡಲು ಕೊಂಚಮಟ್ಟಿಗೆ ಮುಖ್ಯಕಾರಣವಾಗಿಯೂ ಇರುವದು. ಆ ಕಲೆಯುವಿದ್ಯಾತತ್ತ್ವವಾಗಿ ವಿಷಯುಗಳನ್ನು ಭೋಗಿಸಲು ಅವುಗಳಲ್ಲಿ ಭೋಗ್ಯವೆಂದು ಬುದ್ಧಿಯನ್ನುಂಟುಮಾಡುವ ರಾಗವೆಂಬ ತತ್ತ್ವರೂಪವನ್ನು ಹೊಂದುವದು.

೮೨-೮೩. ಕಾಲವೆಂಬ ತತ್ತ್ವವು ಭಾವಪದಾರ್ಥಗಳ ಸೂಕ್ಷ್ಮರೂಪವು· ಸ್ಥೂಲರೂಪಕ್ಕೆ ಬರುವ ಮತ್ತು ಅವುಗಳು ಪ್ರಕಟವಾಗಿ ಎಲ್ಲರಿಗೂ ತಿಳಿಯುವದಕ್ಕೆ

ಇದಂ ತು ಮಮ ಕರ್ತವ್ಯಮಿದಂ ನೇತಿ ನಿಯಾಮಿಕಾ ।
ನಿಯತಿಸ್ಸ್ಯಾದ್ವಿಭೋಶ್ಶಕ್ತಿಸ್ತದಾಕ್ಷೇಪಾತ್ಪತೇತ್ಪಶುಃ ॥ ೮೩ ॥

ಏತತ್ಪಂಚಕಮೇವಾಸ್ಯ ಸ್ವರೂಪಾವಾರಕತ್ವತಃ ।
ಪಂಚಕಂಚುಕಮಾಖ್ಯಾತಮಂತರಂಗಂ ಚ ಸಾಧನಂ ॥ ೮೪ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಶಿವತತ್ತ್ವವರ್ಣನಂ ನಾಮ ಷೋಡಶೋಽಧ್ಯಾಯಃ

---

ಅನುಕೂಲವಾಗುವಷ್ಟು ಮಟ್ಟಿನ ಆಕಾರವನ್ನು ಹೊಂದುವದಕ್ಕೆ ತಕ್ಕಮಟ್ಟಿನ ಅವಕಾಶವನ್ನುಂಟುಮಾಡುವ ಸಾಮರ್ಥ್ಯವುಳ್ಳ ರೂಪದಿಂದಿರುವದು ಮತ್ತು ಈ ಕಾಲವು ಪದಾರ್ಥಗಳ ಉತ್ಪತ್ತಿಕ್ರಮದಲ್ಲಿ ಅನುಗುಣವಾಗಿ ಪಂಚಭೂತಗಳಿಗೆ ಆದಿಯೆನಿಸಿಕೊಳ್ಳುವದು. ನಿಯತಿತತ್ತ್ವವು "ಈ ಕೆಲಸವು ನನ್ನಿಂದ ಮಾಡಲ್ಪಡತಕ್ಕದ್ದು" "ಇದು ಮಾಡತಕ್ಕದ್ದಲ್ಲ" ಎಂಬುದಕ್ಕೆ ತಕ್ಕ ವ್ಯವಸ್ಥೆಯನ್ನುಂಟುಮಾಡುವದು. ಈ ನಿಯತಿತತ್ತ್ವವು ಪರಮೇಶ್ವರನ ಶಕ್ತಿಯಾಗಿರುವದು. ಈ ನಿಯತಿತತ್ತ್ವದಿಂದ ಉಂಟಾಗಿರುವ ವ್ಯವಸ್ಥೆಯನ್ನು ಮೀರುವದರಿಂದ ಪಶುವಾಗಿರುವ ಜೀವನು ಅಧೋಗತಿಯನ್ನು ಹೊಂದುವನು.

೮೪. ಶಿವಭಾವವನ್ನು ಮರೆಮಾಡಿ ಪಶುಭಾವವನ್ನುಂಟುಮಾಡಲು ಈ ಐದು ತತ್ತ್ವಗಳು ಸಮರ್ಥವಾಗಿ ಅಂತರಂಗರೂಪವಾದ ಐದು ಆವರಣಭಾವದಿಂದ ಸೂಕ್ಷ್ಮಕಾರಣವಾಗಿರುವದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಶಿವತತ್ತ್ವವರ್ಣನವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ಕೈಲಾಸಸಂಹಿತಾಯಾಂ

## ಸಪ್ತದಶೋಽಧ್ಯಾಯಃ



॥ ವಾಸುದೇವ ಉವಾಚ ॥

**ನಿಯತ್ಯಧಸ್ತಾತ್ಪ್ರಕೃತೇರುಪರಿಸ್ಥಃ ಪುಮಾನಿತಿ ।**
**ಪೂರ್ವತ್ರ ಭವತಾ ಪ್ರೋಕ್ತಮಿದಾನೀಂ ಕಥಮನ್ಯಥಾ ॥ ೧ ॥**

**ಮಾಯಯಾ ಸಂಕುಚದ್ರೂಪಸ್ತದಾಧಸ್ತಾದಿತಿ ಪ್ರಭೋ ।**
**ಇತಿ ಮೇ ಸಂಶಯಂ ನಾಥ ಛೇತ್ತುಮರ್ಹಸಿ ತತ್ತ್ವತಃ ॥ ೨ ॥**

---

## ಹದಿನೇಳನೆಯ ಅಧ್ಯಾಯವು

೧–೨. ವಾಸುದೇವನು ಹೇಳಿದನು:— ಪುರುಷತತ್ತ್ವವು (ಪುರುಷನು) ನಿಯತಿತತ್ತ್ವದ ಕೆಳಗಡೆಯಲ್ಲಿ ಪ್ರಕೃತಿಗಿಂತ ಮೇಲುಗಡೆಯಲ್ಲಿ ಇರುವನೆಂದು ನೀನು ಮೊದಲು ಹೇಳಿರುತ್ತೀಯೆ. ಈಗ ಪುರುಷನು ಪಶುಭಾವವನ್ನು ಹೊಂದುವುದರಿಂದ ನಿಯತಿತತ್ತ್ವದ ನಿಯಮಕ್ಕೆ ಒಳಪಟ್ಟಿರುವನೆಂದು ಹೇಳುವದು, ಹಿಂದೆ ಹೇಳಿದ ಮಾತಿಗೆ ವಿರೋಧವು ಬಂದಂತಾಯಿತು. ಮತ್ತು ಪುರುಷನು ಮಾಯೆಗೆ ಅಧೀನವಾಗಿ ತನ್ನ ರೂಪವನ್ನು ಸಂಕುಚಿತವನ್ನಾಗಿ ಮಾಡಿಕೊಳ್ಳುವನು ಎಂದರೆ ಮಾಯೆಗೆ ಅಧೀನನು ಎಂದು ಹೇಳುವ ಮಾತು ನನಗೆ ಸಂಶಯವನ್ನುಂಟುಮಾಡುವಕಾರಣ ಈ ಸಂಶಯವನ್ನು ನನಗೆ ಹೋಗಲಾಡಿಸಿ ತತ್ತ್ವೋಪದೇಶವನ್ನು ಮಾಡು ಎಂದನು.

॥ ಶ್ರೀ ಸುಬ್ರಹ್ಮಣ್ಯ ಉವಾಚ ॥

ಅದ್ವೈತಶ್ಶೈವವಾದೋಽಯಂ ದ್ವೈತಂ ನ ಸಹತೇ ಕ್ವಚಿತ್ ।
ದ್ವೈತಂ ಚ ನಶ್ವರಂ ಬ್ರಹ್ಮಾದ್ವೈತಂ ಪರಮನಶ್ವರಂ ॥ ೩ ॥

ಸರ್ವಜ್ಞಸ್ಸರ್ವಕರ್ತಾ ಚ ಶಿವಸ್ಸರ್ವೇಶ್ವರೋಽಗುಣಃ ।
ತ್ರಿದೇವಜನಕೋ ಬ್ರಹ್ಮಾ ಸಚ್ಚಿದಾನಂದವಿಗ್ರಹಃ ॥ ೪ ॥

ಸ ಏವ ಶಂಕರೋ ದೇವಸ್ಸ್ವೇಚ್ಛಯಾ ಚ ಸ್ವಮಾಯಯಾ ।
ಸಂಕುಚದ್ರೂಪ ಇವ ಸನ್ಪುರುಷಸ್ಸಂಬಭೂವ ಹ ॥ ೫ ॥

ಕಲಾದಿಪಂಚಕೇನೈವ ಭೋಕ್ತೃತ್ವೇನ ಪ್ರಕಲ್ಪಿತಃ ।
ಪ್ರಕೃತಿಸ್ಥಃ ಪುಮಾನೇಷ ಭುಂಕ್ತೇ ಪ್ರಕೃತಿಜಾನ್ಗುಣಾನ್ ॥ ೬ ॥

ಇತಿ ಸ್ಥಾನದ್ವಯಾಂತಃಸ್ಥಃ ಪುರುಷೋ ನ ವಿರೋಧಕಃ ।
ಸಂಕುಚನ್ನಿಜರೂಪಾಣಾಂ ಜ್ಞಾನಾದೀನಾಂ ಸಮುಷ್ಟಿಮಾನ್ ॥ ೭ ॥

---

೩–೬. ಸುಬ್ರಹ್ಮಣ್ಯನು ಹೇಳಿದನು:—ಈಗ ನಾನು ಹೇಳಿರುವದು ಶಿವಾದ್ವೈತವೆನಿಸಿಕೊಳ್ಳುವದು. ಇದರಲ್ಲಿ ಕೊಂಚವುಟ್ಟಿನ ಭೇದಭಾವವೂ ಇರುವದಿಲ್ಲ. ದ್ವೈತವೆಂಬ ಭೇದಜ್ಞಾನವು ನಾಶವನ್ನು ಹೊಂದತಕ್ಕದ್ದು. ಬ್ರಹ್ಮಾದ್ವೈತವು ಉತ್ತಮವಾದದ್ದಾಗಿ ನಾಶರಹಿತವಾಗಿರುವದು. ಶಿವನು ಎಲ್ಲವನ್ನೂ ತಿಳಿದವನು. ಎಲ್ಲವನ್ನೂ ನಿರ್ಮಿಸುವವನು. ಎಲ್ಲಕ್ಕೂ ಅಧಿಪತಿಯಾಗಿರುವನು. ಅವನು ಗುಣಗಳಿಗೆ ಅಧೀನನಲ್ಲ. ಶಿವನ: ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ದೇವತೆಗಳನ್ನು ನಿರ್ಮಿಸುವ ಬ್ರಹ್ಮರೂಪದಿಂದಿರುವ ಸಚ್ಚಿದಾನಂದ ರೂಪವುಳ್ಳವನು. ಇವನು ತನ್ನ ಇಚ್ಛೆಯಿಂದಲೇ ತನ್ನ ಮಾಯೆಗೆ ಅಧೀನನಾಗಿ ತನ್ನ ಮಹಿಮೆಯನ್ನು (ಸಂಕೋಚ) ಮರೆಮಾಡಿಕೊಂಡು ಪುರುಷನಾಗಿ, ಕಲೆಯೇ ಮೊದಲಾದ ಈ ಐದು ತತ್ತ್ವಗಳಿಂದ ಭೋಕ್ತೃವೆಂದು ಕಲ್ಪಿತನಾಗಿ ಭೋಗವನ್ನು ಅನುಭವಿಸುವನು. ಈ ಪುರುಷನು ಪ್ರಕೃತಿಯ ಅಧೀನನಾಗಿ ಪ್ರಕೃತಿಯ ಗುಣಗಳಿಂದುಂಟಾದ ವಸ್ತುಗಳನ್ನು ಭೋಗಿಸುವನು.

೭–೮. ಪುರುಷನು ಪ್ರಕೃತಿ ಮತ್ತು ನಿಯತಿ ಎಂಬ ಈ ಎರಡು ತತ್ತ್ವಗಳ ಮಧ್ಯದಲ್ಲಿರುವವನಾಗಿ ತನ್ನ ಸ್ವಾಭಾವಿಕವಾದ ಮಹಿಮೆಗಳನ್ನು ಕಡಿಮೆ ಮಾಡುವ

ಸತ್ತ್ವಾದಿಗುಣಸಾಧ್ಯಂ ಚ ಬುಧ್ಯಾದಿತ್ರಿತಯಾತ್ಮಕಂ ।
ಚಿತ್ತಂ ಪ್ರಕೃತಿತತ್ತ್ವಂ ತದಾಸೀತ್ಸತ್ತ್ವಾದಿಕಾರಣಾತ್ ॥ ೮ ॥

ಸಾತ್ತ್ವಿಕಾದಿವಿಭೇದೇನ ಗುಣಾಃ ಪ್ರಕೃತಿಸಂಭವಾಃ ।
ಗುಣೇಭ್ಯೋ ಬುದ್ಧಿರುತ್ಪನ್ನಾ ವಸ್ತುನಿಶ್ಚಯಕಾರಿಣೀ ॥ ೯ ॥

ತತೋ ಮಹಾನಹಂಕಾರಸ್ತತೋ ಬುದ್ಧೀಂದ್ರಿಯಾಣಿ ಚ ।
ಜಾತಾನಿ ಮನಸೋ ರೂಪಂ ಸ್ಯಾತ್ಸಂಕಲ್ಪವಿಕಲ್ಪಕಂ ॥ ೧೦ ॥

ಬುದ್ಧೀಂದ್ರಿಯಾಣಿ ಶ್ರೋತ್ರತ್ವಕ್ಚಕ್ಷುರ್ಜಿಹ್ವಾ ಚ ನಾಸಿಕಾ ॥
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ಗೋಚರಃ ॥ ೧೧ ॥

ಬುದ್ಧೀಂದ್ರಿಯಾಣಾಂ ಕಥಿತಃ ಶ್ರೋತ್ರಾದಿಕ್ರಮತಸ್ತತಃ ।
ವೈಕಾರಿಕಾದಹಂಕಾರಾತ್ತನ್ಮಾತ್ರಾಣ್ಯಭವನ್ಕ್ರಮಾತ್ ॥ ೧೨ ॥

---

ಅಲ್ಪಜ್ಞಾನವೇ ಮೊದಲಾದುವುಗಳಿಂದ ಕೂಡಿರುವನು. ಪ್ರಕೃತಿಯ ಸಂಬಂಧವಾದ ಸತ್ತ್ವವೇ ಮೊದಲಾದ ಗುಣಗಳಿಂದುಂಟಾದ ಚಿತ್ತವು [ಅಂತಃಕರಣವು] ಬುದ್ಧಿ, ಅಹಂಕಾರ, [ಅಂತಃಕರಣ] ಮನಸ್ಸೆಂಬ ಮೂರು ವಿಧವಾದ ರೂಪಗಳಿಂದಲೂ, ಸತ್ತ್ವವೇ ಮೊದಲಾದ ಗುಣಗಳಿಂದಲೂ ಕೂಡಿರುವದು.

೯-೧೨. ಸಾತ್ತ್ವಿಕ, ರಾಜಸ, ತಾಮಸ ಎಂಬ ಭೇದಗಳಿಂದ ಕೂಡಿದ ಗುಣಗಳು ಪ್ರಕೃತಿಯಿಂದ ಹುಟ್ಟಿದವುಗಳು. ಈ ಗುಣಗಳಿಂದ ಬುದ್ಧಿಯು ಹುಟ್ಟಿರುವುದು. ಇದು ವಸ್ತುಗಳ ನಿಜಸ್ಥಿತಿಯ ಪರಿಜ್ಞಾನವನ್ನುಂಟುಮಾಡಿಕೊಡುವುದು. ಈ ಬುದ್ಧಿಯಿಂದ ಮಹತತ್ತ್ವವೂ, ಅದರಿಂದ ಅಹಂಕಾರವೂ ಹುಟ್ಟಿರುವವು. ಅಹಂಕಾರದಿಂದ ಐದುವಿಧವಾದ ಜ್ಞಾನೇಂದ್ರಿಯಗಳು ಹುಟ್ಟಿರುವವು. ಮನಸ್ಸು— ಸಂಕಲ್ಪ, ವಿಕಲ್ಪವೆಂಬ ಎರಡುವಿಧ ರೂಪವುಳ್ಳದ್ದಾಗಿರುವುದು. ಶ್ರೋತ್ರ, ತ್ವಕ್, ಚಕ್ಷುಃ ಜಿಹ್ವಾ, ನಾಸಿಕಾ ಎಂಬ ಈ ಐದೂ ಜ್ಞಾನೇಂದ್ರಿಯಗಳು. ಇವುಗಳಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ (ವಾಸನೆ) ಇವುಗಳ ಜ್ಞಾನವುಂಟಾಗುವದು. ಶ್ರೋತ್ರವೇ ಮೊದಲಾದ ಕ್ರಮದಿಂದ (ಬುದ್ಧೀಂದ್ರಿಯ) ಜ್ಞಾನೇಂದ್ರಿಯಗಳನ್ನು ಹೇಳಿದೆನು. ಪ್ರಕೃತಿಯಿಂದ ಹುಟ್ಟಿದ ವೈಕಾರಿಕವಾದ ಅಹಂಕಾರದಿಂದ ಕ್ರಮವಾಗಿ ಪಂಚತನ್ಮಾತ್ರಗಳು ಹುಟ್ಟಿರುವವು. ಅವು ಸೂಕ್ಷ್ಮರೂಪದಿಂದಿರುವವು ಎಂದು ತತ್ತ್ವಗಳನ್ನು ತಿಳಿದ ಋಷಿಗಳು ಹೇಳಿರುವರು.

ತಾನಿ ಪ್ರೋಕ್ತಾನಿ ಸೂಕ್ಷ್ಮಾಣಿ ಮುನಿಭಿಸ್ತತ್ತ್ವದರ್ಶಿಭಿಃ ।
ಕರ್ಮೇಂದ್ರಿಯಾಣಿ ಜ್ಞೇಯಾನಿ ಸ್ವಕಾರ್ಯಸಹಿತಾನಿ ಚ ॥ ೧೩ ॥

ವಿಪ್ರರ್ಷೇ ವಾಕ್ಕರೌ ಪಾದೌ ಪಾಯೂಪಸ್ಥೌ ಚ ತತ್ಕ್ರಿಯಾಃ ।
ವಚನಾದಾನಗಮನವಿಸರ್ಗಾನಂದಸಂಜ್ಞಿತಾಃ ॥ ೧೪ ॥

ಭೂತಾದಿಕಾದಹಂಕಾರಾತ್ತನ್ಮಾತ್ರಾಣ್ಯಭವನ್ ಕ್ರಮಾತ್ ।
ತಾನಿ ಸೂಕ್ಷ್ಮಾಣಿ ರೂಪಾಣಿ ಶಬ್ದಾದೀನಾಮಿತಿ ಸ್ಥಿತಿಃ ॥೧೫ ॥

ತೇಭ್ಯಶ್ಚಾಕಾಶವಾಯ್ವಗ್ನಿ ಜಲಭೂಮಿಜನಿಃ ಕ್ರಮಾತ್ ।
ವಿಜ್ಞೇಯಾ ಮುನಿಶಾರ್ದೂಲ ಪಂಚಭೂತಮಿತೀಷ್ಯತೇ ॥೧೬ ॥

ಅವಕಾಶಪ್ರದಾನಂ ಚ ವಾಹಕತ್ವಂ ಚ ಪಾವನಂ ।
ಸಂರಂಭೋ ಧಾರಣಂ ತೇಷಾಂ ವ್ಯಾಪಾರಾಃ ಪರಿಕೀರ್ತಿತಾಃ ॥ ೧೭ ॥

---

೧೩-೧೪. ಎಲೈ ಬ್ರಹ್ಮರ್ಷಿಯೇ ಕೇಳು. ಕರ್ಮೇಂದ್ರಿಯಗಳನ್ನೂ, ಅವುಗಳ ಕೆಲಸಗಳನ್ನೂ ಹೇಳುವೆನು. ವಾಕ್, ಹಸ್ತ, ಪಾದ, ಪಾಯು, ಉಪಸ್ಥ ಇವು ಕರ್ಮೇಂದ್ರಿಯಗಳು. ವಚನ (ಮಾತಾಡುವದು) ಆದಾನ [ತೆಗೆದುಕೊಳ್ಳುವುದು] ಗಮನ [ನಡೆಯುವುದು] ವಿಸರ್ಗ [ಮಲವನ್ನು ವಿಸರ್ಜಿಸುವದು] ಆನಂದ[ ಭೋಗವನ್ನು ಅನುಭವಿಸುವದು] ಎಂಬ ಈ ಐದು ಕಾರ್ಯಗಳನ್ನು ಕರ್ಮೇಂದ್ರಿಯಗಳು ನೆರವೇರಿಸುವವು.

೧೫-೧೭. ಪಂಚಭೂತಗಳಿಗೆ ಕಾರಣವಾದ ಅಹಂಕಾರದಿಂದ ತನ್ಮಾತ್ರಗಳು ಕ್ರಮವಾಗಿ ಉತ್ಪನ್ನವಾದವು. ಅವುಗಳು ಶಬ್ದವೇ ಮೊದಲಾದವುಗಳಿಗೆ ಸೂಕ್ಷ್ಮವಾದ ರೂಪಗಳೆಂದು ಹೇಳುವರು. ಆ ಪಂಚತನ್ಮಾತ್ರಗಳಿಂದ ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಎಂಬ ಪಂಚಮಹಾಭೂತಗಳು ಕ್ರಮವಾಗಿ ಹುಟ್ಟಿರುವವು. ಎಂದು ತಿಳಿಯಬೇಕು. ಎಲೈ ಋಷಿಶ್ರೇಷ್ಠನೇ ಕೇಳು, ಈಗ ನಾನು ಪಂಚಮಹಾಭೂತಗಳ ವಿಷಯವನ್ನು ಹೇಳಿರುವೆನು. ಅವಕಾಶವನ್ನುಂಟುಮಾಡುವದು, ಎಲ್ಲಾಕಡೆಯಲ್ಲಿಯೂ ಬೀಸುವದು, ಎಲ್ಲರನ್ನೂ ಪರಿಶುದ್ಧರನ್ನಾಗಿ ಮಾಡುವದು, ಸರಿಯಾದ ವೇಗದಿಂದ ಹರಿಯುವದು, ಎಲ್ಲರನ್ನೂ ಧರಿಸುವದು ಎಂಬಿವುಗಳು ಪಂಚಮಹಾಭೂತಗಳ ಕಾರ್ಯಗಳಾಗಿರುತ್ತವೆ.

॥ ವಾಮದೇವ ಉವಾಚ ॥

ಭೂತಸೃಷ್ಟಿಃ ಪುರಾ ಪ್ರೋಕ್ತಾ ಕಲಾದಿಭ್ಯಃ ಕಥಂ ಪುನಃ ।
ಅನ್ಯಥಾ ಪ್ರೋಚ್ಯತೇ ಸ್ಕಂದ ಸಂದೇಹೋಽತ್ರ ಮಹಾನ್ಮಮ ॥೧೮॥

ಆತ್ಮತತ್ತ್ವಮಕಾರಸ್ಸ್ಯಾದ್ವಿದ್ಯಾ ಸ್ಯಾದುಸ್ತತಃ ಪರಂ ।
ಶಿವತತ್ತ್ವಂ ಮಕಾರಸ್ಸ್ಯಾದ್ವಾಮದೇವೇತಿ ಚಿಂತ್ಯತಾಂ ॥ ೧೯ ॥

ಬಿಂದುನಾದೌ ತು ವಿಜ್ಞೇಯೌ ಸರ್ವತತ್ತ್ವಾರ್ಥಕಾವ್ರಭೌ ।
ತತ್ರತ್ಯಾ ದೇವತಾ ಯಾಶ್ಚ ತಾ ಮುನೇ ಶೃಣು ಸಾಂಪ್ರತಂ ॥ ೨೦ ॥

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಮಹೇಶ್ವರಸದಾಶಿವೌ ।
ತೇ ಹಿ ಸಾಕ್ಷಾಚ್ಛಿವಸ್ಯೈವ ಮೂರ್ತಯಃ ಶ್ರುತಿವಿಶ್ರುತಾಃ ॥ ೨೧ ॥

ಇತ್ಯುಕ್ತಂ ಭವತಾ ಪೂರ್ವಮಿದಾನೀಮುಚ್ಯತೇಽನ್ಯಥಾ ।
ತನ್ಮಾತ್ರೇಭ್ಯೋ ಭವಂತೀತಿ ಸಂದೇಹೋಽತ್ರ ಮಹಾನ್ಮಮ ॥ ೨೨ ॥

ಕೃತ್ವಾ ತತ್ಕರುಣಾಂ ಸ್ಕಂದ ಸಂಶಯಂ ಛೇತ್ತುಮರ್ಹಸಿ ।
ಇತ್ಯಾಕರ್ಣ್ಯ ಮುನೇರ್ವಾಕ್ಯಂ ಕುಮಾರಃ ಪ್ರತ್ಯಭಾಷತ ॥ ೨೩ ॥

---

೧೮-೨೩. ವಾಮದೇವಮುನಿಯು ಪ್ರಶ್ನೆಮಾಡುತ್ತಾನೆ:—ಎಲೈ ಸ್ಕಂದನೇ! ಭೂತಪಂಚಕಗಳ ಸೃಷ್ಟಿಯನ್ನು ಮೊದಲು ಹೇಳಿರುತ್ತೀಯೆ. ಈಗ ಕಲೆಗಳಿಂದ ಭೂತಾದಿಗಳು ಉಂಟಾದವೆಂದು ಬೇರೆ ವಿಧವಾಗಿ ಹೇಳಿರುತ್ತಿರುವೆ! ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿರುವದು. ಆತ್ಮತತ್ತ್ವವು ಅಕಾರವಾಗಿರುವದು. ಉಕಾರವು ವಿದ್ಯಾತತ್ತ್ವವಾಗಿರುವದು. ಶಿವತತ್ತ್ವವು ಮಕಾರವಾಗಿರುವದು ಎಂದು ತಿಳಿಯತಕ್ಕದ್ದೆಂದು ಹೇಳಿರುತ್ತೀಯೆ. ಅಲ್ಲದೆ ಬಿಂದುನಾದಗಳು ಎಲ್ಲಾ ತತ್ತ್ವಗಳನ್ನೂ, ಒಳಗೊಂಡಿರುವವು. ಈ ಅಕಾರ, ಉಕಾರ, ಮಕಾರ ಬಿಂದುನಾದಗಳಿಗೆ ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವ ಎಂಬ ದೇವತೆಗಳು ನಿರ್ದಿಷ್ಟರಾಗಿರುವರು. ಇವರೆಲ್ಲರೂ ಸಾಕ್ಷಾಚ್ಛಿವನ ಆಕಾರವೇ ಎಂದು ಶ್ರುತಿಯಲ್ಲಿ ಹೇಳಿರುವದು. ಎಂಬುದಾಗಿ ನೀನು ಹಿಂದೆಯೇ ಹೇಳಿರುವೆ. ಈಗ ಅದಕ್ಕೆ ವಿರುದ್ಧವಾಗಿ ಪಂಚತನ್ಮಾತ್ರಗಳಿಂದ ಸೃಷ್ಟಿಯು ಉಂಟಾಗುತ್ತದೆಂದು ಹೇಳುತ್ತೀಯೆ. ಆದ್ದರಿಂದ ನನಗೆ

॥ ಶ್ರೀ ಸುಬ್ರಹ್ಮಣ್ಯ ಉವಾಚ ॥

ತಸ್ಮಾದ್ವೇತಿ ಸಮಾರಭ್ಯ ಭೂತಸೃಷ್ಟಿಕ್ರಮೇ ಮುನೇ ।
ತಾಞ್ಛೃಣುಷ್ವ ಮಹಾಪ್ರಾಜ್ಞ ಸಾವಧಾನತಯೋದರಾತ್ ॥ ೨೪ ॥

ಜಾತಾನಿ ಪಂಚ ಭೂತಾನಿ ಕಲಾಭ್ಯ ಇತಿ ನಿಶ್ಚಿತಂ ।
ಸ್ಥೂಲಪ್ರಪಂಚರೂಪಾಣಿ ತಾನಿ ಭೂತಪತೇರ್ವಪುಃ ॥ ೨೫ ॥

ಶಿವತತ್ತ್ವಾದಿಪೃಥ್ವ್ಯಂತಂ ತತ್ತ್ವಾನಾಮುದಯಕ್ರಮೇ ।
ತನ್ಮಾತ್ರೇಭ್ಯೋ ಭವಂತೀತಿ ವಕ್ತವ್ಯಾನಿ ಕ್ರಮಾನ್ಮುನೇ ॥ ೨೬ ॥

ತನ್ಮಾತ್ರಾಣಾಂ ಕಲಾನಾಮಪ್ಯೈಕ್ಯಂ ಸ್ಯಾದ್ಭೂತಕಾರಣಂ ।
ಅವಿರುದ್ಧತ್ವಮೇವಾತ್ರ ವಿದ್ಧಿ ಬ್ರಹ್ಮವಿದಾಂ ವರ ॥ ೨೭ ॥

---

ಈ ವಿಷಯದಲ್ಲಿ ಬಹಳ ಸಂಶಯವುಂಟಾಗಿರುವದು. ನನ್ನಲ್ಲಿ ದಯವಿಟ್ಟು ಈ ಸಂಶಯವನ್ನು ಪರಿಹಾರಮಾಡು ಎಂದನು. ವಾಮದೇವಋಷಿಯು ಈ ವಾಕ್ಯವನ್ನು ಕೇಳಿ ಕುಮಾರಸ್ವಾಮಿಯು ಇಂತು ಪ್ರತ್ಯುತ್ತರವನ್ನು ಹೇಳಿದನು.

೨೪–೨೭. ಎಲೈ ವಾಮದೇವಋಷಿಯೇ! ಕೇಳು. ಪಂಚಭೂತಗಳ ಸೃಷ್ಟಿಯು ಕ್ರಮದಲ್ಲಿ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃಸಂಭೂತಃ" [ತೈ. ಉ. ೨–೧] ಎಂದು ಪ್ರಾರಂಭಿಸಿ ಪಂಚಭೂತಗಳು ಕಲೆಗಳಿಂದ ಉತ್ಪನ್ನವಾದವು ಎಂದು ನಿರ್ಣಯವಾಗಿರುವದು. ಅವುಗಳು ಸ್ಥೂಲವಾದ ಪ್ರಪಂಚದ ರೂಪದಿಂದಿರುವವು. ಅವುಗಳು ಪಂಚಮಹಾಭೂತಗಳಿಗೆ ಅಧಿಪತಿಯಾದ ಶಿವನ ಶರೀರವೇ ಆಗಿರುವದು. ಶಿವತತ್ತ್ವವೇ ಮೊದಲಾಗಿ ಭೂಮಿಯವರೆಗೂ, ತತ್ತ್ವಗಳ ಉತ್ಪತ್ತಿಕ್ರಮದಲ್ಲಿ ಪಂಚ ತನ್ಮಾತ್ರಗಳಿಂದಲೇ ಅವುಗಳು ಹುಟ್ಟಿದವು ಎಂದು ಕ್ರಮವನ್ನು ಹೇಳಲೇಬೇಕು. ಪಂಚ ಭೂತಗಳಿಗೆ ಕಾರಣವಾದ ತನ್ಮಾತ್ರಗಳೂ, ಕಲೆಗಳೂ ಇವೆರಡೂ ಒಂದೇ ಆಗಿರುತ್ತ ವೆಯೇ ಹೊರತು ಇವುಗಳಿಗೆ ಪರಸ್ಪರ ವಿರೋಧವು ಯಾವದೂ ಇಲ್ಲ ಎಂದು ತಿಳಿಯ ಬೇಕು ಎಂದರೆ ತನ್ಮಾತ್ರಗಳಿಂದದೂ ಕಲೆಗಳಿಂದರೂ ಒಂದೇ ಅರ್ಥವು ಪ್ರತಿಪಾದಿಸಲ್ಪ ಡುವದರಿಂದ ಇಲ್ಲಿ ವಿರೋಧಕ್ಕೆ ಅವಕಾಶವಿಲ್ಲ.

ಸ್ಥೂಲಸೂಕ್ಷ್ಮಾತ್ಮಕೇ ವಿಶ್ವೇ ಚಂದ್ರಸೂರ್ಯಾದಯೋ ಗ್ರಹಾಃ ।
ಸನಕ್ಷತ್ರಾಶ್ಚ ಸಂಜಾತಾಸ್ತಥಾನ್ಯೇ ಜ್ಯೋತಿಷಾಂ ಗಣಾಃ ॥ ೨೮ ॥

ಬ್ರಹ್ಮವಿಷ್ಣುಮಹೇಶಾದಿದೇವತಾ ಭೂತಜಾತಯಃ ।
ಇಂದ್ರಾದಯೋಽಪಿ ದಿಕ್ಪಾಲಾ ದೇವಾಶ್ಚ ಪಿತರೋಽಸುರಾಃ ॥ ೨೯ ॥

ರಾಕ್ಷಸಾ ಮಾನುಷಾಶ್ಚಾನ್ಯೇ ಜಂಗಮತ್ವವಿಭಾಗಿನಃ ।
ಪಶವಃ ಪಕ್ಷಿಣಃ ಕೀಟಾಃ ಪನ್ನಗಾದಿಪ್ರಭೇದಿನಃ ॥ ೩೦ ॥

ತರುಗುಲ್ಮಲತೌಷಧ್ಯಃ ಪರ್ವತಾಶ್ಚಾಷ್ಟ ವಿಶ್ರುತಾಃ ।
ಗಂಗಾದ್ಯಾಸ್ಸರಿತಸ್ಸಪ್ತ ಸಾಗರಾಶ್ಚ ಮಹರ್ದ್ಧಯಃ ॥ ೩೧ ॥

ಯತ್ಕಿಂಚಿದ್ವಸ್ತು ಜಾತಂ ತತ್ಸರ್ವಮತ್ರ ಪ್ರತಿಷ್ಠಿತಂ ।
ವಿಚಾರಣೀಯಂ ಸದ್ಬುಧ್ಯಾ ನ ಬಹಿರ್ಮುನಿಸತ್ತಮ ॥ ೩೨ ॥

---

೨೮. ಸ್ಥೂಲ ಮತ್ತು ಸೂಕ್ಷ್ಮರೂಪದಿಂದಿರುವ ಈ ಪ್ರಪಂಚದಲ್ಲಿ ಸೂರ್ಯ, ಚಂದ್ರರೇ ಮೊದಲಾದ ಗ್ರಹಗಳೂ, ನಕ್ಷತ್ರಗಳೂ ಪ್ರಕಾಶದಿಂದ ಬೆಳಗುವ ಇತರ ಗೋಳಗಳೂ ಉತ್ಪನ್ನವಾಗಿರುವವು.

೨೯–೩೨. ಬ್ರಹ್ಮ, ವಿಷ್ಣು, ಮಹೇಶ್ವರನೇ ಮೊದಲಾದ ದೇವತೆಗಳೂ, ಪ್ರಾಣಿಗಳ ಸಮೂಹವೂ, ಇಂದ್ರನೇ ಮೊದಲಾದ ದಿಕ್ಪಾಲಕರೂ, ದೇವತೆಗಳೂ, ಪಿತೃಗಳೂ, ಅಸುರರೂ, ರಾಕ್ಷಸರೂ, ಮನುಷ್ಯರೂ, ಮತ್ತು ಇತರ ಜಂಗಮಪ್ರಾಣಿಗಳೂ, ಪಶು ಪಕ್ಷಿಗಳೂ, ಹಾವೇ ಮೊದಲಾದ ಪ್ರಾಣಿಗಳೂ, ಹರಿದಾಡುವ ಹುಳುಗಳೂ, ಮರ ಬಳ್ಳಿ ಪೊದೆ ಮೂಲಿಕೆ ಇವುಗಳೂ ಪ್ರಸಿದ್ಧವಾದ ಎಂಟು ಪರ್ವತಗಳೂ ಗಂಗೆಯೇ ಮೊದಲಾದ ನದಿಗಳೂ ಸಪ್ತ ಸಮುದ್ರಗಳೂ ಈ ಪ್ರಪಂಚದಲ್ಲಿರುವ ಸಣ್ಣಪದಾರ್ಥ ಮೊದಲುಗೊಂಡು ಎಲ್ಲವೂ ಈ ಶಿವನಲ್ಲಿ [ಪ್ರತಿಷ್ಠೆ] ಸ್ಥಿತಿಯನ್ನು ಹೊಂದಿರುವದು ಎಂದರೆ ಎಲ್ಲವೂ ಶಿವನ ಸ್ವರೂಪವೇ ಆಗಿರುವದು. ಇದಕ್ಕಿಂತ ಹೊರಗಡೆಯಲ್ಲಿ ಎಂದರೆ ಶಿವಸ್ವರೂಪವನ್ನು ಬಿಟ್ಟು ಬೇರೆ ವಸ್ತುವೇ ಇಲ್ಲವೆಂದು ಸರಿಯಾದ ಬುದ್ಧಿಯಿಂದ ವಿಚಾರಮಾಡಿ ತಿಳಿಯತಕ್ಕದ್ದು.

**ಸ್ತ್ರೀಪುಂರೂಪಮಿದಂ ವಿಶ್ವಂ ಶಿವಶಕ್ತ್ಯಾತ್ಮಕಂ ಬುಧೈಃ**
**ಭವಾದೃಶೈರುಪಾಸ್ಯಂ ಸ್ಯಾಚ್ಛಿವಜ್ಞಾನವಿಶಾರದೈಃ ॥ ೩೩ ॥**

**ಸರ್ವಂ ಬ್ರಹ್ಮೇತ್ಯುಪಾಸೀತ ಸರ್ವಂ ವೈ ರುದ್ರ ಇತ್ಯಪಿ ।**
**ಶ್ರುತಿರಾಹ ಮುನೇ ತಸ್ಮಾತ್ಪ್ರಪಂಚಾತ್ಮಾ ಸದಾಶಿವಃ ॥ ೩೪ ॥**

**ಅಷ್ಟತ್ರಿಂಶತ್ಕಲಾನ್ಯಾಸಸಾಮರ್ಥ್ಯಾಗ್ದ್ವೈತಭಾವನಾ ।**
**ಸದಾಶಿವೋಽಹಮೇವೇತಿ ಭಾವಿತಾತ್ಮಾ ಗುರುಃ ಶಿವಃ ॥ ೩೫ ॥**

**ಏವಂ ವಿಚಾರೀ ಸಚ್ಛಿಷ್ಯೋ ಗುರುಸ್ಸ್ಯಾತ್ಸ ಶಿವಸ್ಸ್ವಯಂ ।**
**ಪ್ರಪಂಚದೇವತಾಯಂತ್ರಮಂತ್ರಾತ್ಮಾ ನ ಹಿ ಸಂಶಯಃ ॥ ೩೬ ॥**

---

೩೩. ಎಲೈ ವಾಮದೇವಮುನಿಯೇ ! ಕೇಳು ಸ್ತ್ರೀಪುರುಷರ ರೂಪದಿಂದ ಇರುವ ಈ ಪ್ರಪಂಚವೆಲ್ಲವೂ ಶಿವಶಕ್ತಿರೂಪಾಂತರಗಳೆಂದು ವಿಚಾರಮಾಡಿ ವಿದ್ವಾಂಸರು ತಿಳಿಯತಕ್ಕದ್ದು. ಶಿವಸಂಬಂಧವಾದ ಜ್ಞಾನವನ್ನು ಚೆನ್ನಾಗಿ ತಿಳಿದಿರುವ ನಿಮ್ಮಂತಹ ಮುನಿಗಳು ಈ ವಿಷಯುವನ್ನು ವಿಚಾರಮಾಡಿ ತಿಳಿಯತಕ್ಕದ್ದಾಗಿರುವದು.

೩೪-೩೬. ವೇದವು "ಸರ್ವಂ ಬ್ರಹ್ಮೇತ್ಯುಪಾಸೀತ" "ಸರ್ವೋ ವೈ ರುದ್ರಃ" ಎಂಬುದಾಗಿ ಹೇಳುತ್ತಿರುವದರಿಂದ ಸದಾಶಿವನು ಈ ಪ್ರಪಂಚದ ರೂಪದಿಂದಿರುವನು ಎಂದರೆ ಈ ಪ್ರಪಂಚದಲ್ಲಿರುವ ಚರಾಚರವಸ್ತುಗಳೆಲ್ಲವೂ ಸದಾಶಿವನ ರೂಪಗಳೇ ಹೊರತು ಬೇರೆಯಲ್ಲ. ಸಮಸ್ತವಿಶ್ವವೂ ಪರಬ್ರಹ್ಮನ ರೂಪಾಂತರಗಳು. ಎಲ್ಲವೂ ಬ್ರಹ್ಮಮಯವಾಗಿಯೇ ಇರವವು. ಬ್ರಹ್ಮಮಯವಲ್ಲದ ವಸ್ತುವು ಎಲ್ಲಿಯೂ ಇಲ್ಲವೇ ಇಲ್ಲ. ಶಿವನೇ ಪರಬ್ರಹ್ಮನಾಗಿರುವದರಿಂದ ಚರಾಚರಪ್ರಪಂಚವೆಲ್ಲವೂ ಶಿವಮಯವು. ಇದನ್ನೇ ಶ್ರುತಿಗಳು ಸಾರಿಹೇಳುತ್ತಿರುವವು. ಮೂವತ್ತೆಂಟು ಕಲೆಗಳನ್ನು ನ್ಯಾಸಮಾಡಿ ನಿರ್ವಿಕಾರರೂಪನಾದ ಶಿವನನ್ನು ಅದ್ವೈತಭಾವನೆಯಿಂದ ಉಪಾಸನೆಮಾಡುವ ಗುರುವು "ಸದಾಶಿವೋಽಹಮೇವ" ನಾನೇ ಸದಾಶಿವನು ಎಂದು ಭಾವನೆಯನ್ನು ದೃಢವಾಗಿ ಹೊಂದಿರುವುದರಿಂದ ಅವನು ಶಿವನಾಗಿರುವನು ಈ ಪ್ರಕಾರವಾಗಿ ವಿಚಾರವನ್ನು ಮಾಡುತ್ತಿರುವ ಉತ್ತಮನಾದ ಶಿಸ್ಯನು ಅದ್ವೈತಭಾವನೆಯು ದೃಢವಾದರೆ ತಾನೇ ಗುರುವಾಗಿಯೂ, ತಾನೇ ಶಿವನಾಗಿಯೂ ಇರು

ಆಚಾರ್ಯರೂಪಯಾ ವಿಪ್ರ ಸಂಛಿನ್ನಾಖಿಲಬಂಧನಃ ।
ಶಿಶುಶ್ಶಿವಪದಾಸಕ್ತೋ ಗುರ್ವಾತ್ಮಾ ಭವತಿ ಧ್ರುವಂ ॥ ೩೭ ॥

ಯದಸ್ತಿ ವಸ್ತು ತತ್ಸರ್ವಂ ಗುಣಪ್ರಾಧಾನ್ಯಯೋಗತಃ ।
ಸಮಸ್ತಂ ವ್ಯಸ್ತಮಪಿ ಚ ಪ್ರಣವಾರ್ಥಂ ಪ್ರಚಕ್ಷತೇ ॥ ೩೮ ॥

ರಾಗಾದಿದೋಷರಹಿತಂ ವೇದಸಾರಃ ಶಿವೋದಿತಃ ।
ತುಭ್ಯಂ ಮೇ ಕಥಿತಂ ಪ್ರೀತ್ಯಾದ್ವೈತಜ್ಞಾನಂ ಶಿವಪ್ರಿಯಂ ॥ ೩೯ ॥

ಯೋ ಹ್ಯನ್ಯಥೈತನ್ಮನುತೇ ಮದ್ವಚೋ ಮದಗರ್ವಿತಃ ।
ದೇವೋ ವಾ ಮಾನವಸ್ಸಿದ್ಧೋ ಗಂಧರ್ವೋ ಮನುಜೋಽಪಿ ವಾ ॥ ೪೦ ॥

---

ವೆನೆಂದು ತಿಳಿದುಕೊಳ್ಳುವನು ಎಂದರೆ ಭೇದಭಾವವು ಹೋಗಿ ತಾನೇ ಪ್ರಪಂಚ, ದೇವತಾ, ಯಂತ್ರ, ಮಂತ್ರ ಇವುಗಳ ರೂಪವುಳ್ಳವನಾಗಿರುವೆನು ಎಂದು ತಿಳಿದುಕೊಳ್ಳುವನು. ಈ ವಿಷಯದಲ್ಲಿ ಕೊಂಚವೂ ಸಂಶಯವನ್ನು ಪಡಬೇಕಾಗಿಲ್ಲ.

೩೭. ಎಲೈ ವಿಪ್ರನೇ, ಕೇಳು. ಶಿಷ್ಯನು ತನ್ನ ಬಾಲ್ಯದಿಂದಲೂ, ಆಚಾರ್ಯರೂಪದಿಂದ ಇರುವ ತನ್ನ ಗುರುವಿನಿಂದ ಸಮಸ್ತ ಬಂಧನವೂ ನಾಶಮಾಡಲ್ಪಟ್ಟಮೇಲೆ ತನ್ನ ಗುರುವಿನಲ್ಲಿರುವ ಸರಿಯಾದ ಭಾವನೆಯಿಂದ ಶಿವನ ಪಾದಕಮಲಗಳಲ್ಲಿ ಆಸಕ್ತನಾಗಿದ್ದುಕೊಂಡು ಸರ್ವಾತ್ಮಭಾವವನ್ನು ಹೊಂದಿ ಎಲ್ಲರಿಂದಲೂ ಗೌರವಿಸ್ಪಡುವನು.

೩೮. ಗುಣಪ್ರಧಾನಭಾವದಿಂದಿರುವ ಎಂದರೆ ಸತ್ತ್ವರಜಸ್ತಮೋಗುಣಾತ್ಮಕವಾದ ಪದಾರ್ಥಗಳೆಲ್ಲವೂ, ಒಟ್ಟಾಗಿಯೂ, ಬೇರೆಬೇರೆಯಾಗಿಯೂ, ಪ್ರಣವಮಂತ್ರದ ಅರ್ಥವಾಗಿರುವವುಗಳೆಂದು ಹೇಳುವರು.

೩೯. ವೇದಗಳಲ್ಲೆಲ್ಲಾ ಸಾರಭೂತವಾಗಿಯೂ, ರಾಗಾದಿದೋಷರಹಿತವಾಗಿಯೂ, ಶಿವನಿಗೆ ಪ್ರಿಯುವಾಗಿಯೂ ಇರುವ ಈ ಶಿವಾದ್ವೈತಜ್ಞಾನವನ್ನು ನಿನ್ನ ಮೇಲಿನ ಪ್ರೀತಿಯಿಂದ ನಿನಗೆ ಹೇಳಿರುವೆನು.

೪೦–೪೧. ದೇವತೆಯಾಗಲಿ, ಮನುಷ್ಯನಾಗಲಿ, ಸಿದ್ಧನಾಗಲಿ, ಗಂಧರ್ವನಾಗಲಿ, ದಾನವನೇ ಆಗಲಿ ಯಾವನೇ ಆದಾಗ್ಯೂ ಈ ನನ್ನ ಮಾತುಗಳನ್ನು ಬೇರೇ

ದುರಾತ್ಮನಸ್ತಸ್ಯ ಶಿರಶ್ಛಿಂದ್ಯಾಂ ಸಮತಯಾ ಧ್ರುವಂ ।
ಸಚ್ಛಕ್ತ್ಯಾ ರಿಪುಕಾಲಾಗ್ನಿ ಕಲ್ಪಯಾ ನ ಹಿ ಸಂಶಯಃ ॥ ೪೧ ॥

ಭವಾನೇವ ಮುನೇ ಸಾಕ್ಷಾಚ್ಛಿವಾದ್ವೈತವಿದಾಂ ವರಃ ।
ಶಿವಜ್ಞಾನೋಪದೇಶೇ ಹಿ ಶಿವಾಚಾರಪ್ರದರ್ಶಕಃ ॥ ೪೨ ॥

ಯದ್ದೇಹಭಸ್ಮಸಂಪರ್ಕಾತ್ಸಂಛಿನ್ನಾಘವ್ರಜೋಽಶುಚಿಃ ।
ಮಹಾಪಿಶಾಚಃ ಸಂಪ್ರಾಪ ತ್ವತ್ಕೃಪಾತಸ್ಸತಾಂ ಗತಿಂ ॥ ೪೩ ॥

ಶಿವಯೋಗೀತಿ ಸಂಖ್ಯಾತಸ್ತ್ರಿಲೋಕವಿಭವೋ ಭವಾನ್ ।
ಭವತ್ಕಟಾಕ್ಷಸಂಪರ್ಕಾತ್ಪಶುಃ ಪಶುಪತಿರ್ಭವೇತ್ ॥ ೪೪ ॥

---

ವಿಧವಾಗಿ ತಿಳಿದುಕೊಂಡು ದುರಹಂಕಾರಿಯಾಗಿರುವನೋ, ಅಂತವನ ಶಿರಸ್ಸನ್ನು, ಶತ್ರುಗಳಿಗೆ ಪ್ರಳಯಕಾಲಾಗ್ನಿಯಂತೆ ಇರುವ ನನ್ನ ಸದ್ರೂಪವಾದ ಶಕ್ತ್ಯಾಯುಧ ದಿಂದ ಕತ್ತರಿಸುವೆನು ಇದರಲ್ಲಿ ಸಂಶಯವಿಲ್ಲ.

೪೨. ಎಲೈ ವಾಮದೇವಮುನಿಯೇ ನೀನು ಸಾಕ್ಷಾಚ್ಛಿವಾದ್ವೈತವನ್ನು ತಿಳಿದವರಲ್ಲಿ ಶ್ರೇಷ್ಠನಾಗಿರುವೆ. ಶಿವಜ್ಞಾನವನ್ನು ಇತರರಿಗೆ ಉಪದೇಶಮಾಡು ವದರಲ್ಲಿಯೂ, ಶಿವವ್ರತಾದಿಗಳನ್ನು ನಿಯಮದಿಂದ ಆಚರಿಸುವುದರಲ್ಲಿಯೂ ಶ್ರೇಷ್ಠ ನಾಗಿರುವೆ. ಈ ವಿಚಾರದಲ್ಲಿ ಇತರರಿಗೂ ಮಾರ್ಗಪ್ರದರ್ಶಕನಾಗಿರುವೆ.

೪೩. ನಿನ್ನ ದೇಹದಲ್ಲಿ ನೀನು ಅವಲೇಪನಮಾಡಿಕೊಂಡಿರುವ ಭಸ್ಮದ ಸ್ಪರ್ಶಮಾತ್ರದಿಂದ ದೊಡ್ಡ ಪಿಶಾಚಿಯೂ ಸಹ ತನ್ನ ಪಾಪಸಮೂಹಗಳನ್ನು ನಾಶ ಪಡಿಸಿಕ್ಕೊಂಡು ಪರಿಶುದ್ಧವಾಗಿ ನಿನ್ನ ದಯೆಯಿಂದ ಸತ್ಪುರುಷರ ಗತಿಯನ್ನು ಹೊಂದುವದು.

೪೪-೪೫. ನೀನು ಶಿವಯೋಗೀ ಎಂದು ಪ್ರಸಿದ್ಧನಾಗಿ ಮೂರು ಲೋಕಗಳ

ತವ ತಸ್ಯ ಮಯಿ ಪ್ರೇಕ್ಷಾ ಲೋಕಶಿಕ್ಷಾರ್ಥಮಾದರಾತ್ ।
ಲೋಕೋಪಕಾರಕರಣೇ ವಿಚರಂತೀಹ ಸಾಧವಃ ॥ ೪೫ ॥

ಇದಂ ರಹಸ್ಯಂ ಪರಮಂ ಪ್ರತಿಷ್ಠಿತಮತಸ್ತ್ವಯಿ ।
ತ್ವಮಪಿ ಶ್ರದ್ಧಯಾ ಭಕ್ತ್ಯಾ ಪ್ರಣವೇಷ್ವೇವ ಸಾದರಂ ॥ ೪೬ ॥

ಉಪವಿಶ್ಯ ಚ ತಾನ್ಸರ್ವಾನ್ಸಂಯೋಜ್ಯ ಪರಮೇಶ್ವರೇ ।
ಶಿವಾಚಾರಂ ಗ್ರಾಹಯಸ್ವ ಭೂತಿರುದ್ರಾಕ್ಷಮಿಶ್ರಿತಂ ॥ ೪೭ ॥

ತ್ವಂ ಶಿವೋ ಹಿ ಶಿವಾಚಾರೀ ಸಂಪ್ರಾಪ್ತಾದ್ವೈತಭಾವತಃ ।
ವಿಚರಂಲ್ಲೋಕರಕ್ಷಾಯೈ ಸುಖಮಕ್ಷಯಮಾಪ್ನುಹಿ ॥ ೪೮ ॥

---

ಲ್ಲಿಯೂ ಪ್ರಸಿದ್ಧವಾದ ಮಹಿಮೆಯುಳ್ಳವನಾಗಿರುವೆ. ನಿನ್ನ ಕಟಾಕ್ಷದ ಸಂಬಂಧ ಮಾತ್ರದಿಂದ ಪಶುವಾದವನೂ ಕೂಡ ಪಶುಪತಿಯಾಗುವನು. ಇಂತಹ ಮಹಿಮೆಯುಳ್ಳ ನೀನು ನನ್ನನ್ನು ವಿಶ್ವಾಸದಿಂದ ಬಂದು ದರ್ಶನಮಾಡಿರುತ್ತೀಯೆ. ಇದು ಲೋಕಶಿಕ್ಷಾರ್ಥವಾಗಿಯೇ ಹೊರತು ಬೇರೆಯಲ್ಲ. ಸಾಧುಗಳು ಯಾವಾಗಲೂ ಲೋಕೋಪಕಾರಕಾರ್ಯಗಳಲ್ಲಿಯೇ ನಿರತರಾಗಿರುವರಲ್ಲವೇ?

೪೬–೪೮. ಈ ಶಿವಜ್ಞಾನವು ಬಹಳ ರಹಸ್ಯವಾದುದು. ಇದನ್ನು ನಿನಗೆ ಮಾತ್ರ ಉಪದೇಶಮಾಡಿರುವೆನು. ನೀನೂ ಕೂಡ ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಪ್ರಣವಮಂತ್ರಜಪದಲ್ಲಿ ಆಸಕ್ತಿವಹಿಸಿ ಆ ಮಹಾಮಂತ್ರದ ಅರ್ಥವನ್ನು ಚೆನ್ನಾಗಿ ಮನನಮಾಡಿ ಅದನ್ನು ಅದ್ವೈತಭಾವದಿಂದ ಪರಮೇಶ್ವನಲ್ಲಿ ಸಮರ್ಪಿಸು. ವಿಭೂತಿ ರುದ್ರಾಕ್ಷಗಳನ್ನು ಧಾರಣಮಾಡಿ ಅದ್ವೈತಭಾವನೆಯಿಂದ ಉತ್ತಮವಾದ ಶಿವಾಚಾರ ದೀಕ್ಷೆಯನ್ನು ಕೈಗೊಂಡು ಲೋಕಕಲ್ಯಾಣಕ್ಕಾಗಿ ಸಂಚರಿಸುತ್ತಾ ಈ ಶಿವಾದ್ವೈತವನ್ನು ಸಕಲರಿಗೂ ಬೋಧಿಸು. ನಿನಗೆ ಶಾಶ್ವತವಾದ ಸುಖವು ಲಭಿಸಲಿ ಎಂದನು.

॥ ಸೂತ ಉವಾಚ ॥

ಶ್ರುತ್ವೇದಮುದ್ಭುತಮತಂ ಹಿ ಷಡಾನನೋಕ್ತಂ
ವೇದಾಂತನಿಶ್ಚಿತಮೃಷಿಸ್ತು ವಿನಮ್ರಮೂರ್ತಿಃ ।
ಭೂತ್ವಾ ಪ್ರಣಮ್ಯ ಬಹುಶೋ ಭುವಿ ದಂಡವತ್ತ-
ತ್ಪಾದಾರವಿಂದವಿಹರನ್ಮಧುಪತ್ವಮಾಪ ॥ ೪೯ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಶಿವಾದ್ವೈತಜ್ಞಾನಕಥನಾದಿಸೃಷ್ಟಿಕಥನಂ ನಾಮ
ಸಪ್ತದಶೋಽಧ್ಯಾಯಃ

---

೪೯. ಸೂತಪುರಾಣಿಕನಿಂತೆಂದನು—ವಾಮದೇವಋಷಿಯು ಷಣ್ಮುಖಸ್ವಾಮಿಯು ಹೇಳಿದ ಆಶ್ಚರ್ಯಕರವಾದ ವೇದಾಂತದ ನಿಶ್ಚಯಾರ್ಥವನ್ನು ಕೇಳಿ ವಿನಯದಿಂದ ಬಗ್ಗಿ ಭೂಮಿಯಲ್ಲಿ ಅನೇಕಸಾರಿ ದಂಡಾಕಾರವಾಗಿ ನಮಸ್ಕರಿಸಿ, ಆ ಕುಮಾರಸ್ವಾಮಿಯ ಪಾದಕಮಲಗಳಲ್ಲಿ ದೃಢವಾದ ಭಕ್ತಿಯನ್ನು ಹೊಂದಿ ತದೈಕಧ್ಯಾನನಿರತನಾಗಿದ್ದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಶಿವಾದ್ವೈತಜ್ಞಾನ
ಕಥನವೆಂಬ ಹದಿನೇಳನೆಯ ಅಧ್ಯಾಯವು
ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮಹಾ ಪುರಾಣೇ

## ಕೈಲಾಸಸಂಹಿತಾಯಾಂ

## ಅಷ್ಟಾದಶೋಽಧ್ಯಾಯಃ

॥ ಶೌನಕ ಉವಾಚ ॥

ಶ್ರುತ್ವಾ ವೇದಾಂತಸಾರಂ ತದ್ರಹಸ್ಯಂ ಪರಮಾದ್ಭುತಂ ।
ಕಿಂ ಪೃಷ್ಟವಾನ್ವಾಮದೇವೋ ಮಹೇಶ್ವರಸುತಂ ತದಾ ॥ ೧ ॥

ಧನ್ಯೋ ಯೋಗೀ ವಾಮದೇವಃ ಶಿವಜ್ಞಾನರತಸ್ಸದಾ ।
ಯತ್ಸಂಬಂಧಾತ್ಕಥೋತ್ಪನ್ನಾ ದಿವ್ಯಾ ಪರಮಪಾವನೀ ॥ ೨ ॥

---

## ಹದಿನೆಂಟನೆಯ ಅಧ್ಯಾಯ.

೧-೨. ಶೌನಕಋಷಿಯು ಸೂತನನ್ನು ಕುರಿತಿಂತೆಂದನು.—ವಾಮದೇವ ಋಷಿಯು ಬಹಳ ಆಶ್ಚರ್ಯಕರವಾದ ವೇದಾಂತಶಾಸ್ತ್ರದ ರಹಸ್ಯವೆಲ್ಲವನ್ನೂ ಕೇಳಿದ ನಂತರ, ಮಹೇಶ್ವರನ ಪುತ್ರನಾದ ಕುಮಾರಸ್ವಾಮಿಯನ್ನು ಮತ್ತೇನು ಕೇಳಿದನು? ಏನು ಉತ್ತರವನ್ನು ಪಡೆದನು? ಈ ವಾಮದೇವಋಷಿಯು ಬಹಳ ಧನ್ಯನು ಮತ್ತೂ ಯೋಗಿಯು. ಇವನು ಯಾವಾಗಲೂ ಶಿವಜ್ಞಾನದಲ್ಲಿಯೇ ಆಸಕ್ತನಾಗಿರುವನು. ಇಂತಹ ಮುನಿಯ ಸಂಬಂಧದಿಂದ ಬಹಳ ಪರಿಶುದ್ಧಿಯನ್ನುಂಟುಮಾಡುವ ಶ್ರೇಷ್ಠವಾದ ಈ ಶಿವನ ಚರಿತ್ರೆಯು ನಮಗೆಲ್ಲರಿಗೂ ತಿಳಿದಂತಾಯಿತು ಎಂದನು.

ಇತಿ ಶ್ರುತ್ವಾ ಮುನೀನಾಂ ತದ್ವಚನಂ ಪ್ರೇಮಗರ್ಭಿತಂ ।
ಸೂತಃ ಪ್ರಾಹ ಪ್ರಸನ್ನಸ್ತು ಧ್ಯಾತ್ವಾಽಶಕ್ತಮನಾ ಬುಧಃ ॥ ೩ ॥

॥ ಸೂತ ಉವಾಚ ॥

ಧನ್ಯಾ ಯೂಯಂ ಮಹಾದೇವಭಕ್ತಾ ಲೋಕೋಪಕಾರಕಾಃ ।
ಶೃಣುಧ್ವಂ ಮುನಯಸ್ಸರ್ವೇ ಸಂವಾದಂ ಚ ತಯೋಃ ಪುನಃ ॥ ೪ ॥

ಶ್ರುತ್ವಾ ಮಹೇಶತನಯವಚನಂ ದ್ವೈತನಾಶಕಂ ।
ಅದ್ವೈತಜ್ಞಾನಜನಕಂ ಸಂತುಷ್ಟೋಽಭೂನ್ಮಹಾಮುನಿಃ ॥ ೫ ॥

ನತ್ವಾ ಸ್ತುತ್ವಾ ಚ ವಿವಿಧಂ ಕಾರ್ತಿಕೇಯಂ ಶಿವಾತ್ಮಜಂ ।
ಪುನಃ ಪ್ರಪಚ್ಛ ತತ್ತ್ವಂ ಹಿ ವಿನಯೇನ ಮಹಾಮುನಿಃ ॥ ೬ ॥

॥ ವಾಮದೇವ ಉವಾಚ ॥

ಭಗವನ್ಸರ್ವತತ್ತ್ವಜ್ಞ ಷಣ್ಮುಖಾಮೃತವಾರಿಧೇ ।
ಗುರುತ್ವಂ ಕಥಮೇತೇಷಾಂ ಯತೀನಾಂ ಭಾವಿತಾತ್ಮನಾಂ ॥ ೭ ॥

---

೩. ಸೂತಪುರಾಣಿಕನು ಈ ಋಷಿಗಳ ಅರ್ಥಗರ್ಭಿತವಾದ ಈ ಮಾತುಗಳನ್ನು ಕೇಳಿ ಸಂತೋಷಗೊಂಡು ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸುತ್ತಾ ಇಂತೆಂದನು.

೪. ಎಲೈ ಋಹರ್ಷಿಗಳಿರಾ, ನೀವೇ ಪುಣ್ಯವಂತರು. ಶಿವನಲ್ಲಿ ಭಕ್ತಿಯುಳ್ಳವರು. ಲೋಕಕ್ಕೆ ಉಪಕಾರವನ್ನು ಮಾಡುವವರು. ಷಣ್ಮುಖನಿಗೂ ವಾಮದೇವನಿಗೂ ನಡೆದಿರುವ ಸಂವಾದವನ್ನು ಇನ್ನೂ ಹೇಳುವೆನು ಕೇಳಿ.

೫-೬. ಮಹಾದೇವನ ಪುತ್ರನಾದ ಕುಮಾರಸ್ವಾಮಿಯು, ದ್ವೈತಭಾವನೆಯನ್ನು ನಾಶಮಾಡಿ ಶಿವಾದ್ವೈತಜ್ಞಾನವನ್ನುಂಟುಮಾಡುವ ಮಾತುಗಳಾಡಿದುದನ್ನು ಕೇಳಿ ವಾಮದೇವಋಷಿಗೆ ಪರಮಾನಂದವಾಯಿತು. ಬಳಿಕ ಆ ಮುನಿಯು ಶಿವಪುತ್ರನಾದ ಆ ಕುಮಾರಸ್ವಾಮಿಯನ್ನು ಮತ್ತೆ ನಮಸ್ಕರಿಸಿ, ಸ್ತೋತ್ರಮಾಡಿ ತತ್ತ್ವವಿಚಾರವನ್ನು ವಿಸ್ತಾರವಾಗಿ ಅರುಹಬೇಕೆಂದು ವಿನಯದಿಂದ ಪ್ರಾರ್ಥಿಸಿದನು.

೭-೮. ಎಲೈ ಪೂಜ್ಯನಾದ ಷಣ್ಮುಖನೇ, ನೀನು ಸಮಸ್ತ ತತ್ತ್ವಗಳನ್ನೂ ತಿಳಿದಿರುವೆ. ನೀನು ಅಮೃತಸ್ವರೂಪನು. ನೀನು ಹೇಳಿದ ಪ್ರಕಾರದಂತೆ ಶಿವ

ಜೀವಾನಾಂ ಭೋಗಮೋಕ್ಷಾದಿಸಿದ್ಧಿಸ್ಸಿಧ್ಯತಿ ಯದ್ವಶಾತ್ ।
ಪಾರಂಪರ್ಯಂ ವಿನಾ ನೈಷಾಮುಪದೇಶಾಧಿಕಾರಿತಾ ॥ ೮ ॥

ಏವಂ ಚ ಕ್ಷೌರಕರ್ಮಾಂಗಂ ಸ್ನಾನಂ ಚ ಕಥಮೀದೃಶಂ ।
ಇತಿ ವಿಜ್ಞಾಪಯ ಸ್ವಾಮಿನ್ಸಂಶಯಂ ಛೇತ್ತುಮರ್ಹಸಿ ॥ ೯ ॥

ಇತಿ ಶ್ರುತ್ವಾ ಕಾರ್ತಿಕೇಯೋ ವಾಮದೇವವಚಃ ಸ್ಮರನ್ ।
ಶಿವಂ ಶಿವಾಂ ಚ ಮನಸಾ ಧ್ಯಾಯನ್ವಕ್ತುಮುಪಚಕ್ರಮೇ ॥ ೧೦ ॥

॥ ಶ್ರೀಸುಬ್ರಹ್ಮಣ್ಯ ಉವಾಚ ॥

ಯೋಗಪಟ್ಟಂ ಪ್ರವಕ್ಷ್ಯಾಮಿ ಗುರುತ್ವಂ ಯೇನ ಜಾಯತೇ ।
ತವ ಸ್ನೇಹಾದ್ವಾಮದೇವ ಮಹದ್ಗೋಪ್ಯಂ ವಿಮುಕ್ತಿದಂ ॥ ೧೧ ॥

---

ಜ್ಞಾನವನ್ನು ತಿಳಿದವರೂ, ಆತ್ಮಭಾವನೆಯುಳ್ಳವರೂ ಆದ ಯತಿಗಳಿಗೆ ಗುರುಪದವಿಯು ಹೇಗೆ ಲಭಿಸುವದು? ಶಿಷ್ಯನನ್ನು ಪರಿಗ್ರಹಿಸುವ ಕ್ರಮವು ಯಾವದು? ಗುರುಗಳ ಪರಂಪರೆಯ ಕ್ರಮದಿಂದಲೇ ಉಪದೇಶವನ್ನು ಹೋದುವ ಕ್ರಮವು ಇರುವದರಿಂದ, ಜೀವರಿಗೆ ಭೋಗ ಮೋಕ್ಷಗಳೇ ಮೊದಲಾದ ಸಿದ್ಧಿಯು ಉಂಟಾಗುವದಕ್ಕೆ ಗುರುವಿನ ಅನುಗ್ರಹವು ಅತ್ಯವಶ್ಯಕವಾದ ಕಾರಣ, ಶಿಷ್ಯಪರಿಗ್ರಹಕ್ರಮವನ್ನು ಹೇಳು. ಶಿಷ್ಯನನ್ನು ಪರಿಗ್ರಹಿಸುವಾಗ ಕ್ಷೌರಕರ್ಮಕ್ಕೆ ಅಂಗವಾದ ಸ್ನಾನಕ್ರಮವು ಯಾವರೀತಿಯಾಗಿರುವದು? ಈ ವಿಷಯಗಳನ್ನೆಲ್ಲಾ ನನಗೆ ಚೆನ್ನಾಗಿ ವಿವರಿಸಿ ಹೇಳಿ ನನಗೆ ಉಂಟಾಗಿರುವ ಈ ಸಂಶಯವನ್ನು ಪರಿಹಾರಮಾಡು ಎಂದು ವಿಜ್ಞಾಪನೆ ಮಾಡಿಕೊಂಡನು.

೧೦. ಕೃತ್ತಿಕಾಪುತ್ರನಾದ ಷಣ್ಮುಖನು ವಾಮದೇವಋಷಿಯ ಮಾತುಗಳನ್ನು ಕೇಳಿ, ಶಿವನನ್ನೂ ಪಾರ್ವತೀದೇವಿಯನ್ನೂ ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಅವನ ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಹೇಳಲುಪಕ್ರಮಿಸಿದನು.

೧೧. ಸುಬ್ರಹ್ಮಣ್ಯೇಶ್ವರನು ಹೇಳಿದನು.—ಎಲೈ ವಾಮದೇವನೇ, ಈಗ ಯೋಗಪಟ್ಟವನ್ನು ಹೇಳುವೆನು. ಆ ಯೋಗಪಟ್ಟದ ಕ್ರಮದಿಂದ ದೀಕ್ಷೆಯನ್ನು ಹೊಂದಿದವನು ಗುರುವೆನಿಸಿಕೊಳ್ಳುವನು. ಈ ಯೋಗಪಟ್ಟವೆಂಬುದು ಬಹಳ ರಹಸ್ಯವಾಗಿರುವದು, ಇದು ಮುಕ್ತಿಯನ್ನುಂಟುಮಾಡುವದು. ನಿನ್ನ ವಿಷಯದಲ್ಲಿರುವ ಪ್ರೀತಿಯಿಂದ ನಾನು ನಿನಗೆ ಹೇಳುವೆನು.

ವೈಶಾಖೇ ಶ್ರಾವಣೇ ಮಾಸಿ ತಥಾಶ್ವಯುಜಿ ಕಾರ್ತಿಕೇ ।
ಮಾರ್ಗಶೀರ್ಷೇ ಚ ಮಾಘೇ ವಾ ಶುಕ್ಲಪಕ್ಷೇ ಶುಭೇ ದಿನೇ ॥ ೧೨ ॥

ಪಂಚಮ್ಯಾಂ ಪೌರ್ಣಮಾಸ್ಯಾಂ ವಾ ಕೃತಪ್ರಾಭಾತಿಕಕ್ರಿಯಃ ।
ಲಬ್ಧಾನುಜ್ಞಸ್ತು ಗುರುಣಾ ಸ್ನಾತ್ವಾ ನಿಯತಮಾನಸಃ ॥ ೧೩ ॥

ಪರ್ಯ್ಯಂಕಶೌಚಂ ಕೃತ್ವಾ ತದ್ವಾಸಸಾಂಗಂ ಪ್ರಮೃಜ್ಯ ಚ ।
ದ್ವಿಗುಣಂ ದೋರಮಾಬಧ್ಯ ವಾಸಸೀ ಪರಿಧಾಯ ಚ ॥ ೧೪ ॥

ಕ್ಷಾಲಿತಾಂಘ್ರಿರ್ದ್ವಿರಾಚಮ್ಯ ಭಸ್ಮ ಸದ್ಯಾದಿಮಂತ್ರತಃ ।
ಧಾರಯೇದ್ಧಿ ಸಮಾದಾಯ ಸಮುದ್ಧೂಲನಮಾರ್ಗತಃ ॥ ೧೫ ॥

ಗೃಹೀತಹಸ್ತೋ ಗುರುಣಾ ಸಾನುಕೂಲೇನ ವೈ ಮುನೇ ।
ಸಶಿಷ್ಯಃ ಸಾಂಜಲಿಸ್ಸ್ವಾಭ್ಯಾಂ ಹಸ್ತಾಭ್ಯಾಂ ಪ್ರಾಙ್ಮುಖೋ ಯಥಾ ॥ ೧೬ ॥

ತಥೋಪವೇಶ್ಚಿತಸ್ತಿಷ್ಠೇನ್ಮಂಡಪೇ ಸಮಲಂಕೃತೇ ।
ಗುರ್ವಾಸನವರೇ ಶುದ್ಧೇ ಚೈಲಾಜಿನಕುಶೋತ್ತರೇ ॥ ೧೭ ॥

---

೧೨-೧೫. ವೈಶಾಖಮಾಸದಲ್ಲಾಗಲೀ, ಶ್ರಾವಣಮಾಸದಲ್ಲಾಗಲೀ, ಅಶ್ವಯುಜ, ಕಾರ್ತೀಕ, ಮಾರ್ಗಶಿರ, ಮಾಘ ಈ ಮಾಸಗಳ ಶುಕ್ಲಪಕ್ಷದಲ್ಲಿಯಾಗಲೀ ತಿಥಿ, ವಾರ, ನಕ್ಷತ್ರಗಳು ಎಲ್ಲವೂ ಮಂಗಳಕರವಾಗಿರುವ ಪಂಚಮಿ ಅಥವಾ ಪೂರ್ಣಿಮಾ ದಿನದಲ್ಲಿ ಶಿಷ್ಯನಾಗುವವನು ಗುರುವಿನ ಅನುಜ್ಞೆಯನ್ನು ಹೊಂದಿ, ಪ್ರಾತಃಕಾಲ ಮಾಡಬೇಕಾದ ಕರ್ಮಗಳೆಲ್ಲವನ್ನೂ ಮಾಡಿಕೊಂಡು ಶುದ್ಧವಾದ ಮನಸ್ಸಿನಿಂದ ಸ್ನಾನಮಾಡಿ, ಒದ್ದೆಯಾಗಿರುವ ಆ ಬಟ್ಟೆಯಿಂದ ಶರೀರವೆಲ್ಲವನ್ನೂ ಚೆನ್ನಾಗಿ ವರಸಿಕ್ಕೊಂಡನಂತರ ಎರಡು ಮಡಿಕೆಯಿಂದ ದಾರವನ್ನು ಕಟ್ಟಿಕೊಂಡು, ಬಟ್ಟೆಗಳನ್ನು ಧರಿಸಿ ಕೈಕಾಲುಗಳನ್ನು ಚೆನ್ನಾಗಿ ತೊಳೆದುಕ್ಕೊಂಡು, ಎರಡು ಸಾರಿ ಆಚಮನವನ್ನು ಮಾಡಿ ಸದ್ಯೋಜಾತವೇ ಮೊದಲಾದ ಮಂತ್ರಗಳನ್ನು ಹೇಳುತ್ತಾ ಭಸ್ಮೋದ್ಧೂಳನಕ್ರಮದಿಂದ ಭಸ್ಮಧಾರಣೆಮಾಡಬೇಕು.

೧೬-೧೭. ಎಲೈ ವಾಮದೇವಋಷಿಯೇ ಕೇಳು. ಆ ಶಿಷ್ಯನಾಗುವವನು ತನಗೆ ಅನುಕೂಲನಾದ ಗುರುವಿನ ಕೈಯನ್ನು ಹಿಡಿದುಕೊಂಡು, ಚೆನ್ನಾಗಿ ಅಲಂಕಾರ

ಅಥ ದೇಶಿಕ ಆದಾಯ ಶಂಖಂ ಸಾಧಾರಮಸ್ತ್ರತಃ ।
ವಿಶೋಧ್ಯ ತಸ್ಯ ಪುರತಃ ಸ್ಥಾಪಯೇತ್ಸಾನುಕೂಲತಃ ॥ ೧೮ ॥

ಸಾಧಾರಂ ಶಂಖಮಪಿ ಚ ಸಂಪೂಜ್ಯ ಕುಸುಮಾದಿಭಿಃ ।
ನಿಃಕ್ಷಿಪೇದಸ್ತ್ರವರ್ಮಭ್ಯಾಂ ಶೋಧಿತಂ ತತ್ರ ಸಜ್ಜಲಂ ॥ ೧೯ ॥

ಆಪೂರ್ಯ ಪೂರ್ವವತ್ಪೂಜ್ಯ ಷಡಂಗೋಕ್ತಕ್ರಮೇಣ ಚ ।
ಪ್ರಣವೇನ ಪುನಸ್ತದ್ವೈ ಸಪ್ತಧೈವಾಭಿಮಂತ್ರಯೇತ್ ॥ ೨೦ ॥

ಅಭ್ಯರ್ಚ್ಯ ಗಂಧಪುಷ್ಪಾದ್ಯೈರ್ಧೂಪದೀಪೌ ಪ್ರದರ್ಶ್ಯ ಚ ।
ಸಂರಕ್ಷಾಸ್ತ್ರೇಣ ತಂ ಶಂಖಂ ವರ್ಮಣಾಥಾವಗುಂಠಯೇತ್ ॥ ೨೧ ॥

ಧೇನುಶಂಖಾಖ್ಯಮುದ್ರೇ ಚ ದರ್ಶಯೇದಥ ದೇಶಿಕಃ ।
ಪುನಸ್ಸ್ವಪುರತಶ್ಶಂಖದಕ್ಷಿಣೇ ದೇಶ ಉತ್ತಮೇ ॥ ೨೨ ॥

---

ಮಾಡಿರುವ ಮಂಟಪದ ಸಮೀಪಕ್ಕೆ ಕರೆತರಬೇಕು. ಪೂರ್ವಮುಖನಾಗಿ, ಪರಿಶುದ್ಧವಾದ ಬಟ್ಟೆ, ಮೃಗ, ಚರ್ಮ, ದರ್ಭೆ ಇವುಗಳಿಂದ ಕೂಡಿ ಉತ್ತಮವಾದ ಆಸನದಲ್ಲಿ ಗುರ್ವನುಜ್ಞೆಯಿಂದ ಕೈಮುಗಿದುಕೊಂಡು ಕುಳಿತುಕೊಳ್ಳಬೇಕು.

೧೮-೨೩. ಅನಂತರ ಗುರುವು ಪೀಠದಿಂದ ಕೂಡಿರುವ ಶಂಖವನ್ನು ತೊಳೆದು ಅಸ್ತ್ರಮಂತ್ರದಿಂದ ಶುದ್ಧಿಯನ್ನು ಮಾಡಿ ತನಗೆ ಅನುಕೂಲವಾಗಿರುವಂತೆ ಅವನ ಮುಂದುಗಡೆಯಲ್ಲಿರಿಸಬೇಕು. ಪೀಠದೊಡನೆ ಇರುವ ಆ ಶಂಖವನ್ನು ಹೂವು ಮೊದಲಾದುವುಗಳಿಂದ ಚೆನ್ನಾಗಿ ಪೂಜೆಯನ್ನು ಮಾಡಿ ಶುದ್ಧವಾದ ನೀರನ್ನು ಬಟ್ಟೆಯಿಂದ ಶೋಧಿಸಿ ಆ ನೀರನ್ನು ಶಂಖಕ್ಕೆ ತುಂಬಿ ಹಿಂದಿನಂತೆಯೇ ಪೂಜಿಸಿ, ಪ್ರಣವ ಮಂತ್ರದ ಷಡಂಗಕ್ರಮದಿಂದ ಏಳುಸಾರಿ ಅಭಿಮಂತ್ರಣವನ್ನುಮಾಡಿ, ಗಂಧ, ಹೂವು ಮೊದಲಾದುವುಗಳಿಂದ ಪೂಜಿಸಿ, ಧೂಪದೀಪಗಳನ್ನು ತೋರಿಸಿ, ರಕ್ಷಾಮಂತ್ರದಿಂದಲೂ ಅಸ್ತ್ರಮಂತ್ರದಿಂದಲೂ ಅಥವಾ ಕವಚಮಂತ್ರದಿಂದಲೂ ಅವಗುಂಠನ ಮಾಡಿ ಧೇನುಮುದ್ರೆ ಮತ್ತು ಶಂಖಮುದ್ರೆಗಳನ್ನು ಆ ಶಂಖಕ್ಕೆ ತೋರಿಸಬೇಕು. ತನ್ನ ಮುಂದುಗಡೆಯಲ್ಲಿ ಶಂಖದ ದಕ್ಷಿಣಭಾಗದಲ್ಲಿ ಮತ್ತೆ ಶಾಸ್ತ್ರಕ್ರಮದಿಂದ ಸುಂದರ

ಪೂಜಾಘ್ಯೋರ್ಕ್ತವಿಧಾನೇನ ಸುಂದರಂ ಮಂಡಲಂ ಶುಭಂ ।
ಕುರ್ಯಾತ್ಸಂಪೂಜಯೇತ್ತಂ ಚ ಸುಗಂಧಕುಸುಮಾದಿಭಿಃ ॥ ೨೩ ॥

ಸಾಧಾರಂ ಶೋಧಿತಂ ಶುದ್ಧಂ ಘಟಂ ತಂತುಪರಿಷ್ಕೃತಂ ।
ಧೂಪಿತಂ ಸ್ಥಾಪಿತಂ ಶುದ್ಧವಾಸಿತೋದಪ್ರಪೂರಿತಂ ॥ ೨೪ ॥

ಪಂಚತ್ವಕ್ಪಂಚಪತ್ರೈಶ್ಚ ಮೃತ್ತಿಕಾಭಿಶ್ಚ ಪಂಚಭಿಃ ।
ಮಿಲಿತಂ ಚ ಸುಗಂಧೇನ ಲೇಪಯೇತ್ತಂ ಮುನೀಶ್ವರ ॥ ೨೫ ॥

ವಸ್ತ್ರಾಮ್ರದಲದೂರ್ವಾಗ್ರನಾರಿಕೇಲಸುಮೈಸ್ತತಃ ।
ತಂ ಘಟಂ ವಸ್ತುಭಿಶ್ಚಾನ್ಯೈಸ್ಸಂಕುರ್ಯಾತ್ಸಮಲಂಕೃತಂ ॥ ೨೬ ॥

ವಿನ್ಯಸೇತ್ಪಂಚರತ್ನಾನಿ ಘಟೇ ತತ್ರ ಮುನೀಶ್ವರ ।
ಹಿರಣ್ಯಂ ಚಾಪಿ ತೇಷಾಂ ವಾಭಾವೇ ಭಕ್ತ್ಯಾ ಪ್ರವಿನ್ಯಸೇತ್ ॥ ೨೭ ॥

---

ವಾದ, ಮಂಗಳಕರವಾದ ಮಂಡಲವನ್ನು ಮಾಡಿ, ಆ ಮಂಡಲವನ್ನು ಒಳ್ಳೆಯ ವಾಸನೆಯುಳ್ಳ ಪುಷ್ಪಗಳಿಂದಲೂ ಅಕ್ಷತೆಯಿಂದಲೂ ಪೂಜಿಸಬೇಕು.

೨೪-೨೫. ಅನಂತರ ಪರಿಶುದ್ಧವಾದ ಒಂದು ಗಡಿಗೆಗೆ ದಾರವನ್ನು ಸುತ್ತಿ ಆ ಗಡಿಗೆಗೆ ತಕ್ಕ ಪೀಠವನ್ನು ಹಾಕಿ, ಧೂಪವನ್ನು ಹಾಕಿ, ಪರಿಶುದ್ಧವಾದ ವಾಸನೆಯಿಂದ ಕೂಡಿದ ನೀರಿನಿಂದ ಆ ಗಡಿಗೆಯನ್ನು ತುಂಬಿ ಆ ಮಂಡಲದಲ್ಲಿ ಆ ಗಡಿಗೆಯನ್ನು ಸ್ಥಾಪಿಸಬೇಕು. ಐದು ವಿಧವಾದ ಮರದ ತೊಗಟೆಗಳು, ಪಂಚಪತ್ರೆಗಳು ಪಂಚಮೃತ್ತಿಕೆಗಳು, ಇವುಗಳನ್ನು ಆ ಕುಂಭದಲ್ಲಿ ಹಾಕಿ ಬಗೆಬಗೆಯ ಸುಗಂಧದ್ರವ್ಯಗಳಿಂದ ಲೇಪನಮಾಡಬೇಕು.

೨೬-೨೮. ವಸ್ತ್ರ, ಮಾವಿನ ಎಲೆ, ಗರಿಕೆಯ ಚಿಗುರು, ತೆಂಗಿನಕಾಯಿ, ಹೂವು ಇವುಗಳಿಂದಲೂ, ಇತರ ಗಂಧದ್ರವ್ಯಗಳಿಂದಲೂ ಆ ಘಟವನ್ನು ಅಲಂಕರಿಸಿ ಸಂಸ್ಕಾರವನ್ನು ಮಾಡಬೇಕು. ಆ ಘಟದಲ್ಲಿ ಪಂಚರತ್ನಗಳನ್ನೂ, ಚಿನ್ನವನ್ನೂ ಹಾಕಬೇಕು. ಅವು ಇಲ್ಲದಿದ್ದರೆ ಭಕ್ತಿಯಿಂದ ಮಂತ್ರೋಚ್ಚಾರಣೆಮಾಡಿ ಇರಿಸಬೇಕು. ಇಂದ್ರನೀಲ, ಪದ್ಮರಾಗ. ಚಿನ್ನ, ಹವಳ, ಗೋಮೇಧಿಕ ಎಂಬ ಈ ಐದು ಪಂಚರತ್ನಗಳೆನಿಸುವವು.

ನೀಲಾಖ್ಯರತ್ನಂ ಚ ತಥಾ ರತ್ನೇ ಮಾಣಿಕ್ಯಹೇಮನೀ ।
ಪ್ರವಾಲಗೋಮೇದಕೇ ಚ ಪಂಚರತ್ನಮಿದಂ ಸ್ಮೃತಂ ॥ ೨೮ ॥

ನೃಮ್ಲಸ್ಕಮಿತಿ ಸಂಪ್ರೋಚ್ಯ ಗ್ಲೂಮಿತ್ಯಂತೇಽಥ ದೇಶಿಕಃ ।
ಸಮ್ಯಗ್ವಿಧಾನತಃ ಪ್ರೀತ್ಯಾ ಸಾನುಕೂಲಃ ಸಮರ್ಚಯೇತ್ ॥ ೨೯ ॥

ಆಧಾರಶಕ್ತಿಮಾರಭ್ಯ ಯಜನೋಕ್ತವಿಧಾನತಃ ।
ಪಂಚಾವರಣಮಾರ್ಗೇಣ ದೇವಮಾವಾಹ್ಯ ಪೂಜಯೇತ್ ॥ ೩೦ ॥

ನಿವೇದ್ಯ ಪಾಯಸಾನ್ನಂ ಚ ತಾಂಬೂಲಾದಿ ಯಥಾ ಪುರಾ ।
ನಾಮಾಷ್ಟಕಾರ್ಚನಾಂತಂ ಚ ಕೃತ್ವಾ ತಮಭಿಮಂತ್ರಯೇತ್ ॥ ೩೧ ॥

ಪ್ರಣವಾಷ್ಟೋತ್ತರಶತಂ ಬ್ರಹ್ಮಭಿಃ ಪಂಚಭಿಃ ಕ್ರಮಾತ್ ।
ಸದ್ಯಾದೀಶಾಂತಮಸ್ತ್ರರಕ್ಷಿತಂ ವರ್ಮಣಾ ಪುನಃ ॥ ೩೨ ॥

ಅವಗುಂಠ್ಯ ಪ್ರದರ್ಶ್ಯಾಥ ಧೂಪದೀಪೌ ಚ ಭಕ್ತಿತಃ ।
ಧೇನುಯೋನ್ಯಾಖ್ಯಮುದ್ರೇ ಚ ಸಮ್ಯಕ್ತತ್ರ ಪ್ರದರ್ಶಯೇತ್ ॥ ೩೩ ॥

---

೨೯-೩೨. ಗುರುವು "ನೃಮ್ಲಸ್ಕಂ" ಎಂದು ಹೇಳಿ ಅದರ ಮುಂದೆ ಗ್ಲೂಂ ಎಂದು ಹೇಳಿದನಂತರ ಭಕ್ತಿಯಿಂದ ಆ ಕುಂಭವನ್ನು ಪೂಜಿಸಬೇಕು. ಆಧಾರಶಕ್ತಿಯನ್ನು ಮೊದಲು ಮಾಡಿ ಪೂಜಾಕ್ರಮವನ್ನನುಸರಿಸಿ ಪಂಚಾವರಣಪೂರ್ವಕವಾಗಿ ದೇವನನ್ನು ಆವಾಹನೆಮಾಡಿ ಪೂಜಿಸಬೇಕು. ಪಾಯಸವನ್ನೂ, ಅನ್ನವನ್ನೂ ನಿವೇದನಮಾಡಿ, ತಾಂಬೂಲವೊದಲಾಗಿ ಹಿಂದಿನಂತೆ ಎಲ್ಲವನ್ನೂ ಅರ್ಪಿಸಿ, ಭವ, ಶರ್ವ ಮೊದಲಾದ ಎಂಟುನಾಮಗಳಿಂದ ಪೂಜೆಮಾಡಿ ಆ ಘಟವನ್ನು ಅಭಿಮಂತ್ರಿಸಬೇಕು. ಅಭಿಮಂತ್ರಿಸುವಾಗ ನೂರೆಂಟು ಪ್ರಣವಮಂತ್ರಗಳು, ಸದ್ಯೋಜಾತ ಮೊದಲಾಗಿ ಈಶಾನಾಂತವಾದ ಪಂಚಬ್ರಹ್ಮಮಂತ್ರಗಳು, ಅಸ್ತ್ರಮಂತ್ರ, ಕವಚಮಂತ್ರ ಇವುಗಳಿಂದ ಅಭಿಮಂತ್ರಿಸಿ ಮತ್ತೆ,

೩೩-೩೪. ಕವಚಮಂತ್ರದಿಂದ ಪುನಃ ಅವಗುಂಠನೆಯನ್ನು ಮಾಡಿ, ಭಕ್ತಿಯಿಂದ ಧೂಪದೀಗಳನ್ನು ತೋರಿಸಿ ಧೇನುಮುದ್ರೆ, ಯೋನಿಮುದ್ರೆಗಳನ್ನು ಪ್ರದರ್ಶಿ

ತತಶ್ಚ ದೇಶಿಕಸ್ತಸ್ಯ ದರ್ಭೈರಾಚ್ಛಾದ್ಯಮಸ್ತಕೇ ।
ಮಂಡಲಸ್ಥೇಶದಿಗ್ಭಾಗೇ ಚತುರಸ್ರಂ ಪ್ರಕಲ್ಪಯೇತ್ ॥ ೩೪ ॥

ತದುಪರ್ಯಾಸನಂ ರಮ್ಯಂ ಕಲ್ಪಯಿತ್ವಾ ವಿಧಾನತಃ ।
ತತ್ರ ಸಂಸ್ಥಾಪಯೇಚ್ಛಿಷ್ಯಂ ತಂ ಶಿಶುಂ ಸಾನುಕೂಲತಃ ॥ ೩೫ ॥

ತತಃ ಕುಂಭಂ ಸಮುತ್ಥಾಪ್ಯ ಸ್ವಸ್ತಿವಾಚನಪೂರ್ವಕಂ ।
ಅಭಿಷಿಂಚೇದ್ಗುರುಃ ಶಿಷ್ಯಂ ಪ್ರಾದಕ್ಷಿಣ್ಯೇನ ಮಸ್ತಕೇ ॥ ೩೬

ಪ್ರಣವಂ ಪೂರ್ವಮುಚ್ಚಾರ್ಯ ಸಪ್ತಧಾ ಬ್ರಹ್ಮಭಿಸ್ತತಃ ।
ಪಂಚಭಿಶ್ಚಾಭಿಷೇಕಾಂತೇ ಶಂಖೋದೇನಾಭಿವೇಷ್ಟಯೇತ್ ॥ ೩೭ ॥

ಚಾರುದೀಪಂ ಪ್ರದರ್ಶ್ಯಾಥ ವಾಸಸಾ ಪರಿಮೃಜ್ಯ ಚ ।
ನೂತನಂ ದೋರಕೌಪೀನಂ ವಾಸಸೀ ಪರಿಧಾಪಯೇತ್ ॥ ೩೮ ॥

---

ಸಬೇಕು. ಅನಂತರ ಗುರುವು ಆ ಘಟದ ಮೇಲುಗಡೆಯಲ್ಲಿ ದರ್ಭೆಯನ್ನು ಹಾಕಿ ಮುಚ್ಚಿ ಆ ಘಟವನ್ನು ಇರಿಸಿರುವ ಮಂಡಲದ ಈಶಾನ್ಯದಿಕ್ಕಿನ ಭಾಗದಲ್ಲಿ ಚತುರಸ್ರಾಕಾರವಾದ ಮಂಡಲವನ್ನು ಮಾಡಬೇಕು.

೩೫-೩೮. ಆ ಮಂಡಲದಲ್ಲಿ ಶಾಸ್ತ್ರಕ್ರಮದಿಂದ ಸುಂದರವಾದ ಆಸನವನ್ನಿರಿಸಿ ಆ ಆಸನದಲ್ಲಿ ಶಿಷ್ಯನನ್ನು ಕೂರಿಸಬೇಕು. ಅನಂತರ ಆ ಕುಂಭವನ್ನು ಎತ್ತಿ ಹಿಡಿದುಕೊಂಡು ಸ್ವಸ್ತಿವಾಚನವನ್ನು ಹೇಳುತ್ತಾ ಪ್ರದಕ್ಷಿಣೆಯ ಕ್ರಮದಿಂದ ಆ ಶಿಷ್ಯನಿಗೆ ಗುರುವು ಅಭಿಷೇಕವನ್ನು ಮಾಡಬೇಕು. ಅಭಿಷೇಕವನ್ನು ಮಾಡುವಾಗ ಮೊದಲು ಏಳುಸಾರಿ ಪ್ರಣವವನ್ನೂ ಪಂಚಬ್ರಹ್ಮಮಂತ್ರಗಳನ್ನೂ ಹೇಳಿ, ಅಭಿಷೇಕವನ್ನು ಮಾಡಬೇಕು. ಕೊನೆಯಲ್ಲಿಶಂಖದ ನೀರಿನಿಂದ ಸುತ್ತುಗಟ್ಟಬೇಕು ಅನಂತರ ಮನೋಹರವಾದ ದೀಪವನ್ನು ತೋರಿಸಿ ಅವನನ್ನು ಬಟ್ಟೆಯಿಂದ ಚೆನ್ನಾಗಿ ಒರಸಿ ಹೊಸದಾದ ಉಡಿದಾರ ಕೌಪೀನಗಳನ್ನೂ, ಬಟ್ಟೆಗಳನ್ನೂ, ಅವನಿಗೆ ಕೊಡಬೇಕು. ಶಿಷ್ಯನು ಅವುಗಳನ್ನು ಧರಿಸಬೇಕು.

ಕ್ಷಾಲಿತಾಂಘ್ರಿರ್ದ್ವಿರಾಚಮ್ಯ ಧೃತಭಸ್ಮಗುರುಶ್ಶಿಶುಂ ।
ಹಸ್ತಾಭ್ಯಾಮವಲಂಬ್ಯಾಥ ಹಸ್ತೌ ಮಂಡಪಮಧ್ಯತಃ ॥ ೩೯ ॥

ತದಂಗೇಷು ಸಮಾಲಿಪ್ಯ ತದ್ಭಸ್ಮವಿಧಿನಾ ಗುರುಃ ।
ಆಸನೇ ಸಂಪ್ರವೇಶ್ಯಾಥ ಕಲ್ಪಿತೇ ಸ್ಥಾಪಯೇತ್ಸುಖಂ ॥ ೪೦ ॥

ಪೂರ್ವಾಭಿಮುಖಮಾತ್ಮೀಯತತ್ತ್ವಜ್ಞಾನಾಭಿಲಾಷಿಣಂ ।
ಸ್ವಾಸನಸ್ಥೋ ಗುರುರ್ಬ್ರೂಯಾದಮಲಾತ್ಮಾ ಭವೇತಿ ತಂ ॥ ೪೧ ॥

ಗುರುಶ್ಚ ಪರಿಪೂರ್ಣೋಽಸ್ಮಿ ಶಿವ ಇತ್ಯಚಲಸ್ಥಿತಿಃ ।
ಸಮಾಧಿಮಾಚರೇತ್ಸಮ್ಯಙ್ಮುಹೂರ್ತಂ ಗೂಢಮಾನಸಃ ॥ ೪೨ ॥

ಪಶ್ಚಾದುನ್ಮೀಲ್ಯ ನಯನೇ ಸಾನುಕೂಲೇನ ಚೇತಸಾ ।
ಸಾಂಜಲಿಂ ಸಂಸ್ಥಿತಂ ಶುದ್ಧಂ ಪಶ್ಯೇಚ್ಛಿಷ್ಯಮನಾಕುಲಃ ॥ ೪೩ ॥

---

೩೯–೪೧. ಆಮೇಲೆ ಗುರುವು ತಾನೂ ಕಾಲುಗಳನ್ನು ತೊಳೆದುಕೊಂಡು ಎರಡಾವರ್ತಿ ಆಚಮನವನ್ನು ಮಾಡಿ, ಭಸ್ಮವನ್ನು ಧರಿಸಿಕೊಂಡು ಶಿಷ್ಯನ ಕೈಯ್ಯನ್ನು ತನ್ನ ಕೈಗಳಿಂದ ಹಿಡಿದುಕೊಂಡು ಮಂಟಪದ ಮಧ್ಯ ಕರೆದುಕೊಂಡು ಬಂದು ಶಾಸ್ತ್ರಕ್ರಮವಾಗಿ ಭಸ್ಮವನ್ನು ಅವನ ಶರೀರಕ್ಕೆಲ್ಲಕ್ಕೂ ಧಾರಣೆಮಾಡಿಸಿ, ಅವನಿಗೋಸ್ಕರ ಸಿದ್ಧಪಡಿಸಿರುವ ಆಸನದಲ್ಲಿ ಅವನನ್ನು ಪೂರ್ವದಿಕ್ಕಿಗೆ ಅಭಿಮುಖನಾಗಿರುವಂತೆ ಕೂರಿಸಬೇಕು. ಆಮೇಲೆ ಗುರುವು ತನ್ನ ಆಸನದಲ್ಲಿ ಕುಳಿತು ಬಂಧುವಿನಂತೆ ಆದರಣೀಯವಾದ ತತ್ತ್ವಜ್ಞಾನವನ್ನಪೇಕ್ಷಿಸುತ್ತಿರುವ ಆ ಶಿಷ್ಯನಿಗೆ "ಅಮಲಾತ್ಮಾಭವ." ಶುದ್ಧವಾದ ಆತ್ಮಸ್ವರೂಪವುಳ್ಳವನಾಗು ಎಂದು ಉಪದೇಶ ಮಾಡಬೇಕು.

೪೨-೪೩. "ಪರಿಪೂರ್ಣಶ್ಶಿವೋಽಸ್ಮಿ" ಪರಿಪೂರ್ಣನಾದ ಶಿವನಾಗಿರುತ್ತೇನೆ. ಎಂದು ಗುರುವು ದೃಢವಾದ ಮನಸ್ಸಿನಿಂದ ಒಂದು ಮುಹೂರ್ತದವರಿಗೂ ಚೆನ್ನಾಗಿ ಸಮಾಧಿಯನ್ನು ಮಾಡಬೇಕು. ಆಮೇಲೆ ಬಹಿರ್ಮುಖನಾಗಿ ಕಣ್ಣುಗಳನ್ನು ಬಿಟ್ಟು, ಒಳ್ಳೆಯಮನಸ್ಸಿನಿಂದ ಕೈಮುಗಿದುಕೊಂಡು ಕುಳಿತಿರುವ ಪರಿಶುದ್ಧನಾದ ಶಿಷ್ಯನನ್ನು ದಯಾರ್ದ್ರದೃಷ್ಟಿಯಿಂದ ನೋಡಬೇಕು.

ಸ್ವಹಸ್ತಂ ಭಸಿತಾಲಿಪ್ತಂ ವಿನ್ಯಸ್ಯ ಶಿಶುಮಸ್ತಕೇ ।
ದಕ್ಷಶ್ರುತಾವುಪದಿಶೇದ್ಧಂಸಸ್ಸೋಽಹಮಿತಿ ಸ್ಫುಟಂ ॥ ೪೪ ॥

ತತ್ರಾದ್ಯಾಹಂಪದಸ್ಯಾರ್ಥಃ ಶಕ್ತ್ಯಾತ್ಮಾ ಸ ಶಿವಸ್ಸ್ವಯಂ ।
ಸ ಏವಾಹಂ ಶಿವೋಽಸ್ಮೀತಿ ಸ್ವಾತ್ಮಾನಂ ಸಂವಿಭಾವಯ ॥ ೪೫ ॥

ಯ ಇತ್ಯಣೋರರ್ಥತತ್ತ್ವಮುಪದಿಶ್ಯ ತತೋ ವದೇತ್ ।
ಅವಾಂತರಾಣಾಂ ವಾಕ್ಯಾನಾಮರ್ಥತಾತ್ಪರ್ಯಮಾದರಾತ್ ॥ ೪೬ ॥

ವಾಕ್ಯಾನಿ ವಚ್ಮಿ ತೇ ಬ್ರಹ್ಮನ್ಸಾವಧಾನಮತಿಶ್ಶೃಣು ।
ತಾನಿ ಧಾರಯ ಚಿತ್ತೇ ಹಿ ಸ ಭೂಯಾದಿತಿ ಸಂಸ್ಫುಟಂ ॥ ೪೭ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಸನ್ಯಾಸಪದ್ಧತೌ ಶಿಷ್ಯಕರಣವಿಧಿರ್ನಾಮಾ-
ಷ್ಟಾದಶೋಽಧ್ಯಾಯಃ

---

೪೪-೪೭. ಗುರುವು ಭಸ್ಮದಿಂದ ಕೂಡಿರುವ ತನ್ನ ಕೈಯ್ಯನ್ನು ಶಿಷ್ಯನ ತಲೆಯ ಮೇಲಿರಿಸಿ ಬಲಗಡೆಯ ಕಿವಿಯಲ್ಲಿ -' ಹಂಸಸ್ಸೋಽಹಂ " ಎಂದು ಸ್ಪಷ್ಟವಾಗಿ ಉಪದೇಶವನ್ನು ಮಾಡಬೇಕು. ಆ ಮಂತ್ರದಲ್ಲಿ ಮೊದಲನೆಯದಾದ ಅಹಂ ಎಂಬ ಪದಕ್ಕೆ ಶಕ್ತ್ಯಾತ್ಮನಾದ ಸಾಕ್ಷಾಚ್ಛಿವನೆಂದು ಅರ್ಥವು. ಆ ಪ್ರಕಾರದಿಂದಿರುವ ಶಿವನು ನಾನೇ ಆಗಿರುವೆನು ಎಂದು ನಿನ್ನ ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿದುಕೋ ಎಂದು ಉಪದೇಶಮಾಡಬೇಕು. " ಯ " ಎಂಬ ಅಣುವಿನ ಅರ್ಥತತ್ತ್ವವನ್ನು ಎಂದರೆ ಪರೋಕ್ಷಜ್ಞಾನಸಂಬಂಧವಾದ ಅರ್ಥವಿವರಣೆಯನ್ನು ಅನಂತರ ಉಪದೇಶಮಾಡಿ ಇತರ ಮಹಾ ವಾಕ್ಯಗಳ ಅರ್ಥ ತಾತ್ಪರ್ಯಗಳನ್ನು ವಿಶ್ವಾಸದಿಂದ ಉಪದೇಶಮಾಡುವೆನು. ಎಲೈ ಬ್ರಹ್ಮನೇ [ಬ್ರಹ್ಮಸ್ವರೂಪನೆ] ನೀನು ಸಾವಧಾನಮನಸ್ಸಿನಿಂದ ಅವುಗಳನ್ನು ಧರಿಸು ಎಂದು ಸ್ಪಷ್ಟವಾಗಿ ಹೇಳಬೇಕು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಸಂನ್ಯಾಸಪದ್ಧತಿಯಲ್ಲಿ ಶಿಷ್ಯಕರಣವಿಧಿಯೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೈಲಾಸಸಂಹಿತಾಯಾಂ

## ಏಕೋನವಿಂಶೋಽಧ್ಯಾಯಃ



॥ ಸುಬ್ರಹ್ಮಣ್ಯ ಉವಾಚ ॥

॥ ಅಥ ಮಹಾವಾಕ್ಯಾನಿ ॥

" ಪ್ರಜ್ಞಾನಂ ಬ್ರಹ್ಮ " ॥ ೧ ॥

" ಅಹಂ ಬ್ರಹ್ಮಾಸ್ಮಿ " ॥ ೨ ॥

" ತತ್ತ್ವಮಸಿ " ॥ ೩ ॥

" ಅಯಮಾತ್ಮಾ ಬ್ರಹ್ಮ " ॥ ೪ ॥

---

## ಹತ್ತೊಂಭತ್ತನೆಯ ಅಧ್ಯಾಯವು

ಸುಬ್ರಹ್ಮಣ್ಯನಿಂತೆಂದನು.—ಈಗ ಮಹಾವಾಕ್ಯಗಳನ್ನು ಹೇಳುವೆನು. ಅವುಗಳಾವುವೆಂದರೆ—೧. ಪ್ರಜ್ಞಾನಂ ಬಹ್ಮ. ೨. ಅಹಂಬ್ರಹ್ಮಾಸ್ಮಿ. ೩. ತತ್ತ್ವಮಸಿ. ೪. ಅಯಮಾತ್ಮಾ ಬ್ರಹ್ಮ. ೫. ಈಶಾವಾಸ್ಯಮಿದಂ ಸರ್ವಂ. ೬. ಪ್ರಾಣೋಽಸ್ಮಿ. ೭. ಪ್ರಜ್ಞಾನಾತ್ಮಾ. ೮. ಯದೇವೇಹ ತದಮುತ್ರ ತದನ್ವಿಹ. ೯. ಅನ್ಯದೇವ ತದ್ವಿದಿತಾದಥೋ ಅವಿದಿತಾದಪಿ. ೧೦. ಏಷ ತ ಆತ್ಮಾನ್ತರ್ಯಾ

---

ಸೂಚನೆ—ಈ ಅಧ್ಯಾಯದಲ್ಲಿ ಹೇಳಿರುವ ಮಹಾವಾಕ್ಯಗಳು ಅನೇಕ ಉಪನಿಷತ್ತುಗಳಿಂದ ಆರಿಸಿ ತೆಗೆದ ವಾಕ್ಯಗಳು. ಈ ವಾಕ್ಯಗಳ ತತ್ತ್ವಾರ್ಥಗಳನ್ನು ವಿಮರ್ಶಿಸಿ ಬರೆಯಬೇಕಾದರೆ ಅದೇ ವಿಸ್ತಾರವಾದ ಒಂದು ದೊಡ್ಡಗ್ರಂಥವೇ ಆಗುವುದು. ಆದುದರಿಂದ ಇಲ್ಲಿ ಸಂಕ್ಷೇಪವಾಗಿ ಅವುಗಳ ವಿವರಣೆಯನ್ನು ಕೊಟ್ಟಿದೆ. ವಿಶೇಷಾರ್ಥಗಳನ್ನು ವಿಸ್ತಾರವಾಗಿ ತಿಳಿಯಲಪೇಕ್ಷಿಸುವವರು ಉಪನಿಷತ್ತುಗಳನ್ನು ನೋಡಿ ತಿಳಿದುಕೊಳ್ಳಬೇಕು.

"ಈಶಾವಾಸ್ಯಮಿದಂ ಸರ್ವಂ" ॥ ೫ ॥

"ಪ್ರಾಣೋಽಸ್ಮಿ" ॥ ೬ ॥

"ಪ್ರಜ್ಞಾನಾತ್ಮಾ" ॥ ೭ ॥

"ಯದೇವೇಹ ತದಮುತ್ರ ಯದಮುತ್ರ ತದನ್ವಿಹ" ॥ ೮ ॥

"ಅನ್ಯದೇವ ತದ್ವಿದಿತಾದಥೋ ಅವಿದಿತಾದಪಿ ॥ ೯ ॥

"ಏಷ ತ ಆತ್ಮಾಂತರ್ಯಾಮ್ಯಮೃತಃ" ॥ ೧೦ ॥

"ಸ ಯಶ್ಚಾಯಂಪುರುಷೋ ಯಶ್ಚಾಸಾವಾದಿತ್ಯೇ ಸ ಏಕಃ" ॥ ೧೧ ॥

"ಅಹಮಸ್ಮಿ ಪರಂ ಬ್ರಹ್ಮ ಪರಂ ಪರಪರಾತ್ಪರಂ" ॥ ೧೨ ॥

"ವೇದಶಾಸ್ತ್ರಗುರುತ್ವಾತ್ತು ಸ್ವಯಮಾನಂದಲಕ್ಷಣಂ" ॥ ೧೩ ॥

"ಸರ್ವಭೂತಸ್ಥಿತಂ ಬ್ರಹ್ಮ ತದೇವಾಹಂ ನ ಸಂಶಯಃ" ॥ ೧೪ ॥

"ತತ್ತ್ವಸ್ಯ ಪ್ರಾಣೋಽಹಮಸ್ಮಿ ಪೃಥಿವ್ಯಾಃ ಪ್ರಾಣೋಽಹಮಸ್ಮಿ" ॥ ೧೫

"ಅಪಾಂ ಚ ಪ್ರಾಣೋಽಹಮಸ್ಮಿ ತೇಜಸಶ್ಚ ಪ್ರಾಣೋಽಹಮಸ್ಮಿ" ೧೬

---

ಮ್ಯಮೃತಃ. ೧೧. ಸಯಶ್ಚಾಯಂ ಪುರುಷೋ ಯಶ್ಚಾಸಾವಾದಿತ್ಯೇ ಸ ಏಕಃ. ೧೨. ಅಹಮಸ್ಮಿ ಪರಂಬ್ರಹ್ಮ ಪರಂ ಪರಪರಾತ್ಪರಂ. ೧೩. ವೇದಶಾಸ್ತ್ರಗುರುತ್ವಾತ್ತು ಸ್ವಯಮಾನಂದಲಕ್ಷಣಂ. ೧೪. ಸರ್ವಭೂತಸ್ಥಿತಂ ಬ್ರಹ್ಮ ತದೇವಾಹಂ ನ ಸಂಶಯಃ. ೧೫. ತತ್ತ್ವಸ್ಯ ಪ್ರಾಣೋಽಹಮಸ್ಮಿ ಪೃಥಿವ್ಯಾಃ ಪ್ರಾಣೋಽಹಮಸ್ಮಿ. ೧೬. ಅಪಾಂ ಚ ಪ್ರಾಣೋಽಹಮಸ್ಮಿ ತೇಜಸಶ್ಚ ಪ್ರಾಣೋಽಹಮಸ್ಮಿ. ೧೭. ವಾಯೋಶ್ಚ ಪ್ರಾಣೋಽಹಮಸ್ಮಿ ಆಕಾಶಸ್ಯ ಪ್ರಾಣೋಽಹಮಸ್ಮಿ. ೧೮. ತ್ರಿಗುಣಸ್ಯ ಪ್ರಾಣೋಽಹಮಸ್ಮಿ. ೧೯. ಸರ್ವೋಽಹಂ ಸರ್ವಾತ್ಮಕೋಽಹಂ ಸಂಸಾರೀ ಯದ್ಭೂತಂ ಯಚ್ಚ ಭವ್ಯಂ ಯದ್ವರ್ತಮಾನಂ ಸರ್ವಾತ್ಮಕತ್ವಾದದ್ವಿತೀಯೋಽಹಂ. ೨೦. ಸರ್ವಂ ಖಲ್ವಿದಂ ಬ್ರಹ್ಮ. ೨೧. ಸರ್ವೋಽಹಂ ವಿಮುಕ್ತೋಽಹಂ. ೨೨. ಯೋಽಸೌ ಸೋಽಹಂ ಹಂಸಸ್ಸೋಽಹಮಸ್ಮಿ. ಇವುಗಳು ಮಹಾವಾಕ್ಯಗಳೆನಿಸುವವು. ಈ ವಾಕ್ಯಗಳ ಅರ್ಥವನ್ನು ಕ್ರಮವಾಗಿ ವಿವರಿಸುವೆವು. ಈ ೨೨ ವಾಕ್ಯಗಳ ಪೈಕಿ ಮೊದ

" ವಾಯೋಶ್ಚ ಪ್ರಾಣೋಽಹಮಸ್ಮಿ ಆಕಾಶಸ್ಯ ಪ್ರಾಣೋಽಹಮಸ್ಮಿ" ॥೧೭॥

" ತ್ರಿಗುಣಸ್ಯ ಪ್ರಾಣೋಽಹಮಸ್ಮಿ" ॥ ೧೮ ॥

" ಸರ್ವೋಽಹಂ ಸರ್ವಾತ್ಮಕೋಽಹಂ ಸಂಸಾರೀ ಯದ್ಭೂತಂ
ಯಚ್ಚ ಭವ್ಯಂ ಯದ್ವರ್ತಮಾನಂ ಸರ್ವಾತ್ಮಕತ್ವಾದ-
ದ್ವಿತೀಯೋಽಹಂ " ॥ ೧೯ ॥

" ಸರ್ವಂ ಖಲ್ವಿದಂ ಬ್ರಹ್ಮ " ॥ ೨೦ ॥

" ಸರ್ವೋಽಹಂ ವಿಮುಕ್ತೋಽಹಂ " ॥ ೨೧ ॥

" ಯೋಽಸೌ ಸೋಽಹಂ ಹಂಸಸ್ಸೋಽಹಮಸ್ಮಿ " ॥ ೨೨ ॥

॥ ಇತ್ಯೇವಂ ಸರ್ವತ್ರ ಸದಾ ಧ್ಯಾಯೇದಿತಿ ॥

---

ಲಿನ ನಾಲ್ಕು ವಾಕ್ಯಗಳು ಶುಕರಹಸ್ಯೋಪನಿಷತ್ತಿನಲ್ಲಿ ಮಹಾವಾಕ್ಯಗಳೆಂದು ಹೇಳಿ ಅವುಗಳ ಅರ್ಥವಿವರಣೆಯನ್ನೂ ಪ್ರತಿಪಾದನೆ ಮಾಡಿರುವರು. ಪ್ರಜ್ಞಾನವು ಬ್ರಹ್ಮ ವೆಂಬುವ ವಾಕ್ಯದ ಅರ್ಥವನ್ನು ಮೊದಲು ಹೇಳಿದ್ದಾಗಿದೆ. ಅಹಂ ಪದಕ್ಕೆ ಶಕ್ತಿಯ ರೂಪದಿಂದ ಇರುವ ಪರಮೇಶ್ವರನು ಅರ್ಥವಾಗಿರುವನು. ಅಕಾರವು ಎಲ್ಲಾ ಅಕ್ಷರ ಗಳಿಗೂ ಶ್ರೇಷ್ಠವಾಗಿ ಮೊದಲನೆಯದಾಗಿರುವದು. ಪ್ರಕಾಶವೆಂಬ ಅರ್ಥವನ್ನುಳ್ಳ ದ್ದಾಗಿರುವುದು. ಉತ್ತಮನಾದ ಶಿವನೇ ಈ ಅಕ್ಷರಕ್ಕೆ ಅರ್ಥವಾಗಿರುವನು. ಹಕಾ ರವು ಆಕಾಶರೂಪದಿಂದ ಇರುವುದು. ಇದಕ್ಕೆ ಶಕ್ತಿಯು ದೇವತೆಯು ಎಂದು ಹೇಳಿ ರುವುದು. ಶಿವ ಮತ್ತು ಶಕ್ತಿ ಇವರಿಬ್ಬರ ಸಂಬಂಧದಿಂದ ಆನಂದವು ಯಾವಾಗಲೂ ಹುಟ್ಟಿರುವದು. ಆದ್ದರಿಂದ ಬ್ರಹ್ಮ ಎಂದರೆ ಶಿವ ಶಕ್ತಿಗಳ ಸಮುದಾಯವು· ಅಹಂ ಎಂದು ಆಗುವ ಕಾರಣ ಆನಂದರೂಪವಾದ ಸರ್ವಾನುಭವಸಿದ್ಧವಾದ ಬ್ರಹ್ಮ ಪದಾ ರ್ಥವು ಎಲ್ಲಾ ರೂಪದಿಂದ ಇರುವುದೆಂದು ಸ್ಪಷ್ಟವಾಗಿರುವುದು. ಇದನ್ನು ನಾನು ಮೊದಲು ಉಪದೇಶಮಾಡಿರುವೆನು. ಆದ್ದರಿಂದ ಆ ಆನಂದರೂಪದಿಂದ ಇರುವ ಶಿವಶಕ್ತ್ಯಾತ್ಮಕವಾದ ಅಹಂಪದಾರ್ಥವು ನಾನೇ ಎಂದು ಭಾವನೆಯನ್ನು ಮಾಡ ಬೇಕು.

॥ ಅಥ ಮಹಾವಾಕ್ಯಾನಾಮರ್ಥಮಾಹ ॥

**ಪ್ರಜ್ಞಾನಂ ಬ್ರಹ್ಮವಾಕ್ಯಾರ್ಥಃ ಪೂರ್ವಮೇವ ಪ್ರಬೋಧಿತಃ ।**
**ಅಹಂಪದಸ್ಯಾರ್ಥಭೂತಃ ಶಕ್ತ್ಯಾತ್ಮಾ ಪರಮೇಶ್ವರಃ ॥ ೧ ॥**

**ಅಕಾರಃ ಸರ್ವವರ್ಣಾಗ್ರ್ಯಃ ಪ್ರಕಾಶಃ ಪರಮಃ ಶಿವಃ ।**
**ಹಕಾರೋ ವ್ಯೋಮರೂಪಃ ಸ್ಯಾಚ್ಛಕ್ತ್ಯಾತ್ಮಾ ಸಂಪ್ರಕೀರ್ತಿತಃ ॥ ೨ ॥**

---

೧. ಪ್ರಜ್ಞಾನಂ ಬ್ರಹ್ಮ ಎಂಬ ಮೊದಲನೇ ಮಹಾವಾಕ್ಯದ ಅರ್ಥವಿವರಣೆಯನ್ನು ಹಿಂದೆಯೇ ಹೇಳಿದೆ. ಆದರೂ ಈಗ ಸೂಕ್ಷ್ಮವಾಗಿ ವಿವರಿಸಲಾಗುವುದು. ನಾವು ಪ್ರಪಂಚದಲ್ಲಿರವ ಚರಾಚರವಸ್ತುಗಳನ್ನು ಕಣ್ಣುಗಳಿಂದ ನೋಡುತ್ತೇವೆ. ಕಿವಿಯಿಂದ ಶಬ್ದಾದಿವಿಷಯಗಳನ್ನು ಗ್ರಹಿಸುತ್ತೇವೆ. ವಾಸನೆ ನೋಡುತ್ತೇವೆ. ಬಾಯಿಯಿಂದ ಮಾತನಾಡುತ್ತೇವೆ. ಈ ವಿಷಯಗ್ರಹಣಗಳೆಲ್ಲವೂ ನೇತ್ರಾದಿ ಜ್ಞಾನೇಂದ್ರಿಯಗಳ ಮೂಲಕ ಮನಸ್ಸನ್ನು ಸೇರುವವು. ಆ ಮನಸ್ಸು ಆ ವಿಷಯಜ್ಞಾನವನ್ನು ಶರೀರಗತವಾಗಿರುವ ಚೈತನ್ಯಕ್ಕೆ ತಿಳಿಸುವುದು. ವಿಷಯಜ್ಞಾನವನ್ನು ತಿಳಿಯುವ ಸಾಮರ್ಥ್ಯವುಳ್ಳ ಈ ಚೈತನ್ಯಕ್ಕೆ ಪ್ರಜ್ಞಾನವೆಂಮ ಹೆಸರು. ಈ ಚೈತನ್ಯವು ಸರ್ವಪ್ರಾಣಿಗಳಲ್ಲಿಯೂ ಇರುವುದು. ಇದೇ ಪರಬ್ರಹ್ಮವು ಅಥವಾ ಪರಬ್ರಹ್ಮಸ್ವರೂಪವಾಗಿರುವುದು. ಆದುದರಿಂದ "ಪ್ರಜ್ಞಾನಂ ಬ್ರಹ್ಮ" ಎಂಬ ಮೊದಲನೆ ಮಹಾಕಾವ್ಯಕ್ಕೆ ಸರ್ವಪ್ರಾಣಿಗಳಲ್ಲಿರುವ ಚೈತನ್ಯವೇ ಬ್ರಹ್ಮವು ಎಂದರ್ಥ. ಚತುರ್ಮುಖ ಬ್ರಹ್ಮ, ಇಂದ್ರಾದಿದೇವತೆಗಳು, ಮನುಷ್ಯರು, ಕುದುರೆ, ಗೋವುಗಳು ಮೊದಲಾದ ಸರ್ವಪ್ರಾಣಿಗಳಲ್ಲಿ ಕಂಡುಬರುವ ಚೈತನ್ಯವು ಒಂದೇ ಆಗಿರುವುದು. ಪ್ರಾಣಿಗಳು ಅನೇಕವಾಗಿದ್ದರೂ ಚೈತನ್ಯವು ಬೇರೆಬೇರೆಯಾಗಿಲ್ಲ. ಒಂದೇ ಚೈತನ್ಯವೇ ಎಲ್ಲದರಲ್ಲಿಯೂ ಇರುವುದು. ನನ್ನಲ್ಲಿಯೂ ನಿನ್ನಲ್ಲಿಯೂ ಇತರರಲ್ಲಿಯೂ ಇರುವ ಚೈತನ್ಯವೆಲ್ಲ ಒಂದೇ. ಅದೇ ಬ್ರಹ್ಮವು. ಲೋಕವ್ಯವಹಾರದಲ್ಲಿ ನಾನು, ನೀನು ಇತರ ವಸ್ತುಗಳು ಎಂದು ಭೇದಭಾವವಿದ್ದರೂ ಪಾರಮಾರ್ಥಿಕವಾಗಿ ಎಲ್ಲವೂ ಬ್ರಹ್ಮಸ್ವರೂಪಗಳಾಗಿರುವುದರಿಂದಲೂ, ಬ್ರಹ್ಮವಸ್ತುವು ಒಂದೇ ಆಗಿರುವುದರಿಂದಲೂ ಬ್ರಹ್ಮವನ್ನು ಬಿಟ್ಟು ಜಗತ್ತಿನಲ್ಲಿ ಬೇರೆ ವಸ್ತುವಿಲ್ಲ. ಬ್ರಹ್ಮವೇ ಸಕಲ ವಸ್ತುಗಳಲ್ಲಿಯೂ ಇದ್ದುಕೊಂಡು ಪ್ರಕಾಶಿಸುತ್ತಿರುವುದು.

೨-೩. ಇನ್ನು ಎರಡನೇ "ಅಹಂ ಬ್ರಹ್ಮಾಸ್ಮಿ" ಎಂಬ ಮಹಾವಾಕ್ಯವನ್ನು ವಿವರಿಸುವರು. ಅಹಂ ಎಂಬ ಪದಕ್ಕೆ ಶಕ್ತ್ಯಾತ್ಮಕನಾದ ಪರಮೇಶ್ವರನೆಂದರ್ಥವು.

ಶಿವಶಕ್ತ್ಯೋಃಽಸ್ತು ಸಂಯೋಗಾದಾನಂದಃ ಸತತೋದಿತಃ ।
ಬ್ರಹ್ಮೇತಿ ಶಿವಶಕ್ತ್ಯೋಃಸ್ತು ಸರ್ವಾತ್ಮತ್ವಮಿತಿ ಸ್ಫುಟಂ ॥ ೩ ॥

ಪೂರ್ವಮೇವೋಪದಿಷ್ಟಂ ತತ್ಸೋಽಹಮಸ್ಮೀತಿ ಭಾವಯೇತ್ ।
ತತ್ತ್ವಮಿತ್ಯತ್ರ ತದಿತಿ ತಚ್ಛಬ್ದಾರ್ಥಃ ಪ್ರಬೋಧಿತಃ ॥ ೪ ॥

ಅನ್ಯಥಾ ಸೋಽಹಮಿತ್ಯತ್ರ ವಿಪರೀತಾರ್ಥಭಾವನಾ ।
ಅಹಂಶಬ್ದಸ್ತು ಪುರುಷಸ್ತದಿತಿ ಸ್ಯಾನ್ನಪುಂಸಕಂ ।
ಏವಮನ್ಯೋನ್ಯವೈರುಧ್ಯಾದನ್ವಯೋ ನ ಭವೇತ್ತಯೋಃ ॥ ೫ ॥

---

ಅಕಾರವು ಅಕ್ಷರಗಳಿಗೆಲ್ಲಾ ಮೊದಲನೆಯದು. ಇದು ಪ್ರಕಾಶರೂಪನಾದ ಶಿವನನ್ನು ಸೂಚಿಸುವುದು. ಹಕಾರವು ಆಕಾಶರೂಪವಾಗಿರುವುದು. ಇದು ಶಕ್ತಿಸಹಿತನಾದ ಪರಮೇಶ್ವರನನ್ನು ಸೂಚಿಸುವುದು. ಶಿವಶಕ್ತಿಗಳ ಸಂಯೋಗದಿಂದ ಆನಂದವು ಉಂಟಾಗುವುದು. ಆನಂದವೇ ಬ್ರಹ್ಮವೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುವುದು. "ಆನಂದೋ ಬ್ರಹ್ಮೇತಿ ವ್ಯಜಾನಾತ್" (ತೈ.ಉ. ೨) ಬ್ರಹ್ಮವು ಸರ್ವವಸ್ತುಗಳಲ್ಲಿಯೂ ಇರುವುದೆಂದು ಎಂದರೆ ಸರ್ವವ್ಯಾಪಕತ್ವದಿಂದ ಎಲ್ಲರಲ್ಲಿಯೂ ಇರುವುದರಿಂದ ಪುರುಷನಾದ ನನ್ನಲ್ಲಿಯೂ ಇದ್ದೇ ಇರುವುದು. ಆದುದರಿಂದ ಅಹಂ ಬ್ರಹ್ಮಾಸ್ಮಿ ಎಂದರೆ ನಾನೇ ಬ್ರಹ್ಮಸ್ವರೂಪನಾಗಿರುವೆನು. ನನ್ನ ದೇಹದಲ್ಲಿ ಪರಿಪೂರ್ಣಸ್ವರೂಪನಾದ ಪರಮಾತ್ಮನು ಬುದ್ಧಿಗೆ ಸಾಕ್ಷಿಭೂತನಾಗಿ ಇದ್ದುಕೊಂಡು ಪ್ರಕಾಶಿಸುತ್ತಿರುವನು ಅಂತಹ ಆತ್ಮನೇ "ನಾನು" ಎಂದು ಹೇಳಲ್ಪಡುವುದು. ಆ ಪರಮಾತ್ಮನು ಸ್ವತಃ ಪರಿಪೂರ್ಣನು. ಆದುದರಿಂದ ಅವನಿಗೆ ಬ್ರಹ್ಮನೆಂದು ಹೆಸರು. ಈ ವಾಕ್ಯದಲ್ಲಿರುವ "ಅಸ್ಮಿ-ಆಗಿರುವೆನು" ಎಂಬ ಪದವು ಜೀವನಾದ "ನನ್ನನ್ನೂ" ಪರಿಪೂರ್ಣನಾದ ಪರಮಾತ್ಮನನ್ನೂ ಕೂಡಿಸಿ ಐಕ್ಯಭಾವವನ್ನು ಪ್ರತಿಪಾದಿಸುವುದು. ಎಂದರೆ ನಾನೇ ಪರಬ್ರಹ್ಮನಾಗಿರುವೆನು ಎಂದು ಜೀವ ಬ್ರಹ್ಮೈಕ್ಯವನ್ನು ಸ್ಪಷ್ಟಪಡಿಸುವುದು. 'ಸೋಽಹಂ' ಎಂಬ ವಾಕ್ಯಕ್ಕೂ ಇದೇ ಅರ್ಥವು. ಇದನ್ನು ಹಿಂದೆಯೇ ವಿವರಿಸಿದೆ.

೪-೬. ಈಗ ಮೂರನೆಯ ವಾಕ್ಯವಾದ ತತ್ತ್ವಮಸಿ ಎಂಬುದನ್ನು ವಿವರಿಸುವರು. ತತ್, ತ್ವಂ ಎಂಬುದರಲ್ಲಿ ತತ್ ಎಂಬುವ ಪದದ ಅರ್ಥವನ್ನು ಹೇಳಿರುವೆನು. ನಾನು ಹೇಳಿದರೀತಿಯಿಂದ ತಚ್ಛಬ್ದದ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳದಿದ್ದರೆ ಸೋಹಂ ಎಂಬುವ ವಾಕ್ಯಾರ್ಥವನ್ನು ಹೇಳುವಾಗ ಆ ಪದದ ಅರ್ಥ

ಸ್ತ್ರೀಪುಂರೂಪಸ್ಯ ಜಗತಃ ಕಾರಣಂ ಚಾನ್ಯಥಾ ಭವೇತ್ ।
ಸ ತತ್ತ್ವಮಸಿ ಇತ್ಯೇವಮುಪದೇಶಾರ್ಥಭಾವನಾ ॥ ೬ ॥
ಅಯಮಾತ್ಮೇತಿ ವಾಕ್ಯೇ ಚ ಪುಂರೂಪಂ ಪದಯುಗ್ಮಕಂ ।
ಈಶೇನ ರಕ್ಷಣೀಯತ್ವಾದೀಶಾವಾಸ್ಯಮಿದಂ ಜಗತ್ ॥ ೭ ॥

---

ದಿಂದ ಭಾವನೆಯನ್ನು ಮಾಡುವುದು ಸರಿಯಾಗುವುದಿಲ್ಲ. ಅಹಂ ಶಬ್ದವು ಪುರುಷನೆಂದೂ, ತತ್ ಎಂಬ ಶಬ್ದದ ಅರ್ಥವು ನಪುಂಸಕಲಿಂಗವೆಂದೂ ಆಗಿರುವುದು. ಹೀಗಿರುವುದರಿಂದ ಅಹಂ ತತ್ ಎಂಬ ಎರಡು ಪದಗಳ ಅರ್ಥವು ಪರಸ್ಪರ ವಿರುದ್ಧವಾಗಿ ಹೊಂದುವಿಕೆಯು ಲೋಕವಿರುದ್ಧವಾದ ಅರ್ಥವುಳ್ಳದ್ದಾಗುವುದು. ಹಾಗಿಲ್ಲದಿದ್ದರೆ ಸ್ತ್ರೀಪುರುಷರೂಪನಾದ ಈ ಜಗತ್ತಿಗೆ ಬೇರೆ ಕಾರಣವನ್ನು ಹೇಳಬೇಕಾದೀತು. ಸಃ-ಅವನು, ತತ್-ಬ್ರಹ್ಮನು, ತ್ವಂ-(ಆತ್ಮನು) ನೀನು, ಅಸಿ=ಆಗಿರುತ್ತೀಯೆ. ಅಹಂ ಬ್ರಹ್ಮಾಸ್ಮಿ. ಶಿವಶಕ್ತಿಯ ಆಕಾರದಿಂದ ಇರುವ ತತ್ ಬ್ರಹ್ಮರೂಪವೇ, ತ್ವಮಸಿ/ನೀನಾಗಿರುತ್ತೀಯೆ ಎಂದು ಉಪದೇಶದ ಅರ್ಥವನ್ನು ತಿಳಿದು ಭಾವನೆಯನ್ನು ಮಾಡತಕ್ಕದ್ದು. ಈ ವಾಕ್ಯಾರ್ಥವು ಶುಕರಹಸ್ಯೋಪನಿಷತ್ತಿನಲ್ಲಿ ಈ ರೀತಿ ವಿವರಿಸಲ್ಪಟ್ಟಿರುವುದು. ಸೃಷ್ಟಿಗೆ ಪೂರ್ವದಲ್ಲಿ ನಾಮರೂಪವಿಭಾಗಗಳೊಂದೂ ಇಲ್ಲದ ಅವ್ಯಕ್ತವು ಎಲ್ಲೆಲ್ಲಿಯೂ ತಾನೇತಾನಾಗಿ ವ್ಯಾಪಿಸಿದ್ದಿತು. ಈ ಅವ್ಯಕ್ತಕ್ಕೆ ನಿರ್ವಿಶೇಷಬ್ರಹ್ಮವೆಂದೂ, ನಿರ್ಗುಣಾತ್ಮಕವಾದ ಪರಬ್ರಹ್ಮವೆಂದೂ ಅನೇಕವಿಧವಾಗಿ ಹೇಳುವರು. ಇಂತಹ ಪರಬ್ರಹ್ಮವೇ ಈ ವಾಕ್ಯದಲ್ಲಿ ತತ್ ಎಂಬ ಪದದಿಂದ ಹೇಳಲ್ಪಟ್ಟಿರುವುದು. ತ್ವಂಪದವೆಂದರೆ, ದೇಹ, ಶ್ರೋತ್ರಾದಿ ಅವಯುವಗಳು ಮುಂತಾದ ಉಪಾಧಿಗಳನ್ನು ಮೀರಿರುವ ವಸ್ತುವು, ಎಂದರೆ ಆತ್ಮನು. ಅಸಿಪದಕ್ಕೆ-ನೀನು ಇರುತ್ತೀಯೆ ಎಂದರ್ಥವು. ಎಂದರೆ ಆತ್ಮನಾದ ನೀನು ನಾಮರೂಪರಹಿತನೂ ನಿರ್ಗುಣನೂ ಆದ ಪರಬ್ರಹ್ಮವೇ ಆಗಿರುವೆ- ಆತ್ಮನಿಗೂ ಬಹ್ಮನಿಗೂ ಭೇದವೇನೂ ಇಲ್ಲ. ಇವರಿಬ್ಬರೂ ಒಂದೇ ಎಂದು ಅಸಿಪದವು ಐಕ್ಯಾರ್ಥವನ್ನು ಪ್ರತಿಪಾದನೆ ಮಾಡುವುದು.

೭. ಅಯಮಾತ್ಮಾ ಬ್ರಹ್ಮ ಎಂಬ ವಾಕ್ಯದಲ್ಲಿ ಅಯಂ, ಆತ್ಮಾ ಎಂಬೆರಡು ಶಬ್ದಗಳೂ ಪುಲ್ಲಿಂಗ ಶಬ್ದದ ಅರ್ಥವನ್ನು ಹೇಳುವ ಎರಡು ಪದಗಳುಗಿರುವವು. ಆದ್ದರಿಂದ ಈ ವಾಕ್ಯಾರ್ಥವನ್ನೂ ಹಿಂದಿನಂತೆಯೇ ತಿಳಿಯಬೇಕು. ಅಯಂ-ಎಂದರೆ ಅಹಂಕಾರಾದಿಯಾಗಿ ದೇಹದವರಿಗೂ ಇರುವ ಶ್ರೋತ್ರಾದಿ ಉಪಾಧಿಗಳನ್ನು ಹೊಂದಿರುವ ಈ ಶರೀರದಲ್ಲಿ ಯಾರ ಕಣ್ಣಿಗೂ ಕಾಣಿಸದಂತೆ ಸ್ವಪ್ರಕಾಶದಿಂದ ಬೆಳಗುತ್ತಾ, ಪ್ರಾಣಿಗಳ ಚೇಷ್ಟಾದಿ ಕರ್ಮಗಳಿಗೆ ಪ್ರೇರಕವಾಗಿರುವ ವಸ್ತುವಿಗೆ

ಪ್ರಜ್ಞಾನಾತ್ಮಾ ಯದೇವೇಹ ತದಮುತ್ರೇತಿ ಚಿಂತಯೇತ್ ।
ಯಃ ಸ ಏವೇತಿ ವಿದ್ವದ್ಭಿಸ್ಸಿದ್ಧಾಂತಿಭಿರಿಹೋಚ್ಯತೇ ॥ ೮ ॥

ಉಪರಿಸ್ಥಿತವಾಕ್ಯೇ ಚ ಯೋಽಮುತ್ರ ಸ ಇಹ ಸ್ಥಿತಃ ।
ಇತಿ ಪೂರ್ವವದೇವಾರ್ಥಃ ಪುರುಷೋ ವಿದುಷಾಂ ಮತಃ ॥ ೯ ॥

---

ಆತ್ಮನೆಂದು ಹೆಸರು. ಇನ್ನು ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಪ್ರಪಂಚರೂಪವಾದ ವಸ್ತುಗಳು ಯಾವ ಮೂಲವಸ್ತುವಿನಿಂದ ಉಂಟಾದವೋ ಅಂತಹ ಸ್ವಪ್ರಕಾಶಾತ್ಮ ರೂಪವಾದ ಬ್ರಹ್ಮವೇ ಈ ಆತ್ಮವಾಗಿರುವುದು ಅಥವಾ ಈ ಆತ್ಮನೇ ಬ್ರಹ್ಮವಾಗಿರುವುದು. ಈ ನಾಲ್ಕು ವಾಕ್ಯಗಳೂ ಮಹಾವಾಕ್ಯಗಳೆಂದು ಪ್ರಸಿದ್ಧವಾಗಿರುವವು. ಶುಕರಹಸ್ಯೋಪನಿಷತ್ತಿನಲ್ಲಿ ಈ ವಾಕ್ಯಗಳ ವಿವರಣೆಯು ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿರುವವು. ಪ್ರಭುವಾದ ಈಶ ಅಥವಾ ಶಿವನಿಂದ ಈ ಜಗತ್ತು ರಕ್ಷಿಸಲ್ಪಟ್ಟಿರುವುದರಿಂದ ಈ ಜಗತ್ತಿಗೆ ಈಶಾವಾಸ್ಯವೆಂದು ಹೆಸರು. ಈ ವಾಕ್ಯವು ಈಶಾವಾಸ್ಯೋಪನಿಷತ್ತಿನ ಮೊದಲನೆಯ ವಾಕ್ಯವು. ಈ ಉಪನಿಷತ್ತಿನಲ್ಲಿ ಹದಿನೆಂಟು ವಾಕ್ಯಗಳು ಮಾತ್ರ ಇರುವವು. ಆದರೆ ಅರ್ಥವು ಬಹಳ ಗಹನವಾಗಿರುವುದು. ಅವೆಲ್ಲವನ್ನೂ ಇಲ್ಲಿ ವಿವರಿಸಲು ಸಾಧ್ಯವಿಲ್ಲದ್ದರಿಂದ ವಾಕ್ಯಾರ್ಥಗಳನ್ನು ಸೂಕ್ಷ್ಮವಾಗಿ ಹೇಳಿರುವುದು.

೮. "ಪ್ರಾಣೋಽಸ್ಮಿ" ಮತ್ತು "ಪ್ರಜ್ಞಾನಾತ್ಮಾ" ಎಂಬ ಎರಡು ವಾಕ್ಯಗಳಿಗೂ ಸ್ವಲ್ಪ ಹೆಚ್ಚು ಕಡಿಮೆ "ಅಯಮಾತ್ಮಾ ಬ್ರಹ್ಮ" ಎಂಬ ವಾಕ್ಯದ ಅರ್ಥವೇ ಹೊಂದುವುದು. ಈ ವಾಕ್ಯದ ವಿವರಣೆಯನ್ನು ಹಿಂದೆಯೇ ಹೇಳಿದೆ. ಪ್ರಜ್ಞಾನವೆಂದು ಹೇಳಲ್ಪಡುವ ಆತ್ಮವೇ ಈ ಲೋಕದಲ್ಲಿ ಸರ್ವಪ್ರಾಣಿಗಳಲ್ಲಿಯೂ ಕಂಡುಬರುವುದು. ಅದೇ ಪ್ರಜ್ಞಾನವೇ ಅವ್ಯಕ್ತಸ್ಥಿತಿಯಲ್ಲಿ ಬ್ರಹ್ಮರೂಪದಿಂದಿರುವದು. ಇವೆರಡಕ್ಕೂ ಭೇದವಿಲ್ಲ. ಹೀಗೆ ಭಾವನೆ ಮಾಡಬೇಕು. ಅವ್ಯಕ್ತಸ್ಥಿತಿಯಲ್ಲಿ ಬ್ರಹ್ಮರೂಪದಿಂದಿರುವ ಶಿವನೇ ಸಕಲ ಪ್ರಪಂಚರೂಪನಾಗಿ ಗೋಚರಿಸುವನು. ಹೀಗೆಂದು ತತ್ತ್ವಜ್ಞರಾದ ಮಹರ್ಷಿಗಳು ಹೇಳುವರು.

೯. ಮೇಲಿನ ವಾಕ್ಯದಲ್ಲಿ ಹೇಳಿರುವಂತೆ ಅವ್ಯಕ್ತರೂಪದಿಂದಿರುವ ನಿರ್ಗುಣಾತ್ಮಕವಾದ ಪರಬ್ರಹ್ಮವೇ ಈ ಪ್ರಪಂಚರೂಪವಾಗಿ ಇಲ್ಲಿರುವದೆಂದು ಅರ್ಥವು. ವಿದ್ವಾಂಸರ ಅಭಿಪ್ರಾಯವೂ ಹೀಗೆಯೇ ಇರುವದು.

ಅನ್ಯದೇವ ತದ್ವಿದಿತಾದಥೋ ಅವಿದಿತಾದಪಿ ।
ಅಸ್ಮಿನ್ವಾಕ್ಯೇ ಫಲಸ್ಯಾಪಿ ವೈಪರೀತ್ಯವಿಭಾವನಾ ॥ ೧೦ ॥

ಯಥಾ ಸ್ಯಾತ್ತದ್ವದೇವಾತ್ರ ವಕ್ಷ್ಯಾಮಿ ಶ್ರೂಯತಾಂ ಮುನೇ ।
ಅಯಥಾವಿದಿತಾಚ್ಛಬ್ದೋ ಪೂರ್ವವದ್ವಿದಿತಾದಿತಿ ॥ ೧೧ ॥

ಪ್ರವೃತ್ತಿಃ ಸ್ಯಾತ್ತದ್ವಿದಿತಾತ್ತಥೈವಾವಿದಿತಾತ್ಪರಂ ।
ಅನ್ಯದೇವ ಹಿ ಸಂಸಿಧ್ಯೈ ನ ಭವೇದಿತಿ ನಿಶ್ಚಿತಂ ॥ ೧೨ ॥

ಏಷ ತ ಆತ್ಮಾಂತರ್ಯಾಮಿ ಯೋಽಮೃತಶ್ಚ ಶಿವಸ್ಸ್ವಯಂ ।
ಯಶ್ಚಾಯಂ ಪುರುಷೇ ಶಂಭುರ್ಯಶ್ಚಾದಿತ್ಯೇ ವ್ಯವಸ್ಥಿತಃ ॥ ೧೩ ॥

---

೧೦. ಹೀಗಲ್ಲದೆ ಬೇರೆ ವಿಧವಾಗಿ ತಿಳಿಯುವದು ತಿಳಿದಂತೆಯೇ ಆಗುವದಿಲ್ಲ. ಎಂದರೆ ತಿಳಿದರೂ ತಿಳಿಯದಂತೆಯೇ. ಫಲವೂ ಬೇರೆಯೇ ಆಗುವದು. ಎಂದರೆ ತತ್ತ್ವಾರ್ಥವನ್ನು ಸರಿಯಾದ ರೀತಿಯಲ್ಲಿ ತಿಳಿದು ಅರ್ಥಮಾಡಿಕೊಳ್ಳದಿದ್ದರೆ, ಜ್ಞಾನಕ್ಕೆ ಆಗಬೇಕಾದ ಮುಕ್ತಿಫಲವು ಲಭಿಸದೆ ಹೋಗುವದು.

೧೧–೧೨. ಆದುದರಿಂದ ಯಾವದನ್ನು ಯಾವರೀತಿ ತಿಳಿದುಕೊಳ್ಳಬೇಕೆನ್ನು ವದನ್ನು ಹೇಳುವೆನು. ಎಲೈ ಋಷಿಗಳೇ ಕೇಳಿರಿ. ಯಾವ ಪದದ ಅರ್ಥವನ್ನು ಯಾವರೀತಿ ಅರ್ಥಮಾಡಿ ತಿಳಿದುಕೊಳ್ಳಬೇಕೋ ಅದರಂತೆ ತಿಳಿದುಕೊಳ್ಳದೆ ಅಪಾರ್ಥಮಾಡಿಕೊಳ್ಳುವದಕ್ಕಿಂತ ಪದದ ಅರ್ಥವನ್ನು ತಿಳಿಯದಿರುವದೇ ಮೇಲು. ಏಕೆಂದರೆ ಅಪಾರ್ಥಮಾಡಿದರೆ ಅದರಿಂದ ಸಿದ್ಧಿಯಾಗುವದಕ್ಕೆ ಬದಲಾಗಿ ಕೇಡೇ ಉಂಟಾಗುವದು- ಇದು ನಿಜವು.

೧೩–೧೪. ಈ ವಾಕ್ಯವು ಬೃಹದಾರಣ್ಯಕೋಪನಿಷತ್ತಿನಲ್ಲಿರುವದು ಮತ್ತು ಯಜುರ್ವೇದ ತೈತ್ತಿರೀಯೋಪನಿಷತ್ತಿನಲ್ಲಿಯೂ ಹೀಗೆ ಹೇಳಿರುವದು "ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ" ನಿನ್ನ ಆತ್ಮದಲ್ಲಿ ಅಂತರ್ಯಾಮಿಯಾಗಿ ಇರುವವನು ನಾಶರಹಿತನಾದ ಸಾಕ್ಷಾಚ್ಛಿವನೇ ಆಗಿರುವನು. ಪುರುಷನಲ್ಲಿ ಅಂತರಾತ್ಮನಾಗಿರುವವನೂ, ಸೂರ್ಯಮಂಡಲದಲ್ಲಿ ಹಿರಣ್ಮಯರೂಪದಿಂದ ಇರುವವನೂ ಆ ಶಿವನೇ ಆಗಿರುವನು. ಪುರುಷನಲ್ಲಿ ಇರುವ ಅಂತರ್ಯಾಮಿಯೂ ಸೂರ್ಯನಲ್ಲಿ ಇರುವ ಅಂತರ್ಯಾಮಿಯೂ ಒಬ್ಬನೇ. ಅವನೇ ಶಿವನು. "ಅಂತಃಪ್ರವಿಷ್ಟ

ಸ ಚಾಽಸೌ ಸೇತಿ ಸಾರ್ಥಕ್ಯಂ ನೈಕ ಸರ್ವಂ ಸ ಈರಿತಃ ।
ಸೋಽಪಾಧಿದ್ವಯಮಸ್ಯಾರ್ಥ ಉಪಚಾರಾತ್ತಥೋಚ್ಯತೇ ॥ ೧೪ ॥

ತಂ ಶಂಭುನಾಥಂ ಶ್ರುತಯೋ ವದಂತಿ ಹಿ ಹಿರಣ್ಮಯಂ ।
ಹಿರಣ್ಯಬಾಹವ ಇತಿ ಸರ್ವಾಂಗಸ್ಯೋಪಲಕ್ಷಣಂ ॥ ೧೫ ॥

ಅನ್ಯಥಾ ತತ್ಪತಿತ್ವಂ ತು ನ ಭವೇದಿತಿ ಯತ್ನತಃ ।
ಯ ಏಷೋಂತರಿತಿ ಶಂಭುಶ್ಛಾಂದೋಗ್ಯೇ ಶ್ರೂಯತೇ ಶಿವಃ ॥ ೧೬ ॥

ಹಿರಣ್ಯಶ್ಮಶ್ರುವಾಂಸ್ತದ್ವದ್ಧಿರಣ್ಯಮಯಕೇಶವಾನ್ ।
ನಖಮಾರಭ್ಯ ಕೇಶಾಂತಂ ಸರ್ವತ್ರಾಪಿ ಹಿರಣ್ಮಯಃ ॥ ೧೭ ॥

---

ಶ್ಯಾಸ್ತಾ ಜನಾನಾಗ್ಂ ಸರ್ವಾತ್ಮಾ" [ತೈ. ಆ.] ಪರಮೇಶ್ವರನು ಸರ್ವಜನರಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು ಎಲ್ಲವನ್ನು ತನ್ನ ಅಪ್ಪಣೆಯಂತೆ ನಡೆಯಲು ಪ್ರೇರಿಸುತ್ತಿರುವನು. ಪ್ರಪಂಚದಲ್ಲಿ ಪುರುಷನೇ ಮೊದಲಾದ ಅನೇಕ ವಸ್ತುಗಳಲ್ಲಿಯೂ, ಸೂರ್ಯನಲ್ಲಿಯೂ, ಒಬ್ಬನೇ ಪರಮಾತ್ಮನು ಇರುವದರಿಂದ ಆ ಪರಮಾತ್ಮನು ಎರಡು ಉಪಾಧಿಗಳನ್ನು ಆಶ್ರಯಿಸಿ ಬೇರೆಬೇರೆಯಾಗಿರುವಂತೆ ತೋರಿದರೂ ಅಥವಾ ಲೋಕ ವ್ಯವಹಾರವಿದ್ದರೂ ವಸ್ತುತಃ ಅಂತರ್ಯಾಮಿಯು ಒಬ್ಬನೇ ಆಗಿರುವನು. ಈ ಪುರುಷನು ಬೇರೆ, ಆ ಪುರುಷನು ಬೇರೆ, ಸೂರ್ಯನು ಬೇರೆ ಎಂದು ಹೇಳುವದು ಉಪಚಾರಕ್ಕಾಗಿ ಎಂದರೆ ಲೋಕವ್ಯವಹಾರಕ್ಕಾಗಿಯೇ ಹೊರತು ಬೇರೆಯಲ್ಲ.

೧೫–೧೭. ಪ್ರಭುವಾಗಿರುವ ಪ್ರಸಿದ್ಧನಾದ ಶಿವನನ್ನು [ಹಿರಣ್ಮಯ] ಚಿನ್ನದ ವಿಗ್ರಹವನ್ನಾಗಿ ವೇದಗಳು ಹೇಳುತ್ತಿರುವವು. "ನಮೋ ಹಿರಣ್ಯಬಾಹವೇ" [ತೈ. ಸಂ. ೪–೪–೨] ಎಂದು ಶ್ರುತಿಯು ಹೇಳುತ್ತಿರುವದು. ಚಿನ್ನದ ತೋಳುಗಳೆನ್ನುವದು, ಆ ಶಿವನ ಎಲ್ಲಾ ಅಂಗಗಳನ್ನೂ ಹೇಳುವದಾಗಿರುವದು. ಹೀಗಿಲ್ಲದಿದ್ದರೆ ಆ ಶಿವನಿಗೆ ಪ್ರಯತ್ನದಿಂದ ಐಶ್ವರ್ಯದ ಆಧಿಪತ್ಯವು ಹೊಂದಲಶಕ್ಯವೆಂದು ಸಿದ್ಧಾನ್ತಮಾಡಿರುವರು. ಛಾಂದೋಗ್ಯೋಪನಿಷತ್ತಿನಲ್ಲಿ "ಯ ಏಷೋಂತರ್ಯಾಮ್ಯಮೃತಃ" ಅಂತರ್ಯಾಮಿಯಾಗಿರುವ ಈ ಶಿವನು ಅಮೃತರೂಪದಿಂದಿರುವನು ಎಂಬುವ ಅರ್ಥವುಳ್ಳ ಮಂತ್ರವು ಇರುವದು. ಈ ಶಿವನು ಸ್ವಭಾವದಿಂದಲೂ, ಚಿನ್ನದ ಗಡ್ಡ ಮೀಸೆಗಳುಳ್ಳವನು. ಚಿನ್ನದಕೂದಲುಗಳುಳ್ಳವನು. ಉಗುರುಮೊದಲುಗೊಂಡು ಕೂದಲಿನ ಕೊನೆಯವರಿಗೂ, ದೇಹದ ಎಲ್ಲಾ ಭಾಗದಲ್ಲಿಯೂ ಚಿನ್ನದ ಆಕಾರದಿಂದಲೇ ಇರುವನು.

ಅಹಮಸ್ಮಿ ಪರಂ ಬ್ರಹ್ಮ ಪರಾಪರಪರಾತ್ಪರಂ ।
ಇತಿ ವಾಕ್ಯಸ್ಯ ತಾತ್ಪರ್ಯಂ ವದಾಮಿ ಶ್ರೂಯತಾಮಿದಂ ॥ ೧೮ ॥

ಅಹಂ ಪದಾಸ್ಯಾರ್ಥಭೂತಃ ಶಕ್ತ್ಯಾತ್ಮಾ ಶಿವ ಈರಿತಃ ।
ಸ ಏವಾಸ್ಮೀತಿ ವಾಕ್ಯಾರ್ಥಯೋಜನಾ ಭವತಿ ಧ್ರುವಂ ॥ ೧೯ ॥

ಸರ್ವೋತ್ಕೃಷ್ಟಶ್ಚ ಸರ್ವಾತ್ಮಾ ಪರಬ್ರಹ್ಮ ಸ ಈರಿತಃ ।
ಪರಶ್ಚಾಥಾಪರಶ್ಚೇತಿ ಪರಾತ್ಪರಮಿತಿ ತ್ರಿಧಾ ॥ ೨೦ ॥

ರುದ್ರೋ ಬ್ರಹ್ಮಾ ಚ ವಿಷ್ಣುಶ್ಚ ಪ್ರೋಕ್ತಾಃ ಶ್ರುತ್ಯೈವ ನಾನ್ಯಥಾ ।
ತೇಭ್ಯಶ್ಚ ಪರಮೋ ದೇವಃ ಪರಶಬ್ದೇನ ಬೋಧಿತಃ ॥ ೨೧ ॥

ವೇದಶಾಸ್ತ್ರಗುರೂಣಾಂ ಚ ವಾಕ್ಯಾಭ್ಯಾಸವಶಾಚ್ಛಿವೇಃ ।
ಪೂರ್ಣಾನಂದಮಯಶ್ಶಂಭುಃ ಪ್ರಾದುರ್ಭೂತೋ ಭವೇದ್ಧೃದಿ ॥ ೨೨ ॥

---

೧೮–೨೧. ನಾನು ಎಂಬ ಪದಾರ್ಥವು ಪರ, ಅಪರ, ಪರಾತ್ಪರ ಎಂಬ ಪರ ಬ್ರಹ್ಮಸ್ವರೂಪವಾಗಿರುವದು ಎಂಬ ಮಂತ್ರದ ಅರ್ಥವನ್ನು ವಿವರಿಸುವೆನು. ಇದನ್ನು ನೀನು ಕೇಳು. ಅಹಂಪದಕ್ಕೆ ಶಕ್ತಿರೂಪದಿಂಗಿರುವ ಶಿವನು ಎಂದು ಅರ್ಥವು ಹೀಗೆಂದು ಹೇಳಿರುವದು. ಅವನೇ ನಾನಾಗಿರುವೆನು ಎಂದು ವಾಕ್ಯಾರ್ಥದ ಕ್ರಮವು ಖಂಡಿತವಾಗಿಯೂ ಆಗುವದು. ಆ ಪರಬ್ರಹ್ಮನು ಎಲ್ಲಕ್ಕಿಂತಲೂ ಉತ್ತಮನಾಗಿಯೂ, ಎಲ್ಲರ ರೂಪದಿಂದ ಇರುವವನೆಂತಲೂ, ಹೇಳಿರುವದು. ಪರ, ಅಪರ, ಪರಾತ್ಪರ ಎಂಬುದಾಗಿ ಮೂರು ವಿಧವು. ರುದ್ರ, ಬ್ರಹ್ಮ, ವಿಷ್ಣು ಇವರುಗಳು ಈ ರೂಪದಿಂದ ಇರುವವರೆಂದು ವೇದಗಳಲ್ಲಿ ಹೇಳಿರುವದು. ಇದನ್ನು ಹೀಗಲ್ಲದೆ ವ್ಯತ್ಯಾಸವಾಗಿ ತಿಳಿಯಬಾರದು. ಇವರೆಲ್ಲರಿಗಿಂತಲೂ, ಉತ್ತಮನಾಗಿರುವ ದೇವನು ಪರಶಬ್ದದಿಂದ ಹೇಳಲ್ಪಡುವವನಾಗಿರುವನು. ಅವನೇ ಶಿವನು.

೨೨–೨೭. ವೇದ, ಶಾಸ್ತ್ರ, ಗುರು ಇವರುಗಳನ್ನು ಚೆನ್ನಾಗಿ ಸೇವಿಸಿ, ಗುರುವಿನ ಅನುಗ್ರಹದಿಂದ ಶಾಸ್ತ್ರಗಳನ್ನು ಅಭ್ಯಾಸಮಾಡಿ, ವೇದವಾಕ್ಯದ ಅರ್ಥವನ್ನು ಚೆನ್ನಾಗಿ ವಿಚಾರಮಾಡುವವನಿಗೆ ಅವನ ಮನಸ್ಸಿನಲ್ಲಿ ಪೂರ್ಣವಾದ ಆನಂದದಿಂದ ತುಂಬಿರುವ ಶಿವಜ್ಞಾನವು ಉಂಟಾಗುವದು. ಶಿವನು ಎಲ್ಲಾ ಪ್ರಾಣಿಗಳಲ್ಲಿಯೂ, ಇರುವನು. ಆ ಶಿವನು ನಾನೇ ಆಗಿರುವೆನು. ಇದರಲ್ಲಿ ಸಂಶಯವಿಲ್ಲ. ಎಲ್ಲಾ

ಸರ್ವಭೂತಸ್ಥಿತಶ್ಶಂಭುಸ್ಸ ಏವಾಹಂ ನ ಸಂಶಯಃ ।
ತತ್ತ್ವಜಾತಸ್ಯ ಸರ್ವಸ್ಯ ಪ್ರಾಣೋಽಸ್ಮ್ಯಹಮಹಂ ಶಿವಃ ॥ ೨೩ ॥

ಇತ್ಯುಕ್ತ್ವಾ ಪುನರಪ್ಯಾಹ ಶಿವಸ್ತತ್ತ್ವತ್ರಯಸ್ಯ ಚ ।
ಪ್ರಾಣೋಽಸ್ಮೀತ್ಯತ್ರ ಪೃಥ್ವ್ಯಾದಿಗುಣಾಂತಗ್ರಹಣಾನ್ಮುನೇ ॥ ೨೪ ॥

ಆತ್ಮತತ್ತ್ವಾನಿ ಸರ್ವಾಣಿ ಗೃಹೀತಾನೀತಿ ಭಾವಯ ।
ಪುನಶ್ಚ ಸರ್ವಗ್ರಹಣಂ ವಿದ್ಯಾತತ್ತ್ವೇ ಶಿವಾತ್ಮನೋಃ ॥ ೨೫ ॥

ತತ್ತ್ವಯೋಶ್ಚಾಸ್ಮ್ಯಹಂ ಪ್ರಾಣಸ್ಸರ್ವಸ್ಸರ್ವಾತ್ಮಕೋ ಹ್ಯಹಂ ।
ಜೀವಸ್ಯ ಚಾಂತರ್ಯಾಮಿತ್ವಾಜ್ಜೀವೋಽಹಂ ತಸ್ಯ ಸರ್ವದಾ ॥ ೨೬ ॥

ಯದ್ಭೂತಂ ಯಚ್ಚ ಭವ್ಯಂ ಯದ್ಭವಿಷ್ಯತ್ಸರ್ವಮೇವ ಚ ।
ಮನ್ಮಯತ್ವಾದಹಂ ಸರ್ವಃ ಸರ್ವೋ ವೈ ರುದ್ರ ಇತ್ಯಪಿ ॥ ೨೭ ॥

---

ವಿಧವಾದ ತತ್ತ್ವಸಮೂಹಗಳಿಗೂ ಪ್ರಾಣರೂಪದಿಂದಿರುವ ನಾನು ಶಿವನೆನಿಸಿಕೊಂಡಿರುವೆನು. ಹೀಗೆಂದು ಹೇಳಿದನಂತರ ಆ ಶಿವನೇ ಮೂರು ತತ್ತ್ವಗಳಿಗೂ, ಪ್ರಾಣರೂಪದಿಂದ ಇರುವನು ಎಂಬ ವಿಷಯದಲ್ಲಿ ಪೃಥಿವಿಯೇ ಮೊದಲಾಗಿ ಗುಣಗಳೇ ಕೊನೆಯಾಗಿರುವ ಎಲ್ಲಾ ತತ್ತ್ವಗಳನ್ನೂ ತೆಗೆದುಕೊಂಡಿರುವ ಕಾರಣ ಎಲ್ಲಾ ವಿಧವಾದ ಆತ್ಮತತ್ತ್ವಗಳನ್ನೂ ಹೇಳಿರುವೆನೆಂದೂ ತಿಳಿದುಕೊಳ್ಳಬೇಕು. ಮತ್ತೆ ಸರ್ವಶಬ್ದವನ್ನು ಹೇಳಿರುವದರಿಂದ ವಿದ್ಯಾತತ್ತ್ವದಲ್ಲಿ ಶಿವ ಮತ್ತು ಆತ್ಮ ಎಂಬ ಶಿವತತ್ತ್ವ ಆತ್ಮತತ್ತ್ವ ಇವೆರಡು ತತ್ತ್ವಗಳಿಗೂ ನಾನು ಪ್ರಾಣರೂಪದಿಂದ ಇರುವೆನು. ಎಲ್ಲಾ ವಿಧವಾದ ರೂಪದಿಂದ ಇರುವವನೂ ನಾನೇ ಆಗಿರುವೆನು. ಜೀವನಿಗೆ ಅಂತರ್ಯಾಮಿಯಾಗಿರುವ ಕಾರಣ ಶಿವನಾದ ನಾನು ಆ ಜೀವನಿಗೂ, ಯಾವಾಗಲೂ ಜೀವವನ್ನುಂಟುಮಾಡುವವನಾಗಿರುವೆನು. ಹಿಂದೆ ಕಳೆದಿರುವ, ಈಗ ಇರುವ, ಮುಂದೆ ಹುಟ್ಟುವ ಎಲ್ಲವೂ, ನನ್ನ ಸ್ವರೂಪದಿಂದಲೇ ಇರುವವು. ನಾನು ಎಲ್ಲಾ ವಿಧವಾದ ಆಕಾರದಿಂದ ಇರುವೆನು. ಆದ್ದರಿಂದಲೇ ರುದ್ರನು ಸರ್ವಾತ್ಮಕನು ಎಂದು ಶ್ರುತಿಯು ಹೇಳಿರುವದು.

ಶ್ರುತಿರಾಹ ಮುನೇ ಸಾ ಹಿ ಸಾಕ್ಷಾಚ್ಛಿವಮುಖೋದ್ಗತಾ ।
ಸರ್ವಾತ್ಮಾ ಪರಮೈರೇಭಿರ್ಗುಣೈರ್ನಿತ್ಯಸಮನ್ವಯಾತ್ ॥ ೨೮ ॥

ಸ್ವಸ್ಮಾತ್ಪರಾತ್ಮವಿರಹಾದದ್ವಿತೀಯೋಽಹಮೇವ ಹಿ ।
ಸರ್ವಂ ಖಲ್ವಿದಂ ಬ್ರಹ್ಮೇತಿ ವಾಕ್ಯಾರ್ಥಃ ಪೂರ್ವಮೀರಿತಃ ॥ ೨೯ ॥

ಪೂರ್ಣೋಽಹಂ ಭಾವರೂಪತ್ವಾನ್ನಿತ್ಯಮುಕ್ತೋಽಹಮೇವ ಹಿ ।
ಪಶವೋ ಮತ್ಪ್ರಸಾದೇನ ಮುಕ್ತಾ ಮದ್ಭಾವಮಾಶ್ರಿತಾಃ ॥ ೩೦ ॥

ಯೋಽಸೌ ಸರ್ವಾತ್ಮಕಶ್ಶಂಭುಸ್ಸೋಽಹಂ ಹಂಸಃ ಶಿವೋಽಸ್ಮ್ಯಹಂ ।
ಇತಿ ವೈ ಸರ್ವವಾಕ್ಯಾರ್ಥೋ ವಾಮದೇವ ಶಿವೋದಿತಃ ॥ ೩೧ ॥

---

೨೮-೩೦. ಆ ವೇದವು ಶಿವನ ಮುಖದಿಂದಲೇ ಪ್ರತ್ಯಕ್ಷವಾಗಿ ಹೊರಟಿರುವದು. ಎಲ್ಲಾ ರೂಪದಿಂದಿರುವ ಶಿವನು ಉತ್ತಮವಾದ ಈ ಗುಣಗಳಿಂದ ಯಾವಾಗಲೂ ಕೂಡಿರುವ ಕಾರಣದಿಂದಲೂ, ತನಗಿಂತಲೂ ಬೇರೆಯದಾದ ಆತ್ಮಸ್ವರೂಪವು ಇಲ್ಲದಿರುವದರಿಂದಲೂ ಈ ಶಿವನಿಗಿಂತ ಬೇರೆ ಎರಡನೆಯ ವಸ್ತುವು ಯಾವದೂ ಇಲ್ಲ. "ನ ದ್ವಿತಿಯೋಽಸ್ತಿಕಶ್ಚಿತ್" [ತೈ. ಉ.] "ಏಷ ಏವ ರುದ್ರೋ ನ ದ್ವಿತೀಯಾಯ ತಸ್ಥೇ" [ತೈ. ಸಂ.] ಎಂದು ಶ್ರುತಿಯು ಹೇಳುತ್ತಿರುವದು. "ಸರ್ವಂ ಖಲ್ವಿದಂ ಬ್ರಹ್ಮ" ಇವೆಲ್ಲವೂ ಬ್ರಹ್ಮನು ಎಂಬ ವಾಕ್ಯಾರ್ಥವನ್ನೂ ನಾನು ಮೊದಲೇ ಹೇಳಿರುವೆನು. ಶಿವರೂಪನಾದ ನಾನು ಎಲ್ಲರ ಭಾವರೂಪದಿಂದ ಇರುವ ಕಾರಣ ಪೂರ್ಣನಾಗಿಯೂ, ಯಾವಾಗಲೂ ಮುಕ್ತನಾಗಿಯೂ ಇರುವೆನು. ಪಶುಗಳಾಗಿರುವ ಜೀವರುಗಳು ನನ್ನ ಅನುಗ್ರಹದಿಂದ ಮುಕ್ತರಾಗಿ-ನನ್ನ ಸ್ವರೂಪವನ್ನು ಹೊಂದುವರು.

೩೧. ಸರ್ವಾತ್ಮಕ ಎಂದರೆ ಎಲ್ಲಾ ವಿಧವಾದ ಆಕಾರದಿಂದ ಇರುವ ಮತ್ತು ಎಲ್ಲರಲ್ಲಿಯೂ ಇರುವ ಈ ನಾನು ಶಿವನಾಗಿಯೂ, ಶಿವನಾಗಿರುವ ನಾನೇ ಹಂಸನಾಗಿಯೂ, ಸೋಹಂ ಪದಾರ್ಥದಿಂದ ಹೇಳಲ್ಪಡುವ ಶಿವರೂಪದಿಂದ ಇರುವೆನು. ಎಲೈ ವಾಮದೇವನೆ, ಹೀಗೆಂಬದಾಗಿ ಮಹಾವಾಕ್ಯಗಳ ಅರ್ಥವೆಲ್ಲವನ್ನೂ ಶಿವನೇ ಹೇಳಿರುವನು.

ಇತೀಶಶ್ರುತಿವಾಕ್ಯಾಭ್ಯಾಮುಪದಿಷ್ಟಾರ್ಥಮಾದರಾತ್ ।
ಸಾಕ್ಷಾಚ್ಛಿವೈಕ್ಯದಂ ಪುಂಸಾಂ ಶಿಶೋರ್ಗುರುರುಪಾದಿಶೇತ್ ॥ ೩೨ ॥

ಆದಾಯ ಶಂಖಂ ಸಾಧಾರಮಸ್ತ್ರಮಂತ್ರೇಣ ಭಸ್ಮನಾ ।
ಶೋಧ್ಯ ತತ್ಪುರತಃ ಸ್ಥಾಪ್ಯ ಚತುರಸ್ರೇ ಸಮರ್ಚಿತೇ ॥ ೩೩ ॥

ಓಮಿತ್ಯಭ್ಯರ್ಚ್ಯ ಗಂಧಾದ್ಯೈರಸ್ತ್ರಂ ವಸ್ತ್ರೋಪಶೋಭಿತಂ ।
ವಾಸಿತಂ ಜಲಮಾಪೂರ್ಯ ಸಂಪೂಜ್ಯೋಮಿತಿ ಮಂತ್ರತಃ ॥ ೩೪ ॥

ಸಪ್ತಧೈವಾಭಿಮಂತ್ರ್ಯಾಥ ಪ್ರಣವೇನ ಪುನಶ್ಚ ತಂ ।
ಯಸ್ತ್ವಂತರಂ ಕಿಂಚಿದಪಿ ಕುರುತೇ ಸೋಽತಿಭೀತಿಭಾಕ್ ॥ ೩೫ ॥

ಇತ್ಯಾಹ ಶ್ರುತಿಸತ್ತತ್ವಂ ದೃಢಾತ್ಮಾ ಗತಭೀರ್ಭವ ।
ಇತ್ಯಾಭಾಷ್ಯ ಸ್ವಯಂ ಶಿಷ್ಯಂ ದೇವಂ ಧ್ಯಾಯನ್ಸಮರ್ಚಯೇತ್ ॥ ೩೬ ॥

---

೩೨. ಶಿವನು ಮತ್ತು ವೇದವಾಕ್ಯಗಳು ಉಪದೇಶಮಾಡಿರುವ ಅರ್ಥವು ಶಿವನಲ್ಲಿ ಐಕ್ಯವನ್ನು ಪ್ರತ್ಯಕ್ಷವಾಗಿಯೇ ಉಪಾಸಕರಾದ ಮನುಷ್ಯರಿಗೆ ಉಂಟುಮಾಡುವದರಿಂದ ಗುರುವಾದವನು ತಾನು ಪರಿಗ್ರಹಿಸಿದ ಶಿಷ್ಯನಿಗೆ ಇದೆಲ್ಲವನ್ನೂ ಚೆನ್ನಾಗಿ ಉಪದೇಶಮಾಡಬೇಕು.

೩೩-೩೬. ಅನಂತರದಲ್ಲಿ ಪೀಠಸಹಿತವಾಗಿರುವ ಶಂಖವನ್ನು ಅಸ್ತ್ರಮಂತ್ರದಿಂದ ಭಸ್ಮವನ್ನು ಹಾಕಿ ಶುದ್ಧಿಮಾಡಿ. ಆ ಶಿಷ್ಯನ ಮುಂದುಗಡೆಯಲ್ಲಿ ಇರಿಸಿ ಚಚ್ಚೌಕವಾಗಿರುವ ಪೂಜೆಮಾಡಿದ ಮಂಡಲದಲ್ಲಿ ಪ್ರಣವದಿಂದ ಗಂಧವೇ ಮೊದಲಾದವುಗಳಿಂದ ಪೂಜಿಸಿ ಬಟ್ಟೆಯಿಂದ ಚೆನ್ನಾಗಿ ಶೋಧಿಸಿದ ನೀರನ್ನು ಶಂಖಕ್ಕೆ ತುಂಬಿ ಪ್ರಣವಮಂತ್ರದಿಂದ ಪೂಜಿಸಬೇಕು. ಬಳಿಕ ಏಳುಸಾರಿ ಪ್ರಣವದಿಂದ ಅಭಿಮಂತ್ರಿಸಬೇಕು. ಅನಂತರ ಈಗ ನಾನು ಹೇಳಿರುವ ಶಿವೈಕ್ಯದ ವಿಚಾರದಲ್ಲಿ ಕೊಂಚಮಟ್ಟಿಗಾದರೂ ಯಾವನು ಭೇದವನ್ನು ತಿಳಿಯುವನೋ ಅವನು ಬಹಳ ಭಯವನ್ನು ಹೊಂದುವನು ಎಂದು ವೇದವು ಹೇಳಿರುವದರಿಂದ ನೀನು ಯಾವ ವಿಧವಾದ ಭೇದಜ್ಞಾನಕ್ಕೂ ಅವಕಾಶವನ್ನು ಕೊಡದೆ ಯಾವ ಭಯವೂ ಇಲ್ಲದವನಾಗಿ ಇರು ಎಂದು ಶಿಷ್ಯನಿಗೆ ಹೇಳಿ ಗುರುವು ದೇವನಾದ ಶಿವನನ್ನು ಧ್ಯಾನಮಾಡುತ್ತಾ ಪೂಜಿಸಬೇಕು.

ಶಿಷ್ಯಾಸನಂ ಸಂಪ್ರಪೂಜ್ಯ ಷಡುತ್ಥಾಪನಮಾರ್ಗತಃ ।
ಶಿವಾಸನಂ ಚ ಸಂಕಲ್ಪ್ಯ ಶಿವಮೂರ್ತಿಂ ಪ್ರಕಲ್ಪಯೇತ್ ॥ ೩೭ ॥

ಪಂಚ ಬ್ರಹ್ಮಾಣಿ ವಿನ್ಯಸ್ಯ ಶಿರಃ ಪಾದಾವಸಾನಕಂ ।
ಮುಂಡವಕ್ತ್ರಕಲಾಭೇದೈಃ ಪ್ರಣವಸ್ಯ ಕಲಾ ಅಪಿ ॥ ೩೮ ॥

ಅಷ್ಟತ್ರಿಂಶನ್ಮಂತ್ರರೂಪಾಶ್ಶಿಷ್ಯದೇಹೇಽಥ ಮಸ್ತಕೇ ।
ಸಮಾವಾಹ್ಯ ಶಿವಂ ಮುದ್ರಾಃ ಸ್ಥಾಪನೀಯಾಃ ಪ್ರದರ್ಶಯೇತ್ ॥ ೩೯ ॥

ತತಶ್ಚಾಂಗಾನಿ ವಿನ್ಯಸ್ಯ ಸರ್ವಜ್ಞಾನೀತ್ಯನುಕ್ರಮಾತ್ ।
ಕಲ್ಪಯೇದುಪಚಾರಾಂಶ್ಚ ಷೋಡಶಾಸನಪೂರ್ವಕಾನ್ ॥ ೪೦ ॥

ಪಾಯಸಾನ್ನಂ ಚ ನೈವೇದ್ಯಂ ಸಮರ್ಪ್ಯೋಽಮಗ್ನಿಜಾಯಯಾ ।
ಗಂಡೂಷಾಚಮನಾರ್ಘ್ಯಾದಿಧೂಪದೀಪಾದಿಕಂ ಕ್ರಮಾತ್ ॥ ೪೧ ॥

ನಾಮಾಷ್ಟಕೇನ ಸಂಪೂಜ್ಯ ಬ್ರಾಹ್ಮಣೈರ್ವೇದಪಾರಗೈಃ ।
ಜಪೇದ್ಬ್ರಹ್ಮವಿದಾಪ್ನೋತಿ ಭೃಗುರ್ವೈ ವಾರುಣಿಸ್ತತಃ ॥ ೪೨ ॥

---

೩೭–೪೩. ಆರು ವಿಧವಾದ ಉತ್ಥಾಪನಮಾರ್ಗದಿಂದ, ಶಿಷ್ಯನ ಆಸನವನ್ನು ಪೂಜಿಸಿ ಶಿವನ ಆಸನವನ್ನೂ, ಶಿವನ ಮೂರ್ತಿಯನ್ನೂ ಕಲ್ಪಿಸಬೇಕು. ಐದು ಬ್ರಹ್ಮಮೂರ್ತಿಗಳನ್ನು ತಲೆ ಮೊದಲುಗೊಂಡು ಕಾಲಿನ ಕೊನೆಯುವರೆಗೂ, ತಲೆ, ಮುಖ, ಇವೇ ಮೊದಲಾದ ಭೇದಗಳಿಗೆ ಪ್ರಣವಮಂತ್ರದ ಮೂವತ್ತೆಂಟು ಮಂತ್ರ ರೂಪದಿಂದ ಇರುವ ಕಲೆಗಳೆಲ್ಲವನ್ನೂ ಶಿಷ್ಯನ ಶರೀರದಲ್ಲಿ ನ್ಯಾಸಮಾಡಿದನಂತರ ಶಿಷ್ಯನ ತಲೆಯಲ್ಲಿ ಶಿವನನ್ನು ಆವಾಹನೆ ಮಾಡಿ ಸ್ಥಾಪನಾದಿ ಮುದ್ರೆಗಳನ್ನು ತೋರಿಸಬೇಕು. ಅನಂತರದಲ್ಲಿ ಕ್ರಮವಾಗಿ ಸರ್ವಜ್ಞಾನಿ ಎಂದು ಮೊದಲಾದ ಮಂತ್ರಗಳಿಂದ ಅಂಗಗಳಲ್ಲಿ ನ್ಯಾಸಮಾಡಿ, ಆಸನವೇ ಮೊದಲಾದ ಷೋಡಶೋಪಚಾರಗಳನ್ನು ಮಾಡಬೇಕು. ಓಂ ಅಗ್ನಿಜಾಯಾ ಎಂಬ ಮಂತ್ರದಿಂದ ಪಾಯಸಾನ್ನದ ನೈವೇದ್ಯವನ್ನು ಅರ್ಪಿಸಿ, ಗಂಡೂಷ, ಆಚಮನೀಯ, ಅರ್ಘ್ಯ, ಧೂಪ, ದೀಪ ಇವೇ ಮೊದಲಾದವುಗಳನ್ನು ಕ್ರಮವಾಗಿ ಅರ್ಪಣೆಮಾಡಿ ಶಿವನ ವಾಮದೇವ ಮೊದಲಾದ ಹೆಸರುಗಳಿಂದ ಪೂಜಿಸಬೇಕು. ಅನಂತರ ವೇದಸಾರವನ್ನು ಬಲ್ಲವರಾದ ಬ್ರಾಹ್ಮಣರಿಂದ, "ಬ್ರಹ್ಮವಿದಾಪ್ನೋತಿ ಪರಂ" [ ತೈಉ. ೨-೧] ಎಂಬ ಮಂತ್ರವನ್ನೂ.

ಯೋ ದೇವಾನಾಮುಪಕ್ರಮ್ಯ ಯಃ ಪರಃ ಸ ಮಹೇಶ್ವರಃ ।
ಇತ್ಯೇತಂ ತಸ್ಯ ಪುರುತಃ ಕಲ್ಹಾರಾದಿವಿನಿರ್ಮಿತಾಂ ॥ ೪೩ ॥

ಆದಾಯ ಮಾಲಾಮುತ್ಥಾಯ ಶ್ರೀವಿರೂಪಾಕ್ಷನಿರ್ಮಿತೇ ।
ಶಾಸ್ತ್ರೇ ಪಂಚಾಶಿಕೇ ರೂಪೇ ಸಿದ್ಧಿಸ್ಕಂಧಂ ಜಪೇಚ್ಛನೈಃ ॥ ೪೪ ॥

ಖ್ಯಾತಿಃ ಪೂರ್ಣೋऽಹಮಿತ್ಯೇತಂ ಸಾನುಕೂಲೇನ ಚೇತಸಾ ।
ದೇಶಿಕಸ್ತಸ್ಯ ಶಿಷ್ಯಸ್ಯ ಕಂಠದೇಶೇ ಸಮರ್ಪಯೇತ್ ॥ ೪೫ ॥

ತಿಲಕಂ ಚಂದನೇನಾಥ ಸರ್ವಾಂಗಾಲೇಪನಂ ಪುನಃ ।
ಸ್ವಸಂಪ್ರದಾಯಾನುಗುಣಂ ಕಾರಯೇಚ್ಚ ಯಥಾವಿಧಿ ॥ ೪೬ ॥

ತತಶ್ಚ ದೇಶಿಕಃ ಪ್ರೀತ್ಯಾ ನಾಮಶ್ರೀಪಾದಸಂಜ್ಞಿತಂ ।
ಛತ್ರಂ ಚ ಪಾದುಕಾಂ ದದ್ಯಾದ್ಯೋಗ್ಯಾರ್ಥಕಲ್ಪವಿಕಲ್ಪನಂ ॥ ೪೭ ॥

ವ್ಯಾಖ್ಯಾತೃತ್ವಂ ಚ ಕರ್ಮಾದಿ ಗುರ್ವಾಸನಪರಿಗ್ರಹಂ ।
ಅನುಗೃಹ್ಯ ಗುರುಸ್ತಸ್ಮೈ ಶಿಷ್ಯಾಯ ಶಿವರೂಪಿಣೇ ॥ ೪೮ ॥

---

" ಭೃಗುರ್ವೈವಾರುಣಿಃ " [ತೈ. ಉ. ೨-೧] ಎಂಬ ಮಂತ್ರವನ್ನೂ ಯೋ ದೇವಾನಾಂ ಪ್ರಥಮಂ ಪುರಸ್ತಾತ್ " ಎಂಬ ಮಂತ್ರವನ್ನು ಮೊದಲುಗೊಂಡು " ಯಃ ಪರಸ್ಸ ಮಹೇಶ್ವರಃ " [ತೈ. ಉ. ೪-೧೧] ಎಂದು ಕೊನೆಯಾಗುವವರೆಗೂ ಮಂತ್ರಗಳನ್ನು ಹೇಳಿಸಬೇಕು.

೪೪-೪೮. ಅನಂತರದಲ್ಲಿ ಅವನು, ಮುಂದುಗಡೆಯಲ್ಲಿ ಕಲ್ಹಾರಪುಷ್ಪವೇ ಮೊದಲಾದುವಗಳಿಂದ ನಿರ್ಮಿಸಿದ ಹಾರವನ್ನು ಹಿಡಿದು ನಿಂತುಕೊಂಡು ಶಿವನ ಪಂಚಮುಖಸ್ವರೂಪವನ್ನು ಪ್ರತಿಪಾದನೆ ಮಾಡುವ ಸಿದ್ಧಿಸ್ಕಂದಮಂತ್ರವನ್ನು ಮೆಲ್ಲಗೆ ಜಪಮಾಡಬೇಕು. ಅನಂತರ " ಖ್ಯಾತಿಃ ಪೂರ್ಣೋऽಹಂ " ಎಂಬುದನ್ನು ಸಮಾಧಾನವಾದ ಮನಸ್ಸಿನಿಂದ ಹೇಳಿ, ಗುರುವು ಶಿಷ್ಯನ ಕಂಠದಲ್ಲಿ ಆ ಹೂವಿನ ಮಾಲೆಯನ್ನು ಹಾಕಬೇಕು. ಆಮೇಲೆ ಚಂದನದಿಂದ ತಿಲಕವನ್ನು ಅವನಿಗೆ ಇಟ್ಟು ತನ್ನ ಸಂಪ್ರದಾಯಾನುಸಾರವಾಗಿಯೂ ಶಾಸ್ತ್ರಾನುಗುಣ್ಯವಾಗಿಯೂ ಅವನ ಶರೀರ ಕ್ಕೆಲ್ಲಕ್ಕೂ ಗಂಧವನ್ನು ಲೇಪಿಸಬೇಕು. ಗುರುವು ಪ್ರೀತಿಯಿಂದ ಶ್ರೀಪಾದವೆಂದು

ಶಿವೋಽಹಮಸ್ಮೀತಿ ಸದಾ ಸಮಾಧಿಸ್ಥೋ ಭವೇತಿ ತಂ ।
ಸಂಪ್ರೋಚ್ಯಾಥ ಸ್ವಯಂ ತಸ್ಮೈ ನಮಸ್ಕಾರಂ ಸಮಾಚರೇತ್ ॥ ೪೯ ॥

ಸಂಪ್ರದಾಯಾನುಗುಣ್ಯೇನ ನಮಸ್ಕುರ್ಯುಸ್ತಥಾಪರೇ ।
ಶಿಷ್ಯಸ್ತದಾ ಸಮುತ್ಥಾಯ ನಮಸ್ಕುರ್ಯಾದ್ಗುರುಂ ತಥಾ ।
ಗುರೋರಪಿ ಗುರುಂ ತಸ್ಯ ಶಿಷ್ಯಾಂಶ್ಚ ಸ್ವಗುರೋರಪಿ ॥ ೫೦ ॥

ಏವಂ ಕೃತನಮಸ್ಕಾರಂ ಶಿಷ್ಯಂ ದದ್ಯಾದ್ಗುರುಃ ಸ್ವಯಂ ।
ಸುಶೀಲಂ ಯತವಾಚಂ ತಂ ವಿನಯಾವನತಂ ಸ್ಥಿತಂ ॥ ೫೧ ॥

ಅದ್ಯ ಪ್ರಭೃತಿ ಲೋಕಾನಾಮನುಗ್ರಹಪರೋ ಭವ ।
ಪರೀಕ್ಷ್ಯ ವತ್ಸರಂ ಶಿಷ್ಯಮಂಗೀಕುರು ವಿಧಾನತಃ ॥ ೫೨ ॥

ರಾಗಾದಿದೋಷಾನ್ಸಂತ್ಯಜ್ಯ ಶಿವಧ್ಯಾನಪರೋ ಭವ ।
ಸತ್ಸಂಪ್ರದಾಯಸಂಸಿದ್ಧೈಸ್ಸಂಗಂ ಕುರು ನ ಚೇತರೈಃ ॥ ೫೩ ॥

---

ಹೆಸರುಳ್ಳ ಛತ್ರಿಯನ್ನೂ, ಪಾದುಕೆಯನ್ನೂ, ದೂರ್ವಾರ್ಚನಪ್ರಕಾರವನ್ನೂ ಅನುಗ್ರಹಿಸಿ ಶಿವರೂಪದಿಂದ ಇರುವ ಆ ಶಿಷ್ಯನಿಗೆ ನೀನು "ಶಿವೋಽಹಮಸ್ಮಿ" ಎಂದು ಯಾವಾಗಲೂ ಜಪಮಾಡುತ್ತಾ ಸಮಾಧಿಸ್ಥಿತಿಯಲ್ಲಿರು ಎಂದು ಹೇಳಿ ತಾನು [ಗುರುವು] ಅವನಿಗೆ ನಮಸ್ಕಾರವನ್ನು ಮಾಡಬೇಕು.

೫೦-೫೫. ಬಳಿಕ ಇತರರೆಲ್ಲರೂ ಸಂಪ್ರದಾಯವನ್ನನುಸರಿಸಿ ನಮಸ್ಕಾರವನ್ನು ಮಾಡುವರು. ಆಗ ಶಿಷ್ಯನು ಎದ್ದು ಗುರುವಿಗೆ ನಮಸ್ಕಾರಮಾಡಬೇಕು. ಶಿಷ್ಯನು ತಾನು ನಮಸ್ಕಾರಮಾಡಿದ ಗುರುವಿನ ಗುರುವಿಗೂ, ಅವನ ಶಿಷ್ಯರಿಗೂ, ನಮಸ್ಕಾರಮಾಡಬೇಕು. ಬಳಿಕ ಗುರುವು ಶಿಷ್ಯನಿಗೆ ಈರೀತಿ ಹೇಳಬೇಕು.– ನಿನಗೆ ಒಳ್ಳೆಯ ಸ್ವಭಾವವೂ, ವಾಙ್ನಿಯಮವೂ, ವಿನಯವೂ ಸಿದ್ಧಿಸಲಿ. ನೀನು ಈ ದಿನ ಮೊದಲುಗೊಂಡು ಲೋಕಾನುಗ್ರಹಮಾಡುವದರಲ್ಲಿ ಯಾವಾಗಲೂ, ಉದ್ಯುಕ್ತನಾಗಿರು. ಒಂದು ವರ್ಷದವರಿಗೂ, ಚೆನ್ನಾಗಿ ಪರೀಕ್ಷೆಮಾಡಿದನಂತರ ನಿನಗೆ ಒಪ್ಪಿತವಾದವನನ್ನು, ಶಾಸ್ತ್ರಕ್ರಮದಿಂದ ಶಿಷ್ಯನನ್ನಾಗಿ ಪರಿಗ್ರಹಿಸು. ಕಾಮಕ್ರೋಧಗಳನ್ನು ಬಿಟ್ಟು ಶಿವನ ಧ್ಯಾನದಲ್ಲಿ ನಿರತನಾಗಿರು. ಒಳ್ಳೆಯ ಸಂಪ್ರದಾಯದಿಂದ ಚೆನ್ನಾಗಿ ತಿಳಿದವರ ಸಂಗಡ ಸಹವಾಸವನ್ನು ಮಾಡು. ಬೇರೆಯವರೊಡನೆ ಸೇರಬೇಡ.

ಅನಭ್ಯರ್ಚ್ಯ ಶಿವಂ ಜಾತು ಮಾ ಭುಂಕ್ಷ್ವಪ್ರಾಣಸಂಕ್ಷಯಂ ।
ಗುರುಭಕ್ತಿಂ ಸಮಾಸ್ಥಾಯ ಸುಖೀ ಭವ ಸುಖೀ ಭವ ॥ ೫೪ ॥

ಇತಿ ಕ್ರಮಾದ್ಗುರುವರೋ ದಯಾಲುರ್ಜ್ಞಾನಸಾಗರಃ ।
ಸಾನುಕೂಲೇನ ಚಿತ್ತೇನ ಸಮಂ ಶಿಷ್ಯಂ ಸಮಾಚರೇತ್ ॥ ೫೫ ॥

ತವ ಸ್ನೇಹಾನ್ಮಯಾಯಂ ವೈ ವಾಮದೇವ ಮುನೀಶ್ವರ ।
ಯೋಗಪಟ್ಟಪ್ರಕಾರಸ್ತೇ ಪ್ರೋಕ್ತೋ ಗುಹ್ಯತರೋಽಪಿ ಹಿ ॥ ೫೬ ॥

ಇತ್ಯುಕ್ತ್ವಾ ಷಣ್ಮುಖಸ್ತಸ್ಮೈ ಕ್ಷೌರಸ್ನಾನವಿಧಿಕ್ರಮಂ ।
ವಕ್ತುಮಾರಭತೇ ಪ್ರೀತ್ಯಾ ಯತೀನಾಂ ಕೃಪಯಾ ಶುಭಂ ॥ ೫೭ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಯೋಗಪಟ್ಟವಿಧಿವರ್ಣನಂ ನಾಮ್ನೈಕೋನವಿಂಶೋಽಧ್ಯಾಯಃ

---

ಯಾವಾಗಲೂ ಶಿವನನ್ನು ಪೂಜಿಸದೆ ಪ್ರಾಣಹೋದರೂ ಊಟವನ್ನು ಮಾಡಬೇಡ. ಗುರುವಿನಲ್ಲಿ ಭಕ್ತಿಯನ್ನು ಸರಿಯಾಗಿ ಇರಿಸಿ ಸುಖದಿಂದಿರು. ಸುಖವಾಗಿರು ಎಂದು ಜ್ಞಾನನಿಧಿಯಾದ ಆ ಗುರುವು ದಯೆಯಿಂದಲೂ, ಸಮಾಧಾನವಾದ ಮನಸ್ಸಿನಿಂದಲೂ ಶಿಷ್ಯನಿಗೆ ಆಶೀರ್ವಾದವನ್ನು ಮಾಡಬೇಕು.

೫೬. ಎಲೈ ಮುನೀಶ್ವರನಾದ ವಾಮದೇವನೇ. ನಿನ್ನ ಮೇಲಿನ ವಿಶ್ವಾಸದಿಂದ ನಾನು ರಹಸ್ಯವಾಗಿರುವ ವಿಷಯಗಳಿಗೂ ಅತಿ ರಹಸ್ಯವಾಗಿರುವ ಈ ಯೋಗಪಟ್ಟದ ಪ್ರಕಾರವನ್ನು ಎಂದರೆ ಗುರುಪೀಠಕ್ಕೆ ಶಿಷ್ಯನನ್ನು ಪರಿಗ್ರಹಿಸುವ ವಿಧಾನವನ್ನು ಹೇಳಿರುವೆನು ಎಂದನು.

೫೭. ಹೀಗೆಂದು ಹೇಳಿ ಷಣ್ಮುಖನು ಯತಿಗಳು ಕ್ಷೌರಮಾಡಿಸಿಕೊಳ್ಳುವ ಕ್ರಮವನ್ನು ಪ್ರೀತಿಯಿಂದ ಆ ವಾಮದೇವನಿಗೆ ಉಪದೇಶಮಾಡಲುಪಕ್ರಮಿಸಿದನು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಯೋಗಪಟ್ಟವಿಧಿ
ವರ್ಣನವೆಂಬ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ಕೈಲಾಸಸಂಹಿತಾಯಾಂ

## ವಿಂಶೋಽಧ್ಯಾಯಃ

---

॥ ಸುಬ್ರಹ್ಮಣ್ಯ ಉವಾಚ ॥

ಕ್ಷೌರಸ್ನಾನವಿಧಿಂ ವಕ್ಷ್ಯೇ ವಾಮದೇವ ಮಹಾಮುನೇ ।
ಯಸ್ಯ ಸದ್ಯೋ ವಿಧಾನೇನ ಶುದ್ಧಿಸ್ಸ್ಯಾದ್ಯತಿನಃ ಪರಾ ॥ ೧ ॥

ಯೋಗಪಟ್ಟಪ್ರಕಾರಸ್ಯ ವಿಧಿಂ ಪ್ರಾಪ್ಯ ಮುನೀಶ್ವರ ।
ಸ ಶಿಷ್ಯಃ ಸ್ಯಾದ್ವ್ರತೀ ಪೂರ್ಣಃ ಕ್ಷೌರಕರ್ಮೋಽದ್ಯತೋ ಭವೇತ್ ॥ ೨ ॥

---

## ಇಪ್ಪತ್ತನೆಯ ಅಧ್ಯಾಯವು.

೧. ಸುಬ್ರಹ್ಮಣ್ಯನಿಂತೆಂದನು—ಎಲೈ ವಾಮದೇವಮಹರ್ಷಿಯೇ ಕೇಳು. ಯತಿಯು ಕ್ಷೌರಮಾಡಿಸಿಕೊಂಡು ಸ್ನಾನವನ್ನು ಮಾಡಬೇಕಾದ ಕ್ರಮವನ್ನು ಹೇಳುವೆನು. ಯತಿಯು ಸರಿಯಾಗಿ ಇದರಂತೆ ನಡೆಸಿದರೆ ಅವನು ಬಹಳ ಪರಿಶುದ್ಧನಾಗುವನು.

೨-೩. ಯೋಗಪಟ್ಟಪ್ರಕಾರದ ಶಾಸ್ತ್ರಕ್ರಮವನ್ನು ಅನುಸರಿಸಿ ಶಿಷ್ಯನಾದ ಆ ಯತಿಯು ಸಂಪೂರ್ಣನಿಯಮನಿಷ್ಠನಾಗಿ ಕ್ಷೌರಕರ್ಮವನ್ನು ಆಚರಿಸಲು ಉದ್ಯುಕ್ತನಾಗಬೇಕು. ಗುರುವಿಗೆ ನಮಸ್ಕಾರವನ್ನು ಮಾಡಿ ಅವನ ಅನುಜ್ಞೆಯನ್ನು ಪಡೆಯಬೇಕು, ಬಳಿಕ ತನ್ನ ತಲೆಯನ್ನು ಚೆನ್ನಾಗಿ ನೀರಿನಿಂದ ನೆನಿಸಿಕೊಂಡು, ಆಚಮನ

ಗುರುಂ ನತ್ವಾ ವಿಶೇಷೇಣ ಲಬ್ಧಾನುಜ್ಞಸ್ತತೋ ಗುರೋಃ ।
ಶಿರಸ್ಸಂಕ್ಷಾಲ್ಯ ಚಾಚಮ್ಯ ಸವಾಸಾಃ ಕ್ಷೌರಮಾಚರೇತ್ ॥ ೩ ॥

ಕ್ಷಾಲಯೇದ್ವಸನಂ ಪಶ್ಚಾನ್ಮೃದಂಭೋಭಿಃ ಕ್ಷುರಾದಿಕಂ ।
ತದ್ಧಸ್ತೌ ಚ ಮೃದಾಲಿಪ್ಯ ಕ್ಷಾಲಯೇತಿ ಮೃದಂ ದದೇತ್ ॥ ೪ ॥

ಸ್ಥಾಪಿತಂ ಪ್ರೋಕ್ಷಿತಂ ತೋಯೈಶ್ಶಿವಂ ಶಿವಮಿತೀರಯನ್ ।
ಸ್ವನೇತ್ರೇ ಪಿಹಿತೇ ಚೈನಾನಾಮಾಂಗುಷ್ಠಾಭಿಮಂತ್ರಿತೇ ॥ ೫ ॥

ಅಸ್ತ್ರೇಣೋನ್ಮೀಲ್ಯ ಸಂದೃಶ್ಯ ಕ್ಷುರಾದಿಕ್ಷೌರಸಾಧನಂ ।
ಅಭಿಮಂತ್ರ್ಯ ದ್ವಾದಶಾಥ ಪ್ರೋಕ್ಷಯೇದಸ್ತ್ರಮಂತ್ರತಃ ॥ ೬ ॥

ಕ್ಷುರಂ ಗೃಹೀತ್ವಾ ತಾರೇಣ ದಕ್ಷಭಾಗೇ ನಿಕೃಂತಯೇತ್ ।
ಕೇಶಾಂಶ್ಚ ಕಾಂಶ್ಚಿದಗ್ರೇಷು ವಪ್ತ್ವಾ ಸರ್ವಂ ಚ ವಾಪಯೇತ್ ॥ ೭ ॥

---

ವನ್ನು ಮಾಡಿ, ತಾನು ಉಟ್ಟಿರುವ ಬಟ್ಟೆಯಲ್ಲಿಯೇ ಕುಳಿತುಕೊಂಡು ಕ್ಷೌರವನ್ನು ಮಾಡಿಸಿಕೊಳ್ಳಬೇಕು.

೪–೬. ಆಮೇಲೆ ಬಟ್ಟೆಯನ್ನು ಚೆನ್ನಾಗಿ ಒಗೆಯಬೇಕು. ಮಣ್ಣು, ನೀರು ಇವುಗಳಿಂದ ಕೌರದ ಕತ್ತಿಯೇ ಮೊದಲಾದದ್ದನ್ನು ತೊಳೆಯಬೇಕು. ಕ್ಷೌರಮಾಡುವವನ ಕೈಯ್ಯನ್ನು ಮಣ್ಣಿನಿಂದ ಲೇಪಿಸಿ ತೊಳೆದುಕೋ ಎಂದು ಮಣ್ಣನ್ನು ಕೊಡಬೇಕು. ಅನಂತರ ನೀರಿನಿಂದ ತೊಳೆದು ಪ್ರೋಕ್ಷಿಸಿದ ಕತ್ತಿಯೇ ಮೊದಲಾದದ್ದನ್ನು ಶಿವಶಿವ ಎಂದು ಹೇಳುತ್ತಾ, ಅನಾಮಿಕಾ, ಅಂಗುಷ್ಠಾ ಇವೆರಡು ಬೆರಳುಗಳಿಂದ ಹಿಡಿದುಕೊಂಡು ಫಟ್ ಎಂಬ ಅಸ್ತ್ರಮಂತ್ರದಿಂದ ಅಭಿಮಂತ್ರಿಸಿ ಕ್ಷೌರವೇ ಮೊದಲಾದವುಗಳಿಗೆ ಸಾಧನವಾದ ಪದಾರ್ಥಗಳನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಹನ್ನೆರಡುಸಾರಿ ಅಭಿಮಂತ್ರಿಸಿ, ಅಸ್ತ್ರಮಂತ್ರದಿಂದ ಪ್ರೋಕ್ಷಿಸಬೇಕು.

೭–೮. ಪ್ರಣವಮಂತ್ರದಿಂದ ಕ್ಷೌರದ ಕತ್ತಿಯನ್ನು ತೆಗೆದುಕೊಂಡು ಬಲಗಡೆ ಭಾಗದಲ್ಲಿ ಕೂದಲನ್ನು ಕತ್ತರಿಸಬೇಕು. ಕೆಲವು ಕೂದಲುಗಳ ತುದಿಯನ್ನು ಮೊದಲು ಕತ್ತರಿಸಿದ ನಂತರ ಎಲ್ಲಾ ಕಡೆಯಲ್ಲಿಯೂ ಕ್ಷೌರವನ್ನು ಮಾಡಿಸಬೇಕು. ಭೂಮಿಯಲ್ಲಿ ಎಲೆಗಳನ್ನು ಹಾಸಿ ಗಡ್ಡ ಮೀಸೆಗಳನ್ನೂ, ಕೈಕಾಲಿನ ಉಗುರುಗಳನ್ನೂ ತೆಗಿಸಿ

**ಪೃಥಿವ್ಯಾಂ ಪರ್ಣಮಾದಾಯ ನಿಕ್ಷಿಪೇನ್ನ ಭುವಃ ಸ್ಥಲೇ ।**
**ಶ್ಮಶ್ರೂಣಿ ಹಸ್ತಪಾದಸ್ಥನಖಾನಿ ಚ ನಿಕೃಂತಯೇತ್ ॥ ೮ ॥**

**ಬಿಲ್ವಾಶ್ವತ್ಥತುಲಸ್ಯಾದಿಸ್ಥಾನೇ ಸಂಗೃಹ್ಯ ಮೃತ್ತಿಕಾಂ ।**
**ದ್ವಿಷಡ್ವಾರಂ ನಿಮಜ್ಯಾಪ್ಸು ತೀರಂ ಗತ್ವೋಪವಿಶ್ಯ ಚ ॥ ೯ ॥**

**ಶುದ್ಧೇ ದೇಶೇ ತು ಸಂಸ್ಥಾಪ್ಯ ಮೃದಂ ತ್ರೇಧಾ ವಿಭಜ್ಯ ಚ ।**
**ಏವಂ ಪುನಸ್ತ್ರಿಧಾ ಕೃತ್ವಾ ಪ್ರೋಕ್ಷ್ಯಾಸ್ತ್ರೇಣಾಭಿಮಂತ್ರಯೇತ್ ॥ ೧೦ ॥**

**ತತ್ರೈಕಾಂ ಮೃದಮಾದಾಯ ದಾಪಯಿತ್ವಾನ್ಯಪಾಣಿನಾ ।**
**ಕರೌ ದ್ವಾದಶಧಾಲಿಪ್ಯ ಪ್ರತ್ಯೇಕಂ ಕೇನ ಕ್ಷಾಲಯೇತ್ ॥ ೧೧ ॥**

**ಪುನರೇಕಾಂ ಪಾದಯೋಶ್ಚ ಮುಖೇ ಚಾನ್ಯಾಂ ಕರೇ ಕ್ರಮಾತ್ ।**
**ಸಂಲಿಪ್ಯಾಕ್ಷಾಲ್ಯ ಚಾಂಭೋಭಿಃ ಪುನಶ್ಚ ಜಲಮಾವಿಶೇತ್ ॥ ೧೨ ॥**

---

ಅದರ ಮೇಲೆ ಹಾಕಬೇಕು. ಬರೀಭೂಮಿಯಮೇಲೆ ಬೀಳುವಹಾಗೆ ಇವುಗಳನ್ನು ಕತ್ತರಿಸಬಾರದು.

೯-೧೧. ಬಿಲ್ವಪತ್ರೆಯಮರ, ಅರಳಿಯಮರ, ತುಳಸಿಯಗಿಡ ಇವುಗಳೇ ಮೊದಲಾದುವುಗಳು ಇರುವ ಪ್ರದೇಶದ ಮಣ್ಣನ್ನು ತಂದು ಪರಿಶುದ್ಧವಾದ ಪ್ರದೇಶದಲ್ಲಿ ಇರಿಸಬೇಕು. ಹನ್ನೆರಡು ಸಾರಿ ನೀರಿನಲ್ಲಿ ಮುಳುಗಿ ದಡಕ್ಕೆ ಬಂದು ಕೂತುಕೊಂಡು, ಆ ಮಣ್ಣನ್ನು ಮೂರುಭಾಗಮಾಡಿ ಮೂರುಸಾರಿ ಪ್ರೋಕ್ಷಿಸಿ, ಅಸ್ತ್ರಮಂತ್ರದಿಂದ, ಅಭಿಮಂತ್ರಿಸಬೇಕು. ಅದರಲ್ಲಿ ಒಂದು ಮಣ್ಣಿನ ಉಂಡೆಯನ್ನು ತೆಗೆದುಕೊಂಡು ಒಂದು ಕೈಯ್ಯಿನಿಂದ ಮತ್ತೊಂದು ಕೈಯ್ಯನ್ನು ತಿಕ್ಕುತ್ತಾ ಈ ಕ್ರಮದಿಂದ ಎರಡು ಕೈಗಳನ್ನೂ ಹನ್ನೆರಡು ಸಾರಿ ಲೇಪಿಸಿ ಬೇರೆ ಬೇರೆ ಯಾಗಿ ನೀರಿನಿಂದ ತೊಳೆದುಕೊಳ್ಳಬೇಕು.

೧೨-೧೪. ಮತ್ತೊಂದು ಉಂಡೆಯನ್ನು ತೆಗೆದುಕೊಂಡು, ಎರಡು ಪಾದಗಳು ಮುಖ, ಎರಡು ಕೈಗಳು ಇವುಗಳಿಗೆ ಮಣ್ಣಿನ ಉಂಡೆಗಳಿಂದಲೂ ನೀರಿನಿಂದಲೂ ಲೇಪಿಸಿ ತೊಳೆದುಕೊಂಡು ಪುನಃ ನೀರಿನಲ್ಲಿ ಇಳಿಯಬೇಕು. ತಾನು ಮಾಡಿಟ್ಟಿರುವ ಮಣ್ಣಿನ ಭಾಗದಲ್ಲಿ ಉಳಿದಿರುವ ಮತ್ತೊಂದು ಭಾಗವನ್ನು ತೆಗೆದುಕೊಂಡು ಅವ

ಅನ್ಯಾಂ ಮೃದಂ ಭಾಗಯಿತ್ವಾ ಶಿರಸಿ ದ್ವಾದಶ ಕ್ರಮಾತ್ ।
ಆಲಿಪ್ಯ ಮೃದಮಾಸ್ಯಾಂತನ್ನಿಮಜ್ಯ ಚ ಪುನಃ ಪುನಃ ॥ ೧೩ ॥

ತೀರಂ ಗತ್ವಾ ತು ಗಂಡೂಷಾನ್ ಷೋಡಶಾಚಮನಂ ದ್ವಿಧಾ ।
ಪ್ರಾಣಾನಾಯಮ್ಯ ಚ ಪುನಃ ಪ್ರಣವಂ ದ್ವ್ಯಷ್ಟಸಂಖ್ಯಯಾ ॥ ೧೪ ॥

ಮೃದಮನ್ಯಾಂ ಪುನಸ್ತ್ರೇಧಾ ವಿಭಜ್ಯ ಚ ತದೇಕಯಾ ।
ಕಟಿಶೌಚಂ ಪಾದಶೌಚಂ ವಿಧಾಯಾಚಮ್ಯ ಚ ದ್ವಿಧಾ ॥ ೧೫ ॥
ಪ್ರಣವೇನಾಥ ಷೋಡಶ ಪ್ರಾಣಾನಾಯಮ್ಯ ವಾಗ್ಯತಃ ।
ಪುನರನ್ಯಾಂ ಸ್ವೋರುದೇಶೇ ತ್ರಿಧಾ ವಿನ್ಯಸ್ಯ ಚೋಮಿತಿ ॥ ೧೬ ॥

ಪ್ರೋಕ್ಷ್ಯಾಭಿಮಂತ್ರಯೇತ್ಸಪ್ತ ಸ್ವಪಾಣ್ಯೋಸ್ತಲಮೇಕಧಾ ।
ತ್ರಿಧಾಲಿಪ್ಯಾಥ ಸಂಪಶ್ಯೇತ್ಸೂರ್ಯಮೂರ್ತಿಂ ಚ ಪಾವನೀಂ ॥ ೧೭ ॥

ಸ್ವಕಕ್ಷಯೋಃ ಸಮಾಲಿಪ್ಯ ವ್ಯತ್ಯಸ್ತಾಭ್ಯಾಮಥಾನ್ಯಯಾ ।
ಪಾಣಿಭ್ಯಾಂ ಚ ಮೃದಾ ಶಿಷ್ಯಸ್ಸುಮತಿರ್ದೃಢಮಾನಸಃ ॥ ೧೮ ॥

---

ರಿಂದ ತಲೆಯಲ್ಲಿ ಕ್ರಮವಾಗಿ ಹನ್ನೆರಡು ಸಾರಿ ಮೃತ್ತಿಕಾಶೌಚವನ್ನು ಮಾಡಿಕೊಂಡು ಸ್ವಲ್ಪ ಭಾಗ ಮಣ್ಣನ್ನು ಬಾಯಿಯ ಒಳಭಾಗಕ್ಕೂ ಹಾಕಿಕೊಂಡು ಮೃತ್ತಿಕಾಶೌಚವನ್ನು ಮಾಡಿಕೊಳ್ಳಬೇಕು. ದಡಕ್ಕೆ ಬಂದು ಹದಿನಾರು ಸಾರಿ ಬಾಯಿಮುಕ್ಕಳಿಸಿ ಉಗುಳಿ ಎರಡು ಸಾರಿ ಆಚಮನವನ್ನು ಮಾಡಬೇಕು. ಬಳಿಕ ಪ್ರಾಣಾಯಾಮವನ್ನು ಮಾಡಿ, ಪ್ರಣವಮಂತ್ರವನ್ನು ಹದಿನಾರು ಸಾರಿ ಜಪಿಸಿ, ಬೇರೆಯ ಮಣ್ಣನ್ನು ತೆಗದುಕೊಂಡು ಮೂರು ಭಾಗಮಾಡಿ, ಅದರಲ್ಲಿ ಒಂದರಿಂದ ಕಟಿಪ್ರದೇಶದಲ್ಲಿ ಶೌಚವನ್ನು ಮಾಡಿಕೊಂಡು ಎರಡು ಸಾರಿ ಆಚಮನವನ್ನು ಮಾಡಬೇಕು.

೧೬-೧೮. ಆಮೇಲೆ ಹದಿನಾರು ಪ್ರಣವಗಳಿಂದ ಪ್ರಾಣಾಯಾಮವನ್ನು ಮಾಡಿ ವಾಙ್ನಿಯಮ ಉಳ್ಳವನಾಗಿ, ಮತ್ತೆ ಬೇರೆ ಮಣ್ಣನ್ನು ತೊಡೆಯ ಪ್ರದೇಶದಲ್ಲಿರಿಸಿ ಪ್ರಣವದಿಂದ ಪ್ರೋಕ್ಷಿಸಿ ಏಳುಸಾರಿ ಅಭಿಮಂತ್ರಣೆಯನ್ನು ಮಾಡಬೇಕು. ತನ್ನ ಎರಡು ಕೈಗಳ ತಲಪ್ರದೇಶಕ್ಕೆ ಒಂದು ಸಾರಿ ಅಥವಾ ಮೂರುಸಾರಿ ಮಣ್ಣನ್ನು ಹಚ್ಚಿದನಂತರ ಪರಿಶುದ್ಧವಾದ ಸೂರ್ಯಬಿಂಬವನ್ನು ನೋಡಬೇಕು. ಬಳಿಕ ತನ್ನ ಕೈಗಳಿಂದ ತನ್ನ ಎರಡು ಕಂಕುಳಿಗೂ ಮಣ್ಣನ್ನು ಸವರಿಕೊಂಡು ಮೃತ್ತಿಕಾಶೌಚವನ್ನು ಬುದ್ಧಿವಂತನಾದ ಶಿಷ್ಯನು ದೃಢವಾದ ಮನಸ್ಸಿನಿಂದ ಆಚರಿಸಬೇಕು.

ಗೃಹೀತ್ವಾನ್ಯಾಂ ಮೃದಂ ಶುದ್ಧಾಂ ತಥಾಸೌ ಗುರುಭಕ್ತಿಮಾನ್ ।
ಶಿರ ಆರಭ್ಯ ಪಾದಾಂತಂ ವಿಲಿಪ್ಯಾದಿತ್ಯದೃಷ್ಟಯಾ ॥ ೧೯ ॥

ಸಮುತ್ಥಾಯ ತತೋಽಸೌ ವೈ ದಂಡಮಾದಾಯ ಭೂತಲೇ ।
ಸ್ವಗುರುಂ ಮಂತ್ರದಂ ಭಕ್ತ್ಯಾ ಸಂಸ್ಮರೇಜ್ಞಾನನಿಷ್ಠಯಾ ॥ ೨೦ ॥

ತತಸ್ಸಾಂಬಂ ಮಹೇಶಾನಂ ಶಂಕರಂ ಚಂದ್ರಶೇಖರಂ ।
ಸಂಸ್ಮರೇದ್ಭಕ್ತಿತಶ್ಶಿಷ್ಯಃ ಸರ್ವೈಶ್ವರ್ಯಪತಿಂ ಶಿವಂ ॥ ೨೧ ॥

ತ್ರಿವಾರಂ ಪ್ರಣಮೇತ್ಪ್ರೀತ್ಯಾ ಸಾಷ್ಟಾಂಗಂ ಚ ಗುರುಂ ಶಿವಂ ।
ಪಂಚಾಂಗೇನೈಕವಾರಂ ಚ ಸಮುತ್ಥಾಯ ಚ ವಂದಯೇತ್ ॥ ೨೨ ॥

ತೀರ್ಥಂ ಪ್ರವಿಶ್ಯ ತನ್ಮಧ್ಯೇ ನಿಮಜ್ಯೋನ್ಮಜ್ಯ ತಾಂ ಮೃದಂ ।
ಸ್ಕಂಧೇ ಸಂಸ್ಥಾಪ್ಯ ಪೂರ್ವೋಕ್ತಪ್ರಕಾರೇಣ ವಿಲೇಪಯೇತ್ ॥ ೨೩ ॥

---

೧೯-೨೨. ಗುರುವಿನಲ್ಲಿ ಭಕ್ತಿಯುಳ್ಳ ಆ ಶಿಷ್ಯನು ಪರಿಶುದ್ಧವಾದ ಬೇರೆ ಮಣ್ಣನ್ನು ತೆಗೆದುಕೊಂಡು ತಲೆ ಮೊದಲುಗೊಂಡು ಕಾಲಿನ ತುದಿಯವರೆವಿಗೂ, ಸೂರ್ಯನನ್ನು ನೋಡುತ್ತಾ ಮೃತ್ತಿಕಾಶೌಚವನ್ನು ಮಾಡಿಕೊಳ್ಳಬೇಕು. ಅನಂತರ ಮೇಲಕ್ಕೆ ಎದ್ದು ತನ್ನ ದಂಡವನ್ನು ಹಿಡಿದು ಭೂಮಿಯಮೇಲೆ ನಿಂತುಕೊಂಡು, ತನಗೆ ಮಂತ್ರವನ್ನು ಉಪದೇಶಮಾಡಿದ ಗುರುವನ್ನು ಭಕ್ತಿಯಿಂದ ಸ್ಮರಿಸಬೇಕು ಅನಂತರ ಜಗನ್ಮಾತೆಯೊಡನೆ ಇರುವವನೂ, ಯಾವಾಗಲೂ, ಸುಖವನ್ನುಂಟು ಮಾಡುವವನೂ, ಎಲ್ಲಾ ಐಶ್ವರ್ಯಕ್ಕೂ ಅಧಿಪತಿಯಾಗಿರುವವನೂ, ಶಿರಸ್ಸಿನಲ್ಲಿ ಚಂದ್ರನನ್ನು ಧರಿಸಿರುವವನೂ ಆದ ಶಿವನನ್ನು ಭಕ್ತಿಯಿಂದ ಸ್ಮರಿಸಿ ಮೂರುಸಾರಿ ನಮಸ್ಕರಿಸಬೇಕು. ತನ್ನ ಗುರುವನ್ನು ಅಷ್ಟಾಂಗ ನಮಸ್ಕಾರಕ್ರಮದಿಂದ ನಮಸ್ಕರಿಸಿ ಮತ್ತೆ ಶಿವನಿಗೆ ಪಂಚಾಂಗಕ್ರಮದಿಂದ ಒಂದುಸಾರಿ ನಮಸ್ಕಾರಮಾಡಿ ಮೇಲಕ್ಕೆ ಎದ್ದು ಪುನಃ ನಮಸ್ಕಾರವನ್ನು ಮಾಡಬೇಕು.

೨೩-೨೭. ಆಮೇಲೆ ನೀರಿನಲ್ಲಿ ಇಳಿದು, ಮುಳುಗಿ ಸ್ನಾನಮಾಡಬೇಕು. ಆ ಮಣ್ಣನ್ನು ಹೆಗಲಿನಮೇಲೆ ಇರಿಸಿಕೊಂಡು ಹಿಂದಿನ ರೀತಿಯಂತೆ ಮೃತ್ತಿಕಾಶೌಚವನ್ನು ಮಾಡಿಕೊಳ್ಳಬೇಕು. ಆ ಮಣ್ಣಿನಲ್ಲಿ ಉಳಿದದ್ದನ್ನು ತೆಗೆದುಕೊಂಡು ನೀರಿನ ಮಧ್ಯದಲ್ಲಿ ನಿಂತುಕೊಂಡು ಚೆನ್ನಾಗಿ ನೀರನ್ನು ಕದಡಿ ಆ ಮಣ್ಣನ್ನು ತನ್ನ ಎಲ್ಲಾ

ತತ್ರಾವಶಿಷ್ಟಂ ಸಂಗೃಹ್ಯ ಜಲಮಧ್ಯೇ ಪ್ರವಿಶ್ಯ ಚ ।
ವಿಲೋಡ್ಯ ಸಮ್ಯಕ್ತ್ರಾಂ ತತ್ರ ಸರ್ವಾಂಗೇಷು ವಿಲಿಪ್ಯ ಚ ॥ ೨೪ ॥

ತ್ರಿವಾರಮೋಮಿತಿ ಪ್ರೋಚ್ಯ ಶಿವಪಾದಾಂಬುಜಂ ಸ್ಮರನ್ ।
ಸಂಸಾರಾಂಬುಧಿಸಂತಾರಂ ಸದಾ ಯದ್ವಿಧಿತೋ ಹಿ ಸಃ ॥ ೨೫ ॥

ಅಭಿಷಿಚ್ಯೋಮಿತಿ ಜಲಂ ವಿರಜಾಭಸ್ಮಲೋಲಿತಂ ।
ಅಂಗೋಪಮಾರ್ಜನಂ ಕೃತ್ವಾ ಸುಸ್ನಾಯಾದ್ಭಸ್ಮನಾ ತತಃ ॥ ೨೬ ॥

ತ್ರಿಪುಂಡ್ರಂ ಚ ವಿಧಾಯಾಥ ಯಥೋಕ್ತವಿಧಿನಾ ಶುಭಂ ।
ಯಥೋಕ್ತಾಂಗೇಷು ಸರ್ವೇಷು ಸಾವಧಾನತಯಾ ಮುನೇ ॥ ೨೭ ॥

ತತಶ್ಶುದ್ಧಮನಾ ಭೂತ್ವಾ ಕುರ್ಯಾನ್ಮಧ್ಯದಿನಕ್ರಿಯಾಃ ।
ಮಹೇಶ್ವರಂ ನಮಸ್ಕೃತ್ಯ ಗುರೂಂಸ್ತೀರ್ಥಾದಿಕಾನಿ ಚ ॥ ೨೮ ॥

ಸಂಪೂಜಯೇನ್ಮಹೇಶಾನಂ ಭಕ್ತ್ಯಾ ಪರಮಯಾ ಮುನೇ ।
ಸಾಂಬಿಕಂ ಜ್ಞಾನದಾತಾರಂ ಪಾತಾರಂ ತ್ರಿಭವಸ್ಯ ನೃಣಾಂ ॥ ೨೯ ॥

---

ಅಂಗಗಳಿಗೂ ಲೇಪಮಾಡಿಕೊಂಡು, ಮೂರುಸಾರಿ ಪ್ರಣವಮಂತ್ರವನ್ನು ಹೇಳಿ, ಸಂಸಾರಸಮುದ್ರವನ್ನು ದಾಟಿಸುವುದರಲ್ಲಿ ಸಮರ್ಥನಾಗಿರುವ ಆ ಶಿವನ ಪಾದಕಮಲಗಳನ್ನು ಸ್ಮರಿಸುತ್ತಾ ಸ್ನಾನವನ್ನು ಮಾಡಬೇಕು. ಅನಂತರ ವಿರಜಾಹೋಮದ ಭಸ್ಮವನ್ನು ತೆಗೆದುಕೊಂಡು ಪ್ರಣವಮಂತ್ರದಿಂದ ಅದಕ್ಕೆ ನೀರನ್ನು ಹಾಕಿ ಕಲಸಿ ಆ ಭಸ್ಮದಿಂದ ತನ್ನ ಅಂಗಗಳಿಗೆಲ್ಲಕ್ಕೂ ಲೇಪನಮಾಡಿಕೊಂಡು ಭಸ್ಮಸ್ನಾನವನ್ನು ಮಾಡಿದನಂತರ ಶಾಸ್ತ್ರದಲ್ಲಿ ಹೇಳಿರುವ ಕ್ರಮದಂತೆ ಆಯಾಯ ಅಂಗಗಳಿಗೆ ತ್ರಿಪುಂಡ್ರಧಾರಣೆಯನ್ನು ಸಾವಧಾನವಾಗಿ ಮಾಡಬೇಕು.

೨೮-೩೦. ಎಲೈ ವಾಮದೇವಮುನಿಯೇ ಕೇಳು. ಅನಂತರ ಮಧ್ಯಾಹ್ನದ ಆಹ್ನಿಕಗಳೆಲ್ಲವನ್ನೂ ಮಾಡಿಕೊಂಡು ಮಹೇಶ್ವರನಿಗೆ ನಮಸ್ಕಾರಮಾಡಿ ಗುರುವನ್ನೂ ತೀರ್ಥವನ್ನೂ ನಮಸ್ಕರಿಸಬೇಕು. ಉತ್ತಮವಾದ ಭಕ್ತಿಯಿಂದ ಮಹೇಶ್ವರನನ್ನು ಪೂಜಿಸಬೇಕು. ಜಗನ್ಮಾತೆಯೊಡನೆ ಇರುವವನಾಗಿಯೂ, ಜ್ಞಾನವನ್ನು ಕೊಡುವವನಾಗಿಯೂ, ಭೂತಭವಿಷ್ಯದ್ವರ್ತಮಾನಕಾಲದ ಜನ್ಮಗಳೆಲ್ಲವನ್ನೂ ರಕ್ಷಿಸುವವನಾಗಿಯೂ ಇರುವ ಪಾರ್ವತೀಸಹಿತನಾದ ಆ ಮಹೇಶ್ವರನ ಪೂಜೆಯನ್ನು ಭಕ್ತಿ

ತತೋಽಸೌ ದೃಢಚೇತಸ್ಕೋ ಯತಿಃ ಸ್ವಪ್ನಷಸಂಸ್ಥಿತಃ ।
ಭಿಕ್ಷಾರ್ಥಂ ಪ್ರವ್ರಜೇಚ್ಛುದ್ಧೋ ವಿಪ್ರವರ್ಗೇಷು ಸಾಧುಷು ॥ ೩೦ ॥

ತತಸ್ತತ್ರ ಚ ಶುದ್ಧಾತ್ಮಾ ಪಂಚಧಾ ಪರಿಕಲ್ಪಿತಂ ।
ಭಕ್ಷ್ಯಂ ಯಥೋಚಿತಂ ಕುರ್ಯಾದ್ದೂಷಿತಾನ್ನಂ ವಿವರ್ಜಯೇತ್ ॥ ೩೧ ॥

ಶೌಚಸ್ನಾನಂ ತಥಾ ಭಿಕ್ಷಾಂ ನಿತ್ಯಮೇಕಾಂತಸೇವನಂ ।
ಭಿಕ್ಷೋಶ್ಚತ್ವಾರಿ ಕರ್ಮಾಣಿ ಪಂಚಮಂ ನೈವ ವಿದ್ಯತೇ ॥ ೩೨ ॥

ಅಲಾಬುಂ ವೇಣುಪಾತ್ರಂ ಚ ದಾರವಂ ಮೃಣ್ಮಯಂ ತಥಾ ।
ಭಿಕ್ಷೋಶ್ಚತ್ವಾರಿ ಪಾತ್ರಾಣಿ ಪಂಚಮಂ ನೈವ ವಿದ್ಯತೇ ॥ ೩೩ ॥

ತಾಂಬೂಲಂ ತೈಜಸಂ ಪಾತ್ರಂ ರೇತಸ್ಸೇಕಂ ಸಿತಾಂಬರಂ ।
ದಿವಾಸ್ವಾಪೋ ಹಿ ನಕ್ತಾನ್ನಂ ಯತೀನಾಂ ಷಡ್ವಿವರ್ಜಿತಾಃ ॥ ೩೪ ॥

ಸಾಕ್ಷರಾ ವಿಪರೀತಾಶ್ಚ ರಾಕ್ಷಸಾಸ್ತ ಇತಿ ಸ್ಮೃತಾಃ ।
ತಸ್ಮಾದ್ವೈ ವಿಪರೀತಂ ಚ ಕರ್ಮ ನೈವಾಚರೇದ್ಯತಿಃ ॥ ೩೫ ॥

---

ಯಿಂದ ಮಾಡಬೇಕು. ಅನಂತರದಲ್ಲಿ ಈ ಯತಿಯು ದೃಢವಾದ ಮನಸ್ಸುಳ್ಳವನಾಗಿ, ಸತ್ಪುರುಷರಾದ ಬ್ರಾಹ್ಮಣರ ಮನೆಗೆ ಭಿಕ್ಷಕ್ಕಾಗಿ ಹೋಗಬೇಕು.

೩೧-೩೩. ಭಿಕ್ಷಕ್ಕೆ ಹೋದಸ್ಥಳದಲ್ಲಿ ತನಗೆ ಯೋಗ್ಯವಾಗುವ ರೀತಿಯಿಂದ ಪರಿಶುದ್ಧವಾಗಿ ಸಿದ್ಧಪಡಿಸಿರುವ ಪಂಚಭಕ್ಷ್ಯಗಳನ್ನು ಸ್ವೀಕರಿಸಬೇಕು. ಶಾಸ್ತ್ರದಲ್ಲಿ ನಿಂದ್ಯವಾಗಿರುವದನ್ನು ತ್ಯಾಗಮಾಡಬೇಕು. ಯತಿಗೆ ಮೃತ್ತಿಕಾಶೌಚ, ಸ್ನಾನ, ಭಿಕ್ಷಾ, ಯಾವಾಗಲೂ ರಹಸ್ಯವಾದಸ್ಥಳದಲ್ಲಿ ವಾಸ. ಈ ನಾಲ್ಕು ಕರ್ಮಗಳು ಶಾಸ್ತ್ರದಲ್ಲಿ ಹೇಳಿರುವುದೇ ಹೊರತು ಐದನೆಯ ಕಾರ್ಯವು ಯಾವದೂ ಇರುವದಿಲ್ಲ. ಸೋರೆಯಬುರುಡೆ, ಬಿದಿರಿನ ಪಾತ್ರೆ, ಮರದ ಪಾತ್ರೆ, ಮಣ್ಣಿನ ಪಾತ್ರೆ [ಗಡಿಗೆ]. ಈ ನಾಲ್ಕು ಪದಾರ್ಥಗಳನ್ನು ಯತಿಯು ಉಪಯೋಗಿಸಬೇಕೆಂದು ಶಾಸ್ತ್ರದಲ್ಲಿ ಹೇಳಿರುವವು. ಇದಕ್ಕಿಂತಲೂ ಬೇರೆಯ ಐದನೆಯ ಪದಾರ್ಥವನ್ನು ಯತಿಯು ಇರಿಸಿಕೊಳ್ಳಕೂಡದು.

೩೪-೩೬. ಯತಿಗಳಾದವರು ತಾಂಬೂಲ, ಚಿನ್ನದಪಾತ್ರೆ, ರೇತಸ್ಸೇಚನ [ಸಂಭೋಗ] ಬಿಳಿಯವಸ್ತ್ರ, ಹಗಲು ನಿದ್ದೆಮಾಡುವದು, ರಾತ್ರಿ ಊಟಮಾಡುವದು

ಯತಿಃ ಪ್ರಯತ್ನತಃ ಕುರ್ಯಾತ್ಕ್ಷೌರಸ್ನಾನಂ ಚ ಶುದ್ಧಯೇ ।
ಸಂಸ್ಮರನ್ಮನಸಾ ಶುದ್ಧಂ ಪರಂ ಬ್ರಹ್ಮ ಸದಾಶಿವಂ ॥ ೩೬ ॥

ಇತ್ಯೇವಂ ಮುನಿಶಾರ್ದೂಲ ತವ ಸ್ನೇಹಾನ್ಮಯಾಖಿಲಃ ।
ಕ್ಷೌರಸ್ನಾನವಿಧಿಃ ಪ್ರೋಕ್ತಃ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೩೭ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಕ್ಷೌರಸ್ನಾನವಿಧಿವರ್ಣನಂ ನಾಮ ವಿಂಶೋಽಧ್ಯಾಯಃ

---

ಈ ಆರನ್ನೂ ತ್ಯಾಗಮಾಡಬೇಕು. ಈಗ ಹೇಳಿರುವದನ್ನು ತ್ಯಾಗ ಮಾಡದೇ ಇರುವವರು, ವಿದ್ಯಾವಂತರಾಗಿದ್ದಾಗ್ಯೂ, ಅವರು ರಾಕ್ಷಸರೆಂದು ಹೇಳಿಸಿಕೊಳ್ಳುವರು. ಆದ್ದರಿಂದ ಈಗ ನಾನು ಹೇಳಿರುವದಕ್ಕೆ ಕೊಂಚವೂ ವ್ಯತ್ಯಾಸವಾಗದಂತೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಯತಿಯು ಪ್ರಯತ್ನಪೂರ್ವಕವಾಗಿ ತನ್ನ ದೇಹ ಶುದ್ಧಿಗಾಗಿ ಕ್ಷೌರವನ್ನು ಶಾಸ್ತ್ರಕ್ರಮದಂತೆ ಮಾಡಿಸಿಕೊಂಡು ಸ್ನಾನಾದಿಗಳನ್ನು ಮಾಡಬೇಕು. ಆ ಕಾಲದಲ್ಲಿ ಶುದ್ಧನೂ ಪರಬ್ರಹ್ಮಸ್ವರೂಪನೂ ಆದ ಸದಾಶಿವನನ್ನು ಧ್ಯಾನಮಾಡುತ್ತಾ ಸ್ನಾನಾದಿಕರ್ಮಗಳನ್ನು ಮಾಡಬೇಕು.

೩೭. ಎಲೈ ಮುನಿಶ್ರೇಷ್ಠನಾದ ವಾಮದೇವನೇ, ನಿನ್ನಲ್ಲಿರುವ ಸ್ನೇಹದಿಂದ ನಾನು ಯತಿಗಳು ಆಚರಿಸಬೇಕಾದ ಕ್ಷೌರಸ್ನಾನದ ವಿಧಿಯೆಲ್ಲವನ್ನೂ ಹೇಳಿರುವೆನು. ಮತ್ತೇನನ್ನ ಕೇಳಬೇಕೆಂದಿರುವೆ? ಕೇಳು, ಹೇಳುವೆನು ಎಂದನು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಯತಿಗಳು
ಆಚರಿಸಬೇಕಾದ ಕ್ಷೌರಸ್ನಾನವಿಧಿವರ್ಣವೆಂಬ ಇಪ್ಪ
ತ್ತನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೈಲಾಸಸಂಹಿತಾಯಾಂ

## ಏಕವಿಂಶೋಽಧ್ಯಾಯಃ



॥ ವಾಮದೇವ ಉವಾಚ ॥

ಯೇ ಮುಕ್ತಾ ಯತಯಸ್ತೇಷಾಂ ದಾಹಕರ್ಮ ನ ವಿದ್ಯತೇ ।
ಮೃತೇ ಶರೀರೇ ಖನನಂ ತದ್ದೇಹಸ್ಯ ಶ್ರುತಂ ಮಯಾ ॥ ೧ ॥

ತತ್ಕರ್ಮಾಚಕ್ಷ್ವ ಸುಪ್ರೀತ್ಯಾ ಕಾರ್ತಿಕೇಯ ಗುರೋ ಮಮ ।
ತ್ವತ್ತೋಽನ್ಯೋ ನ ಹಿ ಸಂವಕ್ತಾ ತ್ರಿಷು ಲೋಕೇಷು ವಿದ್ಯತೇ ॥ ೨ ॥

ಪೂರ್ಣಾಹಂಭಾವಮಾಶ್ರಿತ್ಯ ಯೇ ಮುಕ್ತಾ ದೇಹಪಂಜರಾತ್ ।
ಯೇ ತೂಪಾಸನಮಾರ್ಗೇಣ ದೇಹಮುಕ್ತಾಃ ಪರಂ ಗತಾಃ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯವು

೧-೨. ವಾಮದೇವಋಷಿಯು ಪ್ರಶ್ನೆ ಮಾಡುವನು—ಯತಿಗಳು ಶರೀರವನ್ನು ತ್ಯಾಗಮಾಡಿದಾಗ ಅವರಿಗೆ ದಹನಕರ್ಮವು ಇರುವದಿಲ್ಲವಷ್ಟೆ. ಅವರು ಮೃತರಾದರೆ ಅವರ ಶರೀರವನ್ನು ಭೂಮಿಯಲ್ಲಿ ಹೂಳುವರೆಂದು ನಾನು ಕೇಳಿರುವೆನು. ಎಲೈ ಗುರುವಾದ ಕಾರ್ತಿಕೇಯನೇ, ಪ್ರೀತಿಯಿಂದ ನನಗೆ ಯತಿಗಳ ಶರೀರಸಂಸ್ಕಾರದ ಕ್ರಮವನ್ನು ಹೇಳು. ಮೂರು ಲೋಕಗಳಲ್ಲಿಯೂ, ನಿನ್ನನ್ನು ಬಿಟ್ಟರೆ ಸರಿಯಾಗಿ ಹೇಳುವವನು ಮತ್ತೊಬ್ಬನಿಲ್ಲ.

೩-೪. ಎಲೈ ಶಿವಕುಮಾರನಾದ ಷಣ್ಮುಖನೇ, ಯಾರು ಬ್ರಹ್ಮಾಹಂಭಾವೆವನ್ನು ಸಂಪೂರ್ಣವಾಗಿ ಹೊಂದಿ ದೇಹದಿಂದ ಮುಕ್ತರಾಗುವರೋ ಯಾರು ಉಪಾಸ

ತೇಷಾಂ ಗತಿವಿಶೇಷಂ ಚ ಭಗವಞ್ಛಂಕರಾತ್ಮಜ ।
ವಕ್ತುಮರ್ಹಸಿ ಸುಪ್ರೀತ್ಯಾ ಮಾಂ ವಿಚಾರ್ಯ ಸ್ವಶಿಷ್ಯತಃ ॥ ೪ ॥

॥ ಸೂತ ಉವಾಚ ॥
ಮುನಿವಿಜ್ಞಪ್ತಿಮಾಕರ್ಣ್ಯ ಶಕ್ತಿಪುತ್ರಸ್ಸುರಾರಿಹಾ ।
ಪ್ರಾಹಾತ್ಯಂತರಹಸ್ಯಂ ತದ್ಭೃಗುಣಾ ಶ್ರುತಮೀಶ್ವರಾತ್ ॥ ೫ ॥

॥ ಸುಬ್ರಹ್ಮಣ್ಯ ಉವಾಚ ॥
ಇದಮೇವ ಮುನೇ ಗುಹ್ಯಂ ಭೃಗವೇ ಶಿವಯೋಗಿನೇ ।
ಉಕ್ತಂ ಭಗವತಾ ಸಾಕ್ಷಾತ್ಸರ್ವಜ್ಞೇನ ಪಿನಾಕಿನಾ ॥ ೬ ॥

ವಕ್ಷ್ಯೇ ತವಾದ್ಯ ತೇ ಬ್ರಹ್ಮನ್ನ ದೇಯಂ ಯಸ್ಯ ಕಸ್ಯಚಿತ್ ।
ದೇಯಂ ಶಿಷ್ಯಾಯ ಶಾಂತಾಯ ಶಿವಭಕ್ತಿಯುತಾಯ ವೈ ॥ ೭ ॥

---

ನಾಮಾರ್ಗವನ್ನು ಅನುಸರಿಸಿ ದೇಹದಿಂದ ಮುಕ್ತರಾಗಿ ಪರಲೋಕವನ್ನು ಹೊಂದು ವರೋ ಅವರಿಬ್ಬರಿಗೂ ಉಂಟಾಗುವ ಗತಿಯನ್ನು ಹೇಳು. ನನ್ನನ್ನು ನಿನ್ನ ಶಿಷ್ಯ ನೆಂದು ತಿಳಿದು ಆ ಅಭಿಮಾನದಿಂದ ಇದೆಲ್ಲವನ್ನೂ ವಿಶದವಾಗಿ ಹೇಳಬೇಕೆಂದು ಪ್ರಾರ್ಥಿಸಿದನು.

೫. ಸೂತಪುರಾಣಿಕನಿಂತೆಂದನು.— ದೇವಶತ್ರುಗಳಾದ ದೈತ್ಯರನ್ನು ಸಂಹಾ ರಮಾಡುವವನೂ, ಶಕ್ತಿಪುತ್ರನೂ ಆದ ಷಣ್ಮುಖನು, ವಾಮದೇವಮುನಿಯು ಈ ರೀತಿ ವಿಜ್ಞಾಪನೆಯನ್ನು ಮಾಡಿಕೊಂಡದ್ದನ್ನು ಕೇಳಿ, ಶಿವನ ದೆಸೆಯಿಂದ ಹಿಂದೆ ಭೃಗುಮಹರ್ಷಿಯು ವಿಚಾರಮಾಡಿ ತಿಳಿದುಕೊಂಡ ರಹಸ್ಯವಾದ ಈ ವಿಷಯವನ್ನು ವಿವರಿಸಿ ಹೇಳಿದನು.

೬-೭. ಸುಬ್ರಹ್ಮಣ್ಯನಿಂತೆಂದನು.— ಎಲೈ ವಾಮದೇವಮುನಿಯೇ ಕೇಳು. ಸರ್ವಜ್ಞನೂ, ಪಿನಾಕಧಾರಿಯೂ ಆದ ಸಾಕ್ಷಾಚ್ಛಿವನೇ ಶಿವಯೋಗಿಯಾದ ಭೃಗು ಮಹರ್ಷಿಗೆ ಹಿಂದೆ ಈ ವಿಷಯವನ್ನು ಉಪದೇಶಮಾಡಿರುವನು. ಅದನ್ನೇ ನಾನು ನಿನಗೆ ಹೇಳುವೆನು. ನೀನು ಇದನ್ನು ಯಾರಿಗೂ ಹೇಳಬಾರದು. ಶಿವನಲ್ಲಿ ಭಕ್ತಿ ಯುಳ್ಳವನೂ ಉಪಶಾಂತನೂ ಆದ ಶಿಷ್ಯನಿಗೆ ಮಾತ್ರ ಇದನ್ನು ಉಪದೇಶಮಾಡ ಬಹುದು.

ಸಮಾಧಿಸ್ಥೋ ಯತಿಃ ಕಶ್ಚಿಚ್ಛಿವಭಾವೇನ ದೇಹಮುಕ್ ।
ಅಸ್ತಿ ಚೇತ್ಸ ಮಹಾಧೀರಃ ಪರಿಪೂರ್ಣಶ್ಶಿವೋ ಭವೇತ್ ॥ ೮ ॥

ಅಧೈರ್ಯಚಿತ್ತೋ ಯಃ ಕಶ್ಚಿತ್ಸಮಾಧಿಂ ನ ಚ ವಿಂದತಿ ।
ತದುಪಾಯಂ ಪ್ರವಕ್ಷ್ಯಾಮಿ ಸಾವಧಾನತಯಾ ಶೃಣು ॥ ೯ ॥

ತ್ರಿಪದಾರ್ಥಪರಿಜ್ಞಾನಂ ವೇದಾಂತಾಗಮವಾಕ್ಯಜಂ ।
ಶ್ರುತ್ವಾ ಗುರೋರ್ಮುಖಾದ್ಯೋಗಮಭ್ಯಸೇತ್ಸ ಯಮಾದಿಕಂ ॥ ೧೦ ॥

ತತ್ಕುರ್ವನ್ಸ ಯತಿಸ್ಸಮ್ಯಕ್ಶಿವಧ್ಯಾನಪರೋ ಭವೇತ್ ।
ನಿಯಮೇನ ಮುನೇ ನಿತ್ಯಂ ಪ್ರಣವಾಸಕ್ತಮಾನಸಃ ॥ ೧೧ ॥

ದೇಹದೌರ್ಬಲ್ಯವಶತೋ ಯದ್ಯಧೈರ್ಯಧರೋ ಯತಿಃ ।
ಅಕಾಮಶ್ಚ ಶಿವಂ ಸ್ಮೃತ್ವಾ ಸ ಜೀರ್ಣಾಂ ಸ್ವಾಂ ತನುಂ ತ್ಯಜೇತ್ ॥ ೧೨ ॥

---

೮-೯. ಯತಿಯಾದವನು ಶಿವಭಾವದಿಂದ ಇದ್ದುಕೊಂಡು, ಸಮಾಧಿಯಲ್ಲಿರುವಾಗ ಶರೀರವನ್ನು ತ್ಯಾಗಮಾಡುವದಾದರೆ ಅವನು ಬಹಳ ಧೀರನೆನಿಸಿಕೊಳ್ಳುವದಲ್ಲದೆ ಸಂಪೂರ್ಣವಾದ ಶಿವಭಾವವನ್ನು ಹೊಂದುವನು. ಧೈರ್ಯವಿಲ್ಲದಿರುವ ಮನಸ್ಸುಳ್ಳವನು ಸಮಾಧಿಯನ್ನು ಹೊಂದಲಸಮರ್ಥನಾದರೆ ಅವನಿಗೆ ತಕ್ಕ ಉಪಾಯವನ್ನು ಹೇಳುವೆನು. ಸಮಾಧಾನ ಮನಸ್ಸಿನಿಂದ ಕೇಳು.

೧೦-೧೧. ಅವನು ಗುರುವಿನಿಂದ ಪಶು, ಪಾಶ, ಪತಿ ಎಂಬ ಮೂರು ಪದಾರ್ಥಗಳ ವಿಷಯವಾಗಿ ಶಾಸ್ತ್ರಗಳೂ, ಆಗಮಗಳೂ ಇವುಗಳಲ್ಲಿ ಹೇಳುವ ಪ್ರಕಾರ ತತ್ತ್ವವನ್ನು ವಿಮರ್ಶೆಮಾಡಿ ತಿಳಿದುಕೊಳ್ಳಬೇಕು. ಯಮವೇ ಮೊಲಾದ ಯೋಗಾಂಗಗಳ ಮೂಲಕ ಯೋಗವನ್ನು ಅಭ್ಯಾಸಮಾಡಬೇಕು. ಆ ಪ್ರಕಾರವಾಗಿ ಯೋಗಾಭ್ಯಾಸವನ್ನು ಮಾಡುತ್ತಾ ಆ ಯತಿಯು ಶಿವನನ್ನು ಧ್ಯಾನಮಾಡುವದರಲ್ಲಿ ಆಸಕ್ತನಾಗಬೇಕು. ಎಲೈ ಮುನಿಯೇ ಕೇಳು, ಅವನು ಪ್ರತಿದಿನವೂ ಪ್ರಣವಮಂತ್ರವನ್ನು ಜಪಮಾಡುವದರಲ್ಲಿ ಆಸಕ್ತನಾಗಿದ್ದರೆ ಕ್ರಮವಾಗಿ ಸಮಾಧಿಯನ್ನು ಹೊಂದುವನು.

೧೨. ಯತಿಯು ತನ್ನ ಶರೀರದ ಅಶಕ್ತತೆಯಿಂದ ಧೈರ್ಯವಿಲ್ಲದವನಾಗಿ ಯಾವ ವಿಧವಾದ ಇಚ್ಛೆಯೂ ಇಲ್ಲದಿದ್ದರೆ ಶಿವನನ್ನು ಧ್ಯಾನಮಾಡುತ್ತಾ [ಜೀರ್ಣ] ಮುಪ್ಪಿನಿಂದ ಕೂಡಿದ ತನ್ನ ಜೀರ್ಣವಾದ ಶರೀರವನ್ನು ಬಿಡಬೇಕು.

ಸದಾಶಿವಾನುಗ್ರಹತೋ ನಂದಿನಾ ಪ್ರೇರಿತಾ ಮುನೇ ।
ಆತಿವಾಹಿಕರೂಪಿಣ್ಯೋ ದೇವತಾಃ ಪಂಚ ವಿಶ್ರುತಾಃ ॥ ೧೩ ॥

ಆತ್ಮಹಂತಾಕೃತಿಃ ಕಾಚಿಜ್ಜ್ಯೋತಿಃ ಪುಂಜವಪುಷ್ಮತೀ ।
ಅಹ್ನೋಽಭಿಮಾನಿನೀ ಕಾಚಿಚ್ಛುಕ್ಲಪಕ್ಷಾಭಿಮಾನಿನೀ ॥ ೧೪ ॥

ಉತ್ತರಾಯಣರೂಪಾ ಚ ಪಂಚಾನುಗ್ರಹತತ್ಪರಾ ।
ಧೂಮ್ರಾ ತಪಸ್ವಿನೀ ರಾತ್ರಿಃ ಕೃಷ್ಣಪಕ್ಷಾಭಿಮಾನಿನೀ ॥ ೧೫ ॥

ದಕ್ಷಿಣಾಯನರೂಪೇತಿ ವಿಶ್ರುತಾಃ ಪಂಚ ದೇವತಾಃ ।
ತಾಸಾಂ ವೃತ್ತಿಂ ಶೃಣುಷ್ವಾದ್ಯ ವಾಮದೇವ ಮಹಾಮುನೇ ॥ ೧೬ ॥

ತಾಃ ಪಂಚದೇವತಾ ಜೀವಾನ್ಸ್ವಮಾರ್ಗಾನುಷ್ಠಾನತತ್ಪರಾನ್ ।
ಗೃಹೀತ್ವಾ ತ್ರಿದಿವಂ ಯಾಂತಿ ತತ್ಪುಣ್ಯವಶತೋ ಮುನೇ ॥ ೧೭ ॥

---

೧೩-೧೬. ಈ ಪ್ರಕಾರದಿಂದ ಶರೀರವನ್ನು ಯತಿಯು, ಸದಾಶಿವನ ಅನುಗ್ರಹದಿಂದ ಉತ್ತಮಗತಿಯನ್ನು ಹೊಂದುವ ಅರ್ಚಿರಾದಿಮಾರ್ಗವೆಂಬ ವಿಧಾನವನ್ನು ಹೇಳುವೆನು, ಕೇಳು. ನಂದಿಯಿಂದ ಪ್ರೇರಿಸಲ್ಪಟ್ಟ ಆತಿವಾಹಿಕರೂಪವನ್ನು ಹೊಂದಿರುವಐದುಜನ ಪ್ರಸಿದ್ಧರಾದ ದೇವತೆಗಳು ಇರುವರು. ಅವರಲ್ಲಿ ಒಬ್ಬಳು ಆತ್ಮನ ಅಹಂಕಾರರೂಪದಿಂದ ಇರುವಳು. ಇನ್ನೊಬ್ಬಳು ತೇಜಸ್ಸಿನ ಸಮೂಹದಂತೆ ಶರೀರವನ್ನು ಹೊಂದಿರುವಳು. ಹಗಲಿಗೆ ಅಭಿಮಾನಿಯಾದವಳು ಒಬ್ಬಳು. ಇನ್ನೊಬ್ಬಳು ಶುಕ್ಲಪಕ್ಷಕ್ಕೆ ಅಭಿಮಾನಿಯಾದವಳು. ಮತ್ತೊಬ್ಬಳು ಉತ್ತರಾಯಣರೂಪದಿಂದ ಇರುವಳು. ಈ ಐದು ಜನರೂ ಜೀವರನ್ನು ಅರ್ಚಿರಾದಿಮಾರ್ಗದಿಂದ ಸ್ವರ್ಗಕ್ಕೆ ಕರೆದುಕೊಂಡುಹೋಗುವರು. ಇನ್ನು ಧೂಮ್ರಾದಿಗತಿಯನ್ನು ಹೇಳುವೆನು. ಧೂಮ್ರ, ತಮಸ್ವಿನೀ, ರಾತ್ರಿ ಕೃಷ್ಣಪಕ್ಷಕ್ಕೆ ಅಭಿಮಾನಿಯಾದ ದೇವತೆ. ದಕ್ಷಿಣಾಯನರೂಪದಿಂದ ಇರುವವಳು ಎಂದು ಬೇರೆ ಐದುಜನ ದೇವತೆಗಳು ಇರುವರು. ಇವರು ಧೂಮ್ರಾದಿಮಾರ್ಗದಿಂದ ಜೀವರನ್ನು ಸ್ವರ್ಗಕ್ಕೆ ಕರೆದೊಯ್ಯುವರು.

೧೭-೧೮. ಆ ದೇವತೆಗಳು ಕರ್ಮವನ್ನು ಕ್ರಮವಾಗಿ ನಡೆಸುವ ಜೀವರನ್ನು ಅವರವರ ಪುಣ್ಯಕ್ಕೆ ಅನುಸಾರವಾಗಿ ಕರೆದುಕೊಂಡುಹೋಗಿ ಸ್ವರ್ಗಕ್ಕೆ ಬಿಡುವರು.

ಭುಕ್ತ್ವಾ ಭೋಗಾನ್ಯಥೋಕ್ತಾಂಶ್ಚ ತೇ ತತ್ಪುಣ್ಯಕ್ಷಯೇ ಪುನಃ ।
ಮಾನುಷಂ ಲೋಕಮಾಸಾದ್ಯ ಭಜತೇ ಜನ್ಮ ಪೂರ್ವವತ್ ॥ ೧೮ ॥

ತಾಃ ಪುನಃ ಪಂಚಧಾ ಮಾರ್ಗಂ ವಿಭಜ್ಯಾರಭ್ಯ ಭೂತಲಂ ।
ಅಗ್ನ್ಯಾದಿಕ್ರಮತಾಂ ಗೃಹ್ಯ ಸದಾಶಿವಪದಂ ಯತಿಃ ॥ ೧೯ ॥

ನಿನೀಯ ವಂದ್ಯಚರಣೌ ದೇವದೇವಸ್ಯ ಪೃಷ್ಠತಃ ।
ತಿಷ್ಠಂತ್ಯನುಗ್ರಹಾಕಾರಾಃ ಕರ್ಮಣ್ಯೇವ ಪ್ರಯೋಜಿತಾಃ ॥ ೨೦ ॥

ಸಮಾಗತಮಭಿಪ್ರೇಕ್ಷ್ಯ ದೇವದೇವಸ್ಸದಾಶಿವಃ ।
ವಿರಕ್ತಶ್ಚೇನ್ಮಹಾಮಂತ್ರತಾತ್ಪರ್ಯಮುಪದಿಶ್ಯ ಚ ॥ ೨೧ ॥

ಸ್ವಸಾಮ್ಯಂ ಚ ವಪುರ್ದತ್ತ್ವಾ ಗಾಣಪತ್ಯೇಽಭಿಷಿಚ್ಯ ಚ ।
ಅನುಗೃಹ್ಣಾತಿ ಸರ್ವೇಶಶ್ಶಂಕರಃ ಸರ್ವನಾಯಕಃ ॥ ೨೨ ॥

---

ಅವರು ಅಲ್ಲಿ ಶಾಸ್ತ್ರದಲ್ಲಿ ಹೇಳಿರುವಂತೆ ಭೋಗಗಳನ್ನು ಅನುಭವಿಸಿ ಅವರ ಪುಣ್ಯವು ಮುಗಿದನಂತರ ಮಾನುಷ್ಯಲೋಕವನ್ನು ಹೊಂದಿ ಹಿಂದಿನಂತೆಯೇ ಜನ್ಮವನ್ನೆತ್ತುವರು.

೧೯-೨೦. ಆ ದೇವತೆಗಳು ಭೂಮಿಯನ್ನು ಪ್ರಾರಂಭಿಸಿ ಮಾರ್ಗಗಳನ್ನು ವಿಂಗಡಿಸಿ ಅಗ್ನಿಯೇ ಮೊದಲಾದ ಕ್ರಮವನ್ನು ಅನುಸರಿಸಿ ಯತಿಯನ್ನು ಕರೆದುಕೊಂಡು ಹೋಗಿ ಸದಾಶಿವನ ಸ್ಥಾನವನ್ನು ತಲುಪಿಸಿ, ದೇವದೇವನಾದ ಸದಾಶಿವನ ಪಾದಗಳಿಗೆ ನಮಸ್ಕರಿಸಿ, ತಮ್ಮತಮ್ಮ ಕೆಲಸಗಳಲ್ಲಿ ನಿಯಮಿಸಲ್ಪಟ್ಟವರಾದ ಕಾರಣ ಇತರರಿಗೆ ಅನುಗ್ರಹವನ್ನು ಮಾಡುವ ಆಕಾರವನ್ನು ಧರಿಸಿ ದೇವನ ಹಿಂಭಾಗದಲ್ಲಿರುವರು.

೨೧-೨೨. ಸಮಾಧಿಯಲ್ಲಿದ್ದು ಧೀರನಾಗಿ ಶರೀರವನ್ನು ಉತ್ತರಾಯಣವೇ ಮೊದಲಾದ ಕಾಲದ ಕ್ರಮದಿಂದ ತ್ಯಾಗಮಾಡಿದ ಯತಿಯು ಬಂದಿರುವದನ್ನು ದೇವದೇವನಾದ ಸದಾಶಿವನು ತಿಳಿದು ಅವನು, ವಿರಕ್ತನಾಗಿದ್ದಲ್ಲಿ ಅವನಿಗೆ ಮಹಾಮಂತ್ರದ ತಾತ್ಪರ್ಯವನ್ನು ಉಪದೇಶಮಾಡಿ ತನಗೆ ಸಮನಾಗಿರುವ ಶರೀರವನ್ನು ಅವನಿಗೆ ಕೊಡುವನು. ಅನಂತರ ಅವನನ್ನು ಗಣಗಳಿಗೆ ಅಧಿಪತಿಯೆಂಬ ಅಧಿಕಾರದಲ್ಲಿ ಅಭಿಷೇಕಮಾಡುವನು. ಎಲ್ಲರಿಗೂ ಅಧಿಪನಾದ ಶಂಕರನು ಅವನಿಗೆ ಈರೀತಿ ಅನುಗ್ರಹವನ್ನು ಮಾಡುವನು.

ಮೃಗಟಂಕತ್ರಿಶೂಲಾಗ್ರ್ಯವರದಾನವಿಭೂಷಿತಂ ।
ತ್ರಿನೇತ್ರಂ ಚಂದ್ರಶಕಲಂ ಗಂಗೋಲ್ಲಾಸಿಜಟಾಧರಂ ॥ ೨೩ ॥

ಅಧಿಷ್ಠಿತವಿಮಾನಾಗ್ರ್ಯಂ ಸರ್ವದಂ ಸರ್ವಕಾಮದಂ ।
ಇತಿ ಶಾಖಾವಿರಕ್ತಶ್ಚೇದ್ರುದ್ರಕನ್ಯಾಸಮಾವೃತಂ ॥ ೨೪ ॥

ನೃತ್ಯಗೀತಮೃದಂಗಾದಿವಾದ್ಯಘೋಷಮನೋಹರಂ ।
ದಿವ್ಯಾಂಬರಸ್ರಗಾಲೇಪಭೂಷಣೈರಪಿ ಭೂಷಿತಂ ॥ ೨೫ ॥

ದಿವ್ಯಾಮೃತಘಟ್ಯೈಃ ಪೂರ್ಣಂ ದಿವ್ಯಾಂಭಃಪರಿಪೂರಿತಂ ।
ಸೂರ್ಯಕೋಟಿಪ್ರತೀಕಾಶಂ ಚಂದ್ರಕೋಟಿಸುಶೀತಲಂ ॥ ೨೬ ॥

ಮನೋವೇಗಂ ಸರ್ವಗಂ ಚ ವಿಮಾನಮನುಗೃಹ್ಯ ಚ ।
ಭುಕ್ತಭೋಗಸ್ಯ ತಸ್ಯಾಪಿ ಭೋಗಕೌತೂಹಲಕ್ಷಯೇ ॥ ೨೭ ॥

---

೨೩-೨೬. ಶಿವನು ವಿರಕ್ತನಾದ ಆ ಯತಿಗೆ ಉತ್ತಮವಾದ ವಿಮಾನವನ್ನು ಅನುಗ್ರಹಿಸುವನು. ಆ ವಿಮಾನದಲ್ಲಿ ಮೃಗ, ಟಂಕ, ತ್ರಿಶೂಲ, ವರದಾಭಯ ಹಸ್ತಗಳು, ತ್ರಿನೇತ್ರ, ಚಂದ್ರಶಕಲ, ಗಂಗೆಯಿಂದ ಕಂಗೊಳಿಸುತ್ತಿರುವ ಜಟೆ ಮುಂತಾದ ರುದ್ರಚಿಹ್ನೆಗಳಿಂದ ಭೂಷಿತರಾದ ರುದ್ರಕನ್ಯೆಯರು ಈ ಯತಿಯನ್ನು ಸೇವಿಸುವರು. ಆ ಕನ್ಯೆಯರು ದಿವ್ಯವಸ್ತ್ರಗಳನ್ನುಟ್ಟು, ಘಮಘಮಿಸುವ ಗಂಧವನ್ನು ಪೂಸಿಕೊಂಡು ಸರ್ವಾಭರಣಭೂಷಿತರಾಗಿ, ನಾನಾಬಗೆಯ ವಾದ್ಯಗಳನ್ನು ಮನೋಹರವಾಗಿ ಬಾರಿಸುತ್ತಾ ನೃತ್ಯಗೀತಾದಿಗಳಿಂದ ಆ ಯತಿಯನ್ನು ಸಂತೋಷಪಡಿಸುವರು. ಆ ವಿಮಾನದಲ್ಲಿ ದಿವ್ಯವಾದ ವಸ್ತ್ರಗಳೂ, ಸುಗಂಧ, ಹೂವು, ರತ್ನಾಭರಣಗಳು ಮೊದಲಾದ ಭೋಗಸಾಮಗ್ರಿಗಳು ಸಜ್ಜುಗೊಳಿಸಲ್ಪಟ್ಟಿರುವವು. ರತ್ನಕಲಶಗಳಲ್ಲಿ ಅಮೃತಕ್ಕೆ ಸಮನಾದ ಶೀತೋದಕವು ಇಡಲ್ಪಟ್ಟಿರುವದು. ಆ ವಿಮಾನವು ಕೋಟಿ ಸೂರ್ಯರ ಕಾಂತಿಗೆ ಮಿಗಿಲಾಗಿ ಬೆಳಗುತ್ತಿರುವದು. ಆದರೂ ಕೋಟಿಚಂದ್ರರ ಕಾಂತಿಯಂತೆ ಶೀತಲವಾಗಿಯೂ ಮನೋಹರವಾಗಿಯೂ ಇರುವದು. ಅದು ಮನೋವೇಗದಂತೆ ಗಮನವುಳ್ಳದ್ದಾಗಿ ಸರ್ವಾಭೀಷ್ಟಗಳನ್ನೂ ಕೊಡುವದಾಗಿರುವದು. ಇಂತಹ ವಿಮಾನವನ್ನು ಆ ಪರಮೇಶ್ವರನು ಅನುಗ್ರಹಿಸುವನು.

೨೭-೨೮. ಅವನು ಭೋಗವನ್ನನುಭವಿಸಿದನಂತರ ಆ ಭೋಗದ ಅಭಿಲಾಷೆಯು ಅವನಿಗೆ ಕಳೆದಮೇಲೆ ಪ್ರಳಯಕಾಲದ ಅಗ್ನಿಯಂತೆ ಪ್ರಕಾಶಮಾನವಾದ

ನಿಪಾತ್ಯ ಶಕ್ತಿಂ ತೀವ್ರತರಾಂ ಪ್ರಕೃತ್ಯಾ ಹ್ಯತಿದುರ್ಗಮಾಂ ।
ಕಾಂತಾರಂ ದಗ್ಧುಕಾಮಾಂ ತಾಂ ಪ್ರಲಯಾನಲಸುಪ್ರಭಾಂ ॥ ೨೮ ॥

ಅನುಗೃಹ್ಯ ಮಹಾಮಂತ್ರತಾತ್ಪರ್ಯಂ ಪರಮೇಶ್ವರಃ ।
ಪೂರ್ಣೋಽಹಂಭಾವನಾರೂಪಶಂಭುರಸ್ಮೀತಿ ನಿಶ್ಚಲಂ ॥ ೨೯ ॥

ಅನುಗೃಹ್ಯ ಸಮಾಧಿಂ ಚ ಸ್ವದಾಸ್ಯಸ್ಪಂದರೂಪಿಣೀಃ ।
ರವ್ಯಾದಿಕೆರ್ನಸಾಮರ್ಥ್ಯರೂಪಾಃ ಸಿದ್ಧೀರನರ್ಗಲಾಃ ॥ ೩೦ ॥

ಆಯುಃಕ್ಷಯೇ ಪದ್ಮಯೋನೇಃ ಪುನರಾವೃತ್ತಿವರ್ಜಿತಾಂ ।
ಮುಕ್ತಿಂ ಚ ಪರಮಾಂ ತಸ್ಮೈ ಪ್ರಯಚ್ಛತಿ ಜಗದ್ಗುರುಃ ॥ ೩೧ ॥

ಏತದೇವ ಪದಂ ತಸ್ಮಾತ್ಸರ್ವೈಶ್ವರ್ಯಸಮಷ್ಟಿಮತ್ ।
ಮುಕ್ತಿಘಂಟಾಪಥಂ ಚೇತಿ ವೇದಾಂತಾನಾಂ ವಿನಿಶ್ಚಯಃ ॥ ೩೨ ॥

---

ಮಹಾಶಕ್ತಿಯನ್ನು ಅವನಿಗೆ ಶಿವನು ಅನುಗ್ರಹಿಸುವನು. ಆ ಶಕ್ತಿಯು ಅವನ ಅಜ್ಞಾನಾಂಧಕಾರವನ್ನು ನಾಶಪಡಿಸಿ ಸಂಸಾರವೆಂಬ ಕಾಡನ್ನು ದಹಿಸಿ ಮುಕ್ತಿಗೆ ಯೋಗ್ಯನನ್ನಾಗಿ ಮಾಡುವದು.

೨೯. ಅನಂತರ ಪರಮೇಶ್ವರನು ಮಹಾಮಂತ್ರದ ತಾತ್ಪರ್ಯವನ್ನನುಗ್ರಹಿಸಿ ಪೂರ್ಣವಾದ ಅಹಂಭಾವದಿಂದ ನಾನು ಶಂಭುವಾಗಿರುವೆನು ಎಂದು ದೃಢವಾದ ಭಾವನೆಯು ಅವನಿಗೆ ಉಂಟಾಗುವಂತೆ ಅನುಗ್ರಹಿಸುವನು.

೩೦-೩೧. ಈ ಪ್ರಕಾರವಾಗಿ ಅವನಿಗೆ ಸಮಾಧಿಯು ಸಿದ್ಧಿಸುವಂತೆ ಶಿವನು ಅನುಗ್ರಹಮಾಡಿ ಯಾವಾಗಲೂ ಯಾವತೊಂದರೆಯೂ ಇವನಿಗಿಲ್ಲದಿರುವಂತೆ ಮಾಡುವ ಸ್ಪಂದರೂಪದಿಂದಿರುವ ಅಮೃತಸ್ವರೂಪವಾದ ಮುಕ್ತಿಯನ್ನೀಯುವನು. ಆ ಮುಕ್ತಿಪದವಿಗೆ ಸೂರ್ಯನಿಗಿರುವಂತೆ ಜಗತ್ಪ್ರಕಾಶನಾದಿ ಸಾಮರ್ಥ್ಯವಿರುವದು. ಅನಂತರ ಬ್ರಹ್ಮನ ಆಯುಷ್ಯವು ಕಳೆದನಂತರ ಜಗದ್ಗುರುವಾದ ಶಿವನು ಅವನಿಗೆ ಪುನರಾವೃತ್ತಿರಹಿತವಾದ ಎಂದರೆ ಪುನಃ ಜನ್ಮವು ಇಲ್ಲದಿರುವ ಸಿದ್ಧಿರೂಪವಾದ ಮುಕ್ತಿಯನ್ನು ಕೊಡುವನು.

೩೨. ಆದ್ದರಿಂದ ಈ ರೀತಿಯಾಗಿ ಇರುವ ಸ್ಥಾನವು ಎಲ್ಲಾವಿಧವಾದ ಸಿದ್ಧಿಗಳಿಗೆ ಸಮಷ್ಟಿರೂಪವಾಗಿರುವದು ಎಂದರೆ ಮಾತೃಸ್ಥಾನದಂತಿರುವದು. ಈರೀತಿಯಾದ ಸಿದ್ಧಿಯು ಮುಕ್ತಿಯನ್ನು ಹೊಂದುವದಕ್ಕೆ ದೊಡ್ಡದಾರಿಯೆಂಬುದಾಗಿ ವೇದಾಂತಗಳ ಸಿದ್ಧಾಂತವಾಗಿರುವದು.

ಮುಮೂರ್ಷೋಸ್ತಸ್ಯ ಮಂದಸ್ಯ ಯತೇಸ್ಸತ್ಸಂಪ್ರದಾಯಿನಃ ।
ಯತಯಃ ಸಾನುಕೂಲತ್ವಾತ್ತಿಷ್ಠೇಯುಃ ಪರಿತಸ್ತದಾ ॥ ೩೩ ॥

ತತಸ್ಸರ್ವೇ ಚ ತೇ ತತ್ರ ಪ್ರಣವಾದೀನ್ಯನುಕ್ರಮಾತ್ ।
ಉಪದಿಶ್ಯ ಚ ವಾಕ್ಯಾನಿ ತಾತ್ಪರ್ಯಂ ಚ ಸಮಾಹಿತಾಃ ॥ ೩೪ ॥

ವರ್ಣಯೇಯುಃ ಸ್ಫುಟಂ ಪ್ರೀತ್ಯಾ ಶಿವಂ ಸಂಸ್ಮಾರಯನ್ಸದಾ ।
ನಿರ್ಗುಣಂ ಪರಮಜ್ಯೋತಿಃ ಪ್ರಣವ್ಯ ವಿಲಯಾವಧಿ ॥ ೩೫ ॥

ಏತೇಷಾಂ ಸಮಮೇವಾತ್ರ ಸಂಸ್ಕಾರಕ್ರಮ ಉಚ್ಯತೇ ।
ಅಸಂಸ್ಕೃತಶರೀರಾಣಾಂ ದೌರ್ಗತ್ಯಂ ನೈವ ಜಾಯತೇ ॥ ೩೬ ॥

ಸಂನ್ಯಸ್ಯ ಸರ್ವಕರ್ಮಾಣಿ ಶಿವಾಶ್ರಯಪರಾ ಯತಃ ।
ದೇಹಂ ದೂಷಯತಸ್ತೇಷಾಂ ರಾಜ್ಞೋ ರಾಷ್ಟ್ರಂ ಚ ನಶ್ಯತಿ ॥ ೩೭ ॥

---

೩೩–೩೫. ಸರಿಯಾದ ಸತ್ಪುರುಷರ ಸಂಪ್ರದಾಯವನ್ನು ಆಚರಿಸುತ್ತಿರುವ ಯತಿಯ ಅವಸಾನ ಕಾಲದಲ್ಲಿ ಸುತ್ತಲೂ, ಇತರ ಯತಿಗಳು ಅವನಿಗೆ ಅನುಕೂಲವನ್ನುಂಟುಮಾಡುವ ಆಸೆಯಿಂದ ಅವನ ಸುತ್ತಲೂ ಇರುವರು. ಅವರೆಲ್ಲರೂ ಅವನ ಸಮೀಪದಲ್ಲಿರುತ್ತಾ ಸಮಾಧಾನವಾದ ಮನಸ್ಸಿನಿಂದ ಕ್ರಮವಾಗಿ ಪ್ರಣವ ಮಂತ್ರದ ತಾತ್ಪರ್ಯವೇ ಮೊದಲಾದುದನ್ನೂ ಮಹಾವಾಕ್ಯಗಳ ತಾತ್ಪರ್ಯವನ್ನೂ ಕ್ರಮವಾಗಿ ಉಪದೇಶಮಾಡಿ, ಶಿವನ ಸ್ಮರಣೆಯನ್ನು ಮಾಡುತ್ತಾ ಅವನಲ್ಲಿರುವ ಪ್ರೀತಿಯಿಂದ ನಿರ್ಗುಣನಾಗಿಯೂ, ಉತ್ತಮವಾದ ಜ್ಯೋತೀರೂಪದಿಂದ ಇರುವ ಪರಬ್ರಹ್ಮಸ್ವರೂಪವನ್ನು ಅವನಿಗೆ ವರ್ಣಿಸುತ್ತಾ ಅವನ ಪ್ರಾಣವು ಹೋಗುವ ವರೆಗೂ ಅವನ ಸುತ್ತಲೂ ಇರುವನು.

೩೬-೩೭. ಹೀಗೆ ಪ್ರಾಣವನ್ನು ಬಿಡುವ ಸನ್ಯಾಸಿಗಳಿಗೆ ಸಂಸ್ಕಾರದ ಕ್ರಮವನ್ನು ಹೇಳುವೆನು. ಒಂದುವೇಳೆ ಮೃತರಾದ ಯತಿಗಳು ಸಂಸ್ಕಾರವನ್ನು ಹೊಂದದೆ ಇದ್ದರೆ ಅಂತವರಿಗೆ ದುರ್ಗತಿಯು ಯಾವಾಗಲೂ ಉಂಟಾಗುವದಿಲ್ಲ. ಅವರು ತಮ್ಮ ಎಲ್ಲಾ ಕರ್ಮಗಳನ್ನೂ ಶಿವನಲ್ಲಿ ನ್ಯಾಸಮಾಡಿ ಶಿವನ ಆಶ್ರಯದಲ್ಲಿಯೇ ಯಾವಾಗಲೂ ಕಾಲವನ್ನು ಕಳೆಯುತ್ತಿರುವದರಿಂದ ಅವರಿಗೆ ದುರ್ಗತಿಯುಂಟಾಗಲು ಕಾರಣವಿಲ್ಲ. ಅವರ ಶರೀರವನ್ನು ಸಂಸ್ಕಾರಮಾಡಬೇಕಾದ್ದು ರಾಜನಿಗೂ ಜನರಿಗೂ ಮುಖ್ಯ ಕರ್ತವ್ಯವು. ಹಾಗೆ ಯತಿಗಳ ಶವಸಂಸ್ಕಾರದಲ್ಲಿ ಉದಾಸೀನರಾಗಿ

ತದ್ಗ್ರಾಮವಾಸಿನಸ್ತೇಽಪಿ ಭವೇಯುರ್ಭೃಶದುಃಖಿನಃ ।
ತದ್ದೋಷಪರಿಹಾರಾಯ ವಿಧಾನಂ ಚೈವಮುಚ್ಯತೇ ॥ ೩೮ ॥

ಸ ತು ನಮ ಇರಿಣ್ಯಾಯ ಚೇತ್ಯಾರಭ್ಯ ವಿನಮ್ರಧೀಃ ।
ನಮ ಆಮೀವತ್ಕೇಭ್ಯಾಂತಂ ತತ್ಕಾಲೇ ಪ್ರಜಪೇನ್ಮನುಂ ॥ ೩೯ ॥

ಓಮಿತ್ಯಂತೇ ಜಪನ್ ದೇವಯಜನಂ ಪೂರಯೇತ್ತತಃ ।
ತತಶ್ಶಾಂತಿರ್ಭವೇತ್ತಸ್ಯ ದೋಷಸ್ಯ ಹಿ ಮುನೀಶ್ವರ ॥ ೪೦ ॥

ಪುತ್ರಾದಯೋ ಯಥಾನ್ಯಾಯಂ ಕುಯುಸ್ಸಂಸ್ಕಾರಮುತ್ತಮಂ ।
ವಚ್ಮಿ ತತ್ಕೃಪಯಾ ವಿಪ್ರ ಸಾವಧಾನತಯಾ ಶೃಣು ॥ ೪೧ ॥

ಅಭ್ಯರ್ಚ್ಯ ಸ್ನಾಪ್ಯ ಶುದ್ಧೋದೈರಭ್ಯರ್ಚ್ಯ ಕುಸುಮಾದಿಭಿಃ ।
ಶ್ರೀರುದ್ರಚಮಕಾಭ್ಯಾಂ ಚ ರುದ್ರಸೂಕ್ತೇನ ಚ ಕ್ರಮಾತ್ ॥ ೪೨ ॥

---

ಕರ್ತವ್ಯಭ್ರಷ್ಟರಾದರೆ ಅದರಿಂದ ರಾಜನಿಗೂ, ರಾಷ್ಟ್ರಕ್ಕೂ ಆ ಗ್ರಾಮದ ಜನಗಳಿಗೂ ಮಹದ್ದುಃಖಪ್ರಾಪ್ತವಾಗಿ ರಾಷ್ಟ್ರಕ್ಕೆ ಹಾನಿ ಸಂಭವಿಸುವದು. ಇಂತಹ ಪ್ರಮಾದಗಳು ಸಂಭವಿಸದಿರುವದಕ್ಕಾಗಿ ಯತಿಗಳ ಶರೀರದ ಸಂಸ್ಕಾರವನ್ನು ಅವಶ್ಯಕವಾಗಿ ಮಾಡಬೇಕು. ಆ ಕ್ರಮವನ್ನು ಈಗ ಹೇಳುವೆನು.

೩೯-೪೦. ಆ ಪ್ರದೇಶದ ರಕ್ಷಣೆಮಾಡುವವನು, ನಮ ಇರಿಣ್ಯಾಯ ಚ ಎಂದು ಮೊದಲುಗೊಂಡು ನಮ ಆಮೀವತ್ಕೇಭ್ಯಃ ಎಂಬುವವರೆಗೂ, ರುದ್ರಮಂತ್ರವನ್ನು ಆ ಕಾಲದಲ್ಲಿ ನಮ್ರತೆಯಿಂದ ಜಪಿಸಬೇಕು. ಈ ಮಂತ್ರದ ಕೊನೆಯಲ್ಲಿ ಪ್ರಣವಮಂತ್ರವನ್ನು ಎಂದರೆ ಓಂಕಾರವನ್ನು ಜಪಮಾಡಿ ಕರ್ಮವನ್ನು ಪೂರ್ತಿಗೊಳಿಸಬೇಕು. ಹೀಗೆ ಮಾಡುವದರಿಂದ ದೋಷಪರಿಹಾರವಾಗಿ ಶಾಂತಿಯುಂಟಾಗುವದು

೪೧. ಈ ಪ್ರಕಾರದಿಂದ ಮಂತ್ರವನ್ನು ಹೇಳಿ ದೇವರ ಪೂಜೆಯನ್ನು ಮಾಡಿ ಸಮಾಪ್ತಿಮಾಡಿದರೆ ಯಾವ ವಿಧವಾದ ತೊಂದರೆಯೂ ಉಂಟಾಗದೆ ದೋಷಗಳು ಎಲ್ಲವೂ ಪರಿಹಾರವಾಗುವವು. ಬಳಿಕ ಆ ಯತಿಯ ಶಿಷ್ಯನೋ ಪುತ್ರನೋ, ಇವರಲ್ಲಿ ಯಾರಾದರೂ ಆ ಶರೀರಕ್ಕೆ ಶಾಸ್ತ್ರವನ್ನನುಸರಿಸಿ ಉತ್ತಮವಾದ ಸಂಸ್ಕಾರವನ್ನು ಮಾಡುವರು. ಅದನ್ನು ಹೇಳುವೆನು. ಎಲೈ ವಾಮದೇವನೇ ಸಮಾಧಾನವಾದ ಮನಸ್ಸಿನಿಂದ ಅದನ್ನು ಕೇಳು.

೪೨-೪೫. ಆ ಶರೀರಕ್ಕೆ ಪರಿಶುದ್ಧವಾದ ನೀರಿನಿಂದ ಸ್ನಾನವನ್ನು ಮಾಡಿಸಿ ಹೂವು ಮೊದಲಾದುವುಗಳಿಂದ ಪೂಜಿಸಿ ಅಲಂಕರಿಸಬೇಕು. ಶ್ರೀ ರುದ್ರಮಂತ್ರ,

ಶಂಖಂ ಚ ಪುರತಃ ಸ್ಥಾಪ್ಯ ತಜ್ಜಲೇನಾಭಿಷಿಚ್ಯ ಚ ।
ಪುಷ್ಪಂ ನಿಧಾಯ ಶಿರಸಿ ಪ್ರಣವೇನ ಪ್ರಮಾರ್ಜಯೇತ್ ॥ ೪೩ ॥

ಕೌಪೀನಾದೀನಿ ಸಂತ್ಯಜ್ಯ ಪುನರನ್ಯಾನಿ ಧಾರಯೇತ್ ।
ಭಸ್ಮನೋದ್ಧೂಲಯೇತ್ತಸ್ಯ ಸರ್ವಾಂಗಂ ವಿಧಿನಾ ತತಃ ॥ ೪೪ ॥

ತ್ರಿಪುಂಡ್ರಂ ಚ ವಿಧಾನೇನ ತಿಲಕಂ ಚಂದನೇನ ಚ ।
ವಿರಚ್ಯ ಪುಷ್ಪೈರ್ಮಾಲಾಭಿರಲಂಕುರ್ಯಾತ್ಕಲೇಬರಂ ॥ ೪೫ ॥

ಉರಃಕಂಠಶಿರೋಬಾಹುಪ್ರಕೋಷ್ಠಶ್ರುತಿಷು ಕ್ರಮಾತ್ ।
ರುದ್ರಾಕ್ಷಮಾಲಾಭರಣೈರಲಂಕುರ್ಯಾಚ್ಚ ಮಂತ್ರತಃ ॥ ೪೬ ॥

ಸುಧೂಪಿತಂ ಸಮುತ್ಥಾಪ್ಯ ಶಿಕ್ಯೋಪರಿ ನಿಧಾಯ ಚ ।
ಪಂಚಬ್ರಹ್ಮಮಯೇ ರಮ್ಯೇ ರಥೇ ಸಂಸ್ಥಾಪಯೇತ್ತನುಂ ॥ ೪೭ ॥

ಓಮಾದ್ಯೈಃ ಪಂಚಭಿರ್ಬ್ರಹ್ಮಮಂತ್ರೈಸ್ಸದ್ಯಾದಿಭಿಃ ಕ್ರಮಾತ್ ।
ಸುಗಂಧಕುಸುಮೈರ್ಮಾಲ್ಯೈರಲಂಕುರ್ಯಾದ್ರಥಂ ಚ ತಂ ॥ ೪೮ ॥

---

ಚಮಕ ರುದ್ರಸೂಕ್ತ ಇವುಗಳಿಂದ ಕ್ರಮವಾಗಿ ಶಂಖವನ್ನು ಮುಂದೆ ಇರಿಸಿಕೊಂಡು ಪರಿಶುದ್ಧವಾದ ನೀರಿನಿಂದ ಅಭಿಷೇಕಮಾಡಿ, ವರಸಿ ಬೇರೆ ಕೌಪೀನ ಮೊದಲಾದವುಗಳನ್ನು ಹಾಕಿ ತಲೆಯಮೇಲೆ ಪ್ರಣವಮಂತ್ರದಿಂದ ಹೂವನ್ನು ಇರಿಸಬೇಕು. ಆ ಶರೀಕ್ಕೆಲ್ಲಾಕಡೆಗೂ ಶಾಸ್ತ್ರಕ್ಕನುಸಾರವಾಗಿ ಭಸ್ಮದಿಂದ ಉದ್ಧೂಲನೆಯನ್ನು ಮಾಡಿ, ತ್ರಿಪುಂಡ್ರವನ್ನು ಧರಿಸಿ, ಚಂದನದಿಂದ ತಿಲಕವನ್ನಿರಿಸಿ, ಆ ಶರೀರವನ್ನು ಹೂಗಳಿಂದಲೂ, ಹೂವಿನಮಾಲೆಗಳಿಂದಲೂ ಅಲಂಕರಿಸಬೇಕು.

೪೬–೪೯. ಆ ಶರೀರದ ವಕ್ಷಪ್ರದೇಶ, ಕುತ್ತಿಗೆ, ತಲೆ, ತೋಳು, ಮಣಿಕಟ್ಟಿನಪ್ರದೇಶ, ಕಿವಿ ಈ ಪ್ರದೇಶಗಳಲ್ಲಿ ಕ್ರಮವಾಗಿ, ಮಂತ್ರಗಳಿಂದ ರುದ್ರಾಕ್ಷಿಯ ಸರಗಳಿಂದ ಅಲಂಕಾರವನ್ನು ಮಾಡಬೇಕು. ಧೂಪವನ್ನು ಹಾಕಿದನಂತರ ಅದನ್ನು ಮೇಲಕ್ಕೆತ್ತಿ ನೆಲುವಿನ ಮೇಲುಗಡೆಗಿರಿಸಬೇಕು. ಪಂಚಬ್ರಹ್ಮಮಯವಾದ ಸುಂದರವಾದ ರಥದಲ್ಲಿ ಕೂರಿಸಿ ಪ್ರಣವಮೊದಲುಗೊಂಡು ಸದ್ಯೋಜಾತವೇ ಮೊದಲಾದ ಐದು ಬ್ರಹ್ಮಮಂತ್ರಗಳಿಂದ ಕ್ರಮವಾಗಿ ಸುವಾಸನೆಯುಳ್ಳ ಹೂವು ಮತ್ತು ಹಾರ ಇವುಗಳಿಂದ ಆ ರಥವನ್ನಲಂಕರಿಸಬೇಕು. ನರ್ತನ ವಾದ್ಯಘೋಷ ಬ್ರಾಹ್ಮಣರ ವೇದಮಂತ್ರಗಳ ಧ್ವನಿ ಇವುಗಳೊಡನೆ ಗ್ರಾಮದ ಎಲ್ಲಾಕಡೆಯಲ್ಲಿಯೂ, ಪ್ರದಕ್ಷಿಣೆ

ನೃತ್ಯವಾದ್ಯೈರ್ಬ್ರಾಹ್ಮಣಾನಾಂ ವೇದಘೋಷೈಶ್ಚ ಸರ್ವತಃ ।
ಗ್ರಾಮಂ ಪ್ರದಕ್ಷಿಣೀಕೃತ್ಯ ಗಚ್ಛೇತ್ಪ್ರೇತಂ ತಮುದ್ವಹನ್ ॥ ೪೯ ॥

ತತಸ್ತೇ ಯತಿನಃ ಸರ್ವೇ ತಥಾ ಪ್ರಾಚ್ಯಾಮಥಾಪಿ ವಾ ।
ಉದೀಚ್ಯಾಂ ಪುಣ್ಯದೇಶೇ ತು ಪುಣ್ಯವೃಕ್ಷಸಮೀಪತಃ ॥ ೫೦ ॥

ಖನಿತ್ವಾ ದೇವಯಜನಂ ದಂಡಮಾತ್ರಪ್ರಮಾಣತಃ ।
ಪ್ರಣವವ್ಯಾಹೃತಿಭ್ಯಾಂ ಚ ಪ್ರೋಕ್ಷ್ಯ ಚಾಸ್ತೀರ್ಯ ಚ ಕ್ರಮಾತ್ ॥ ೫೧ ॥

ಶಮೀಪತ್ರೈಶ್ಚ ಕುಸುಮೈರುತ್ತರಾಗ್ರಂ ತದೂರ್ಧ್ವತಃ ।
ಆಸ್ತೀರ್ಯ ದರ್ಭಾಂಸ್ತತ್ಪ್ರೇತಂ ಚಲಾಜಿನಕುಶೋತ್ತರಂ ॥ ೫೨ ॥

ಪ್ರಣವೇನ ಬ್ರಹ್ಮಭಿಶ್ಚ ಪಂಚಗವ್ಯೇನ ತಾಂ ತನುಂ ।
ಪ್ರೋಕ್ಷ್ಯಾಭಿಷಿಚ್ಯ ರೌದ್ರೇಣ ಸೂಕ್ತೇನ ಪ್ರಣವೇನ ಚ ॥ ೫೩ ॥

---

ಯಾಗಿ ಅತಿವಿಜೃಂಭಣೆಯಿಂದ ಮೆರವಣಿಗೆಯನ್ನು ಮಾಡಿ ಅದನ್ನು ಹೊತ್ತುಕೊಂಡು ಹೋಗಬೇಕು.

೫೦. ಅನಂತರ ಆ ಯತಿಗಳೆಲ್ಲರೂ, ಪೂರ್ವದಿಕ್ಕಿನಲ್ಲಿಯಾಗಲಿ, ಉತ್ತರದಿಕ್ಕಿನಲ್ಲಿಯಾಗಲಿ, ಪರಿಶುದ್ಧವಾದ ಉತ್ತಮವಾದ ಮರದಹತ್ತಿರ ಒಂದು ದೊಣ್ಣೆಯ ಅಳತೆಯಪ್ರಮಾಣ ಆಳವಾಗಿರುವಂತೆ ಗುಂಡಿಯನ್ನು ತೆಗೆದು ಸಮಾಧಿಸ್ಥಳವನ್ನು ಸಿದ್ಧಪಡಿಸುವರು.

೫೧-೫೩. ಆ ಯತಿಗಳು ಅಗೆದಿರುವ ಆ ಗುಂಡಿಯಲ್ಲಿ ಪ್ರಣವವ್ಯಾಹೃತಿ ಮಂತ್ರಗಳಿಂದ ಪ್ರೋಕ್ಷಿಸಿ ಬನ್ನಿಮರದ ಎಲೆಗಳು, ಹೂವುಗಳು, ಉತ್ತರಾಗ್ರವಾಗಿರುವ ದರ್ಭೆಗಳು ಇವುಗಳನ್ನು ಹಾಸಿ ನಾರುಮಡಿ, ದರ್ಭೆ, ಕೃಷ್ಣಾಜಿನ ಇವುಗಳಿಂದ ಆಸನವನ್ನು ಸಿದ್ಧಮಾಡುವರು. ಬಳಿಕ ಪ್ರಣವಮಂತ್ರದಿಂದಲೂ, ಪಂಚಬ್ರಹ್ಮಮಂತ್ರಗಳಿಂದಲೂ, ಪಂಚಗವ್ಯದಿಂದಲೂ ಆ ಶರೀರವನ್ನು ಚೆನ್ನಾಗಿ ಪ್ರೋಕ್ಷಿಸಿ, ರುದ್ರಮಂತ್ರ, ರುದ್ರಸೂಕ್ತ ಪ್ರಣವ ಇವುಗಳಿಂದ ಶಂಖದ ನೀರಿನಿಂದ ಅಭಿಷೇಕವನ್ನು ಮಾಡಿ ತಲೆಯಮೇಲೆ ಹೂವನ್ನು ಇರಿಸಬೇಕು.

ಶಂಖತೋಯೇನಾಭಿಷಿಚ್ಯ ಮೂರ್ಧ್ನಿ ಪುಷ್ಪಂ ವಿನಿಃಕ್ಷಿಪೇತ್ ।
ತದ್ಗತಸ್ಯಾನುಕೂಲೋಽಸೌ ಶಿವಸ್ಮರಣತತ್ಪರಃ ॥ ೫೪ ॥

ಓಮಿತ್ಯಥ ಸಮುದ್ಧೃತ್ಯ ಸ್ವಸ್ತಿವಾಚನಪೂರ್ವಕಂ ।
ಗರ್ತೇ ಯೋಗಾಸನೇ ಸ್ಥಾಪ್ಯ ಪ್ರಾಙ್ಮುಖಂ ಸ್ಯಾದ್ಯಥಾ ತಥಾ ॥ ೫೫ ॥

ಗಂಧಪುಷ್ಪೈರಲಂಕೃತ್ಯ ಧೂಪಗುಗ್ಗುಲುನಾ ತತಃ ।
ವಿಷ್ಣೋ ಹವ್ಯಮಿತಿ ಪ್ರೋಚ್ಯ ರಕ್ಷಸ್ವೇತಿ ಪರ್ದ ದದೇತ್ ॥ ೫೬ ॥

ದಂಡಂ ದಕ್ಷಿಣಹಸ್ತೇ ತು ವಾಮೇ ದದ್ಯಾತ್ಕಮಂಡಲುಂ ।
ಪ್ರಜಾಪತೇನತ್ವ್ವದೇತಾನ್ಯನ್ಯೋಮಂತ್ರೇಣ ಸೋದಕಂ ॥ ೫೭ ॥

ಬ್ರಹ್ಮಜಜ್ಞಾನಂ ಪ್ರಥಮಮಿತಿ ಮಂತ್ರೇಣ ಮಸ್ತಕೇ ।
ಸ್ಪೃಶನ್ ಜಪ್ತ್ವಾ ರುದ್ರಸೂಕ್ತಂ ಭ್ರುವೋರ್ಮಧ್ಯೇ ಸ್ಪೃಶನ್ ಜಪೇತ್ ೫೮

ಮಾನೋಮಹಾಂತಮಿತ್ಯಾದಿ ಚತುರ್ಭಿರ್ಮಸ್ತಕಂ ತತಃ ।
ನಾಲಿಕೇರೇಣ ನಿರ್ಭಿದ್ಯಾದವಟಂ ಪೂರಯೇತ್ತತಃ ॥ ೫೯ ॥

---

೫೪-೫೯. ಆ ಯತಿಯ ಸಂಸ್ಕಾರವನ್ನು ಮಾಡುವವನು ಆ ಕಾಲದಲ್ಲಿ ಶಿವನ ಸ್ಮರಣೆಯನ್ನು ಮಾಡುತ್ತಿರಬೇಕು. ಪ್ರಣವವನ್ನು ಉಚ್ಚರಿಸಿ, ಸ್ವಸ್ತಿವಾಚನೆಯನ್ನು ಮಾಡಿಸುತ್ತಾ ಆ ಗುಂಡಿಯಲ್ಲಿ ಪೂರ್ವಮುಖವಾಗಿರುವಹಾಗೆ ಯೋಗಾಸನದಲ್ಲಿ ಆ ಶರೀರವನ್ನು ಇರಿಸಿ ಗಂಧ, ಹೂವುಗಳಿಂದ ಅಲಂಕಾರಮಾಡಿ, ಧೂಪ, ಗುಗ್ಗುಲು ಇವುಗಳಿಂದ ಧೂಪವನ್ನು ಹಾಕಿ "ವಿಷ್ಣೋ ಹವ್ಯಂ ರಕ್ಷಸ್ವ" ಎಂದು ಮಂತ್ರವನ್ನು ಹೇಳುತ್ತಾ ಬಲಗಡೆಯ ಕೈಯ್ಯಿಗೆ ದಂಡವನ್ನು ಕೊಟ್ಟು "ಪ್ರಜಾಪತೇ ನತ್ವದೇತಾನ್ಯನ್ಯೋ" ಎಂಬ ಮಂತ್ರದಿಂದ ನೀರನ್ನು ತುಂಬಿರುವ ಕಮಂಡಲುವನ್ನು ಎಡಗೈಯ್ಯಿಗೆ ಕೊಟ್ಟು "ಬ್ರಹ್ಮಜಜ್ಞಾನಂ ಪ್ರಥಮಂ" ಎಂಬ ಮಂತ್ರದಿಂದ ತಲೆಯನ್ನು ಮುಟ್ಟಿ ರುದ್ರಸೂಕ್ತವನ್ನು ಜಪಿಸುತ್ತಾ ಭ್ರೂಮಧ್ಯವನ್ನು ಸ್ಪರ್ಶ ಮಾಡಬೇಕು. "ಮಾನೋಮಹಾಂತ" ಎಂಬ ನಾಲ್ಕು ಮಂತ್ರಗಳಿಂದ ತೆಂಗಿನ ಕಾಯಿನಿಂದ ತಲೆಯನ್ನು ಒಡೆಯಬೇಕು. ಅನಂತರ ಆ ಗುಂಡಿಯನ್ನು ಮುಚ್ಚಬೇಕು.

ಪಂಚಭಿರ್ಬ್ರಹ್ಮಭಿಸ್ಸೃಷ್ಟ್ವಾ ಜಪೇತ್ಸ್ಥಲಮನನ್ಯಧೀಃ ।
ಯೋ ದೇವಾನಾಮುಪಕ್ರಮ್ಯ ಯಃ ಪರಃ ಸ ಮಹೇಶ್ವರಃ ॥ ೬೦ ॥

ಇತಿ ಜಪ್ತ್ವಾ ಮಹಾದೇವಂ ಸಾಂಬಂ ಸಂಸಾರಭೇಷಜಂ ।
ಸರ್ವಜ್ಞಮಪರಾಧೀನಂ ಸರ್ವಾನುಗ್ರಹಕಾರಕಂ ॥ ೬೧ ॥

ಏಕಾರತ್ನಿಸಮುತ್ಸೇಧಮರತ್ನಿದ್ವಯವಿಸ್ತೃತಂ ।
ಮೃದಾ ಪೀಠಂ ಪ್ರಕಲ್ಪ್ಯಾಥ ಗೋಮಯೇನೋಪಲೇಪಯೇತ್ ॥ ೬೨ ॥

ಚತುರಸ್ರಂ ಚ ತನ್ಮಧ್ಯೇ ಗಂಧಾಕ್ಷತಸಮನ್ವಿತೈಃ ।
ಸುಗಂಧಕುಸುಮೈರ್ಬಿಲ್ವೈಸ್ತುಲಸ್ಯಾ ಚ ಸಮರ್ಚಯೇತ್ ॥ ೬೩ ॥

ಪ್ರಣವೇನ ತತೋ ದದ್ಯಾದ್ಧೂಪದೀಪೌ ಪಯೋ ಹವಿಃ ।
ದತ್ವಾ ಪ್ರದಕ್ಷಿಣೀಕೃತ್ಯ ನಮಸ್ಕುರ್ಯಾಚ್ಚ ಪಂಚಧಾ ॥ ೬೪ ॥

---

೬೦–೬೨. ಪಂಚಬ್ರಹ್ಮಮಂತ್ರಗಳಿಂದ ಪರಿಶುದ್ಧವಾದ ಆ ಪ್ರದೇಶವನ್ನು ಸ್ಪರ್ಶಮಾಡುತ್ತಾ ಬೇರೆಯ ಕಡೆಗೆ ಮನಸ್ಸುಹೋಗದಂತೆ ನಿಶ್ಚಲಚಿತ್ತನಾಗಿ "ಯೋದೇವಾನಾಂ ಪ್ರಥಮಂ ಪುರಸ್ತಾತ್ " ಎಂಬ ಮಂತ್ರವು ಮೊದಲಗೊಂಡು " ಯಃ ಪರಸ್ಸ ಮಹೇಶ್ವರಃ" ಎಂಬದು ಕೊನೆಗೆ ಬರುವವರೆಗೂ ಮಂತ್ರವನ್ನು ಜಪಿಸಿ, ಸಂಸಾರಕ್ಕೆ ವೈದ್ಯನೂ, ಜಗನ್ಮಾತೆಯೊಡನೆ ಇರುವವನೂ, ಸರ್ವಜ್ಞನೂ, ಸ್ವತಂತ್ರನೂ ಎಲ್ಲರಿಗೂ ಅನುಗ್ರಹವನ್ನು ಮಾಡುವವನೂ ಆದ ಶಿವನನ್ನು ಧ್ಯಾನಮಾಡಿ, ಒಂದುಮೊಳಯೆತ್ತರವೂ ಎರಡುಮೊಳ ವಿಸ್ತಾರವೂ ಇರುವ ಜಗುಲಿಯನ್ನು ಮಣ್ಣಿನಿಂದ ಕಟ್ಟಿ ಗೋಮಯದಿಂದ (ಸಗಣಿಯಿಂದ) ಸಾರಿಸಬೇಕು.

೬೩–೬೪. ಆ ವೇದಿಕೆಯ ಮಧ್ಯದಲ್ಲಿ ಚೌಕವಾಗಿರುವ ಹಾಗೆ ಮಂಡಲ ಮಾಡಿ ಅದನ್ನು ಗಂಧ, ಅಕ್ಷತೆ, ಸುವಾಸನೆಯುಳ್ಳ ಹೂವುಗಳು, ಬಿಲ್ವಪತ್ರೆ ಮತ್ತು ತೊಳಸಿ ಇವುಗಳಿಂದ ಪೂಜಿಸಬೇಕು. ಆಮೇಲೆ ಪ್ರಣವಮಂತ್ರದಿಂದ ಧೂಪದೀಪಗಳನ್ನು ಅರ್ಪಿಸಿ ಹಾಲು ಹವಿಸ್ಸು ಇವುಗಳನ್ನಿಟ್ಟು ಪ್ರದಕ್ಷಿಣೆ ನಮಸ್ಕಾರ ಮಾಡಬೇಕು. ಪ್ರಣವವನ್ನು ಹನ್ನೆರಡುಸಾರಿ ಹೇಳಿ ಐದುಸಾರಿ ನಮಸ್ಕರಿಸಬೇಕು.

ಪ್ರಣವಂ ದ್ವಾದಶಾವೃತ್ತ್ಯಾ ಸಂಜಪ್ಯ ಪ್ರಣವೋತ್ತ್ರತಃ ।
ದಿಗ್ವಿದಿಕ್ರಮತೋ ದದ್ಯಾದ್ಬ್ರಹ್ಮಾದ್ಯಂ ಪ್ರಣವೇನ ಚ ॥ ೬೫ ॥

ಏವಂ ದಶಾಹಪರ್ಯಂತಂ ವಿಧಿಸ್ತೇ ಸಮುದಾಹೃತಃ ।
ಯತೀನಾಂ ಮುನಿವರ್ಯಾರ್ಥೈಕಾದಶಾಹವಿಧಿಂ ಶೃಣು ॥ ೬೬ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಯತೀನಾಂ ಮರಣಾನಂತರದಶಾಹಪರ್ಯಂತಂ ಕೃತ್ಯವರ್ಣನಂ
ನಾಮೈಕವಿಂಶೋಽಧ್ಯಾಯಃ

---

೬೫-೬೬. ದಿಕ್ಕುವಿದಿಕ್ಕುಗಳಲ್ಲಿ ಪ್ರದಕ್ಷಿಣಾಕಾರವಾಗಿ ಪಂಚಬ್ರಹ್ಮಮಂತ್ರಗಳಿಂದಲೂ ಪ್ರಣವಮಂತ್ರದಿಂದಲೂ ಕ್ರಮವಾಗಿ ಈರೀತಿಯಿಂದ ಹಾಲು ಹವಿಸ್ಸನ್ನು ಕೊಡಬೇಕು. ಹೀಗೆಯೇ ಹತ್ತುದಿನಗಳವರೆಗೂ ನಡೆಸಬೇಕಾದ ವಿಧಿಯನ್ನು ಹೇಳಿರುವೆನು. ಎಲೈ ಮುನಿಶ್ರೇಷ್ಠನೇ ಇನ್ನು ಮುಂದೆ ಹನ್ನೊಂದನೆಯ ದಿನ ಮಾಡಬೇಕಾದ ಕರ್ಮದ ಕ್ರಮವನ್ನು ಹೇಳುವೆನು ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಯತಿಗಳಿಗೆ ಮರಣಾನಂತರ ಹತ್ತುದಿನಗಳವರೆಗೂ ಮಾಡಬೇಕಾದ ಕಾರ್ಯವಿವರಣೆಯನ್ನು ಹೇಳುವ ಇಪತ್ತೊಂದನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ಕೈಲಾಸಸಂಹಿತಾಯಾಂ

## ದ್ವಾವಿಂಶೋಽಧ್ಯಾಯಃ

---

॥ ಶ್ರೀಸುಬ್ರಹ್ಮಣ್ಯ ಉವಾಚ ॥

ಏಕಾದಶೇಽಹ್ನಿ ಸಂಪ್ರಾಪ್ತೇ ಯೋ ವಿಧಿಸ್ಸಮುದಾಹೃತಃ ।
ತಂ ವಕ್ಷ್ಯೇ ಮುನಿಶಾರ್ದೂಲ ಯತೀನಾಂ ಸ್ನೇಹತಸ್ತವ ॥ ೧ ॥

ಸಂಮಾರ್ಜ್ಯ ವೇದೀಮಾಲಿಪ್ಯ ಕೃತ್ವಾ ಪುಣ್ಯಾಹವಾಚನಂ ।
ಪ್ರೋಕ್ಷ್ಯ ಪಶ್ಚಿಮಮಾರಭ್ಯ ಪೂರ್ವಾಂತಂ ಪಂಚ ಚ ಕ್ರಮಾತ್ ॥ ೨ ॥

---

## ಇಪ್ಪತ್ತೆರಡನೆಯ ಅಧ್ಯಾಯ

೧. ಸುಬ್ರಹ್ಮಣ್ಯನಿಂತೆಂದನು:—ಹನ್ನೊಂದನೆಯ ದಿನವು ಪ್ರಾಪ್ತವಾಗಲು ಯತಿಗಳಿಗೆ ಮಾಡಬೇಕಾದ ಕರ್ಮವನ್ನು ನಿನ್ನಮೇಲಿನ ಸ್ನೇಹದಿಂದ ಹೇಳುವೆನು. ಎಲೈ ಮುನಿಶ್ರೇಷ್ಠನೇ ಅದನ್ನು ಕೇಳು.

೨-೪. ವೇದಿಕೆಯನ್ನು ಚೆನ್ನಾಗಿ ಒರೆಸಿ, ಸಾರಿಸಿ ಪುಣ್ಯಾಹವನ್ನು ಮಾಡಿ ಆ ಜಲದಿಂದ ಪ್ರೋಕ್ಷಣೆಯನ್ನು ಮಾಡಬೇಕು. ಉತ್ತರ ಮುಖವಾಗಿ ತಾನು ಕೂತುಕೊಂಡು ಪಶ್ಚಿಮದಿಕ್ಕನ್ನು ಪ್ರಾರಂಭಿಸಿ, ಪೂರ್ವದಿಕ್ಕಿಗೆ ಕೊನೆಯಾಗುವಂತೆ ಕ್ರಮವಾಗಿ ಐದು ಮಂಡಲಗಳನ್ನು ಮಾಡಬೇಕು. ಆ ಮಂಡಲಗಳು ಚೋಟುದ್ದ

ಮಂಡಲಾನ್ಯುತ್ತರಾಶಾಸ್ಯಃ ಕುರ್ಯಾತ್ಸ್ವಯಮವಸ್ಥಿತಃ ।
ಪ್ರಾದೇಶಮಾತ್ರಂ ಸಂಕಲ್ಪ್ಯ ಚತುರಸ್ರಂ ಚ ಮಧ್ಯತಃ ॥ ೩ ॥

ಬಿಂದುತ್ರಿಕೋಣಷಟ್ಕೋಣವೃತ್ತಾಕಾರಾಣಿ ಚ ಕ್ರಮಾತ್ ।
ಶಂಖಂ ಚ ಪುರತಃ ಸ್ಥಾಪ್ಯ ಪೂಜೋಕ್ತಕ್ರಮಮಾರ್ಗತಃ ॥ ೪ ॥

ಪ್ರಾಣಾನಾಯಮ್ಯ ಸಂಕಲ್ಪ್ಯ ಪೂಜಯಿತ್ವಾ ಸುರೇಶ್ವರೀಃ ।
ದೇವತಾಃ ಪಂಚ ಪೂರ್ವೋಕ್ತಾ ಅತಿವಾಹಿಕರೂಪಿಣೀಃ ॥ ೫ ॥

ಸಂತ್ಯಜ್ಯೋತ್ತರತೋ ದರ್ಭಾನ್ಯಶ್ಚ ಸಂಸ್ಪೃಶತೇ ತತಃ ।
ಪಶ್ಚಿಮಾದಿ ಸಮಾರಭ್ಯ ಷಡುತ್ಥಾಸನಮಾರ್ಗತಃ ॥ ೬ ॥

ಮಂಡಲಾನಿ ಚ ತೇಷ್ವಂತಃ ಪುಷ್ಪಾಣ್ಯಾಧಾಯ ಪೀಠವತ್ ।
ಓಂ ಹ್ರೀಮಿತ್ಯುಕ್ತ್ವಾಗ್ನಿರೂಪಾಂ ತಾಮತಿವಾಹಿಕದೇವತಾಂ ॥ ೭ ॥

ಆವಾಹಯಾಮಿ ನಮ ಇತ್ಯಂತಂ ಸರ್ವತ್ರ ಭಾವಯೇತ್ ।
ದರ್ಶಯೇತ್ಸ್ಥಾಪನಾದ್ಯಾಸ್ತು ಮುದ್ರಾಃ ಪ್ರತ್ಯೇಕಮಾದರಾತ್ ॥ ೮ ॥

---

ಆಳತೆಯಿಂದಿದ್ದು ಮಧ್ಯದಲ್ಲಿ ಬಿಂದು ಬಳಿಕ ತ್ರಿಕೋಣ ಆಮೇಲೆ ಷಟ್ಕೋಣ ಆಮೇಲೆ ವೃತ್ತ, ಅದರಸುತ್ತ ಚತುರಸ್ರಾಕಾರವಾಗಿರುವಂತೆ ಆ ಮಂಡಲಗಳನ್ನು ಮಾಡಿ ಮುಂದುಗಡೆಯಲ್ಲಿ ಶಂಖವನ್ನಿರಿಸಿ ಪೂಜಾಕಾಲದಲ್ಲಿ ಹೇಳಿದ ಕ್ರಮವನ್ನನುಸರಿಸಿ ಪ್ರಾಣಾಯಾಮಪೂರ್ವಕವಾಗಿ ಸಂಕಲ್ಪವನ್ನು ಮಾಡಬೇಕು.

೫-೮. ಮೊದಲು ಹೇಳಿದ ಆತಿವಾಹಿಕ (ಕೇವಲ ವಾಯುರೂಪದಿಂದಿರುವ) ರೂಪದಿಂದಿರುವ ಐದು ದೇವಿಯರನ್ನೂ ಪೂಜೆ ಮಾಡಿ ಉತ್ತರ ದಿಕ್ಕಿನಲ್ಲಿ ದರ್ಭೆಗಳನ್ನು ಹಾಕಿ ಜಲಸ್ಪರ್ಶವನ್ನು ಮಾಡಬೇಕು. ಪಶ್ಚಿಮದಿಕ್ಕಿನಿಂದ ಪ್ರಾರಂಭಿಸಿ ಆರುವಿಧವಾದ ಷಡುತ್ಥಾಸನ ವಿಧಿಯಿಂದ ಮಂಡಲಗಳನ್ನು ಮಾಡಿ ಅವುಗಳ ಒಳ ಭಾಗದಲ್ಲಿ ಪೀಠವನ್ನು ಇರಿಸಿದಹಾಗೆ ಹೂವುಗಳನ್ನಿರಿಸಿ "ಓಂ ಹ್ರೀಂ" ಎಂದು ಹೇಳಿ ಅಗ್ನಿಯರೂಪದಿಂದಿರುವ ಅತಿವಾಹಿಕ ದೇವತೆಯನ್ನು "ಆತಿವಾಹಿಕದೇವತಾ ಮಾವಾಹಯಾಮಿ ನಮಃ" ಎಂದು ಮಂತ್ರದಕೊನೆಗೆ ಬರುವಂತೆ ಹೇಳುತ್ತಾ ಆವಾಹನ ಮಾಡಿ ಭಕ್ತಿಯಿಂದ ಸ್ಥಾಪನಾದಿಮುದ್ರೆಗಳನ್ನು ಪ್ರತ್ಯೇಕವಾಗಿ ತೋರಿಸಬೇಕು.

ಹ್ರಾಂ ಹ್ರೀಮಿತ್ಯಾದಿನಾ ಕುರ್ಯಾದಾಸಾಮಂಗಾನಿ ಚ ಕ್ರಮಾತ್ ।
ಪಾಶಾಂಕುಶಾಭಯಾಭೀಷ್ಟಪಾಣಿಚಂದ್ರೋಪಲಪ್ರಭಾಃ ॥ ೯ ॥

ರಕ್ತಾಂಗುಲೀಯಕಚ್ಛಾಯರಂಜಿತಾಖಿಲದಿಙ್ಮುಖಾಃ ।
ರಕ್ತಾಂಬರಧರಾಃ ಕ್ಷಾರಪದಪಂಕಜಶೋಭಿತಾಃ ॥ ೧೦ ॥

ತ್ರಿನೇತ್ರೋಲ್ಲಾಸಿವದನಪೂರ್ಣಚಂದ್ರಮನೋಹರಾಃ ।
ಮಾಣಿಕ್ಯಮುಕುಟೋದ್ಭಾಸಿಚಂದ್ರಲೇಖಾವತಂಸಿತಾಃ ॥ ೧೧ ॥

ಕುಂಡಲಾಸ್ಪೃಷ್ಟಗಂಡಾಶ್ಚ ಪೀನೋನ್ನತಪಯೋಧರಾಃ ।
ಹಾರಕೇಯೂರಕಟಿಕಕಾಂಚೀದಾಮಮನೋಹರಾಃ ॥ ೧೨ ॥

ತನುಮಧ್ಯಾಃ ಪೃಥುಶ್ರೋಣ್ಯೋ ರಕ್ತದಿವ್ಯಾಂಬರಾವೃತಾಃ ।
ಮಾಣಿಕ್ಯಮಯಮಂಜೀರಸಿಂಜತ್ಪದಸರೋರುಹಾಃ ।
ಪಾದಾಂಗುಲೀಯಕಶ್ರೇಣೀರ್ಮಂಜುಲಾತಿಮನೋಹರಾಃ ॥ ೧೩ ॥

೯-೧೩. ಹ್ರಾಂ ಹ್ರೀಂ ಇತ್ಯಾದಿ ಮಂತ್ರಗಳಿಂದ ಈ ದೇವತೆಗಳಿಗೆ ಅಂಗ ಪೂಜೆಯನ್ನು ಮಾಡಿ ಬಳಿಕ ಧ್ಯಾನವನ್ನು ಈರೀತಿ ಮಾಡಬೇಕು.—ಈ ದೇವಿಯರು ಪಾಶ, ಅಂಕುಶ, ಅಭಯ, ವರದಹಸ್ತ ಇವುಗಳಿಂದ ಕೂಡಿರುವ ಚಂದ್ರಕಾಂತಶಿಲೆಯ ಹಾಗೆ ಮನೋಹರವಾದ ಕೈಗಳುಳ್ಳವರಾಗಿರುವರು. ಕೆಂಪಗಿರುವ ಉಂಗುರದ ಕಾಂತಿಯಿಂದ ದಶದಿಕ್ಕುಗಳನ್ನೂ ಬೆಳಗುತ್ತಿರುವರು. ಕೆಂಪಾದ ವಸ್ತ್ರವನ್ನು ಧರಿಸಿರುವರು. ಕಮಲದಂತಿರುವ ಕೋಮಲವಾಗಿರುವ ಹಸ್ತಪಾದಾದ್ಯವಯವಗಳು, ಮೂರುಕಣ್ಣುಗಳು, ಪೂರ್ಣಚಂದ್ರನಂತೆಮನೋಹರವಾಗಿರುವಮುಖ, ಇವುಗಳಿಂದ ವಿರಾಜಿಸುತ್ತಾ ತಮ್ಮ ಶಿರಸ್ಸಿನಲ್ಲಿ ಪದ್ಮರಾಗನಿರ್ಮಿತವಾದ ಕಿರೀಟವನ್ನು ಧರಿಸಿರುವರು. ಆ ಕಿರೀಟದಲ್ಲಿ ಚಂದ್ರನು ಆಭರಣಪ್ರಾಯನಾಗಿ ಹೊಳೆಯುತ್ತಿರುವನು. ಕಿವಿಗಳಲ್ಲಿ ಧರಿಸಿರುವ ರತ್ನಕುಂಡಲಗಳ ಕಾಂತಿಯು ಮೃದುವಾದ ಕೆನ್ನೆಯಮೇಲೆ ಬಿದ್ದು ಥಳಥಳಿಸುತ್ತಿರುವುದು. ವಕ್ಷಸ್ಥಳದಲ್ಲಿ ಮುಂದಕ್ಕೆ ಚಾಚಿ ಉಬ್ಬಿ ದುಂಡಾಗಿರುವ ಸ್ತನಗಳು ಒಪ್ಪುತ್ತಿರುವವು. ಹಾರ, ಭುಜಕೀರ್ತಿ, ಕಡಗ, ಡಾಬು, ಗೆಜ್ಜೆಯದಾರ ಮುಂತಾದ ಬಗೆಬಗೆಯ ಆಭರಣಗಳನ್ನು ಧರಿಸಿರುವರು. ಕೃಶವಾದ ಮಧ್ಯಪ್ರದೇಶದಿಂದಲೂ, ದಪ್ಪನಾದ ಕಟಿಪಶ್ಚಾದ್ಭಾಗದಿಂದಲೂ ಕೂಡಿದವರಾಗಿ ಉತ್ತಮವಾದ ರಕ್ತವಸ್ತ್ರವನ್ನು ಧರಿಸಿರುವರು. ಕಾಲಿನ ಬೆರಳುಗಳಲ್ಲಿ ಧರಿಸಿರುವ ಪದ್ಮರಾಗರತ್ನದ ಕಾಲುಂಗುರಗಳು

ಅನುಗ್ರಹೇಣ ಮೂರ್ತೇನ ಶವವಚ್ಛಿಂ ನು ಸಾಧ್ಯತೇ ।
ತಸ್ಮಾಚ್ಛಕ್ತ್ಯಾತ್ಮಮೂರ್ತೇನ ಸರ್ವಂ ಸಾಧ್ಯಂ ಮಹೇಶವತ್ ॥ ೧೪ ॥

ಸರ್ವಾನುಗ್ರಹಕರ್ತ್ರೈವ ಸ್ವೀಕೃತಾಃ ಪಂಚಮೂರ್ತಯಃ ।
ಸರ್ವಕಾರ್ಯಕರಾ ದಿವ್ಯಾಃ ಪರಾನುಗ್ರಹತತ್ಪರಾಃ ॥ ೧೫ ॥

ಏವಂ ಧ್ಯಾತ್ವಾ ತು ತಾಃ ಸರ್ವಾ ಅನುಗ್ರಹಪರಾಶ್ಶಿವಾಃ ।
ಪಾದಯೋಃ ಪಾದ್ಯಮೇತಾಸಾಂ ದದ್ಯಾಚ್ಛಂಖೋದಬಿಂದುಭಿಃ ॥ ೧೬ ॥

ಹಸ್ತೇಷ್ವಾಚಮನೀಯಂ ಚ ಮೌಳೀಷ್ವರ್ಘ್ಯಂ ಪ್ರದಾಪಯೇತ್ ।
ಶಂಖೋದಬಿಂದುಭಿಸ್ತಾಸಾಂ ಸ್ನಾನಕರ್ಮ ಚ ಭಾವಯೇತ್ ॥ ೧೭ ॥

ರಕ್ತಾಂಬರಾಣಿ ದಿವ್ಯಾನಿ ಸೋತ್ತರೀಯಾಣಿ ದಾಪಯೇತ್ ।
ಮುಕುಟಾದೀನ್ಯನರ್ಘ್ಯಾಣಿ ದದ್ಯಾದಾಭರಣಾನಿ ಚ ॥ ೧೮ ॥

ಸುವಾಸಿತಂ ಚ ಶ್ರೀಖಂಡಮಕ್ಷತಾಂಶ್ಚಾತಿಶೋಭನಾನ್ ।
ಸುರಭೀಣಿ ಮನೋಜ್ಞಾನಿ ಕುಸುಮಾನಿ ಚ ದಾಪಯೇತ್ ॥ ೧೯ ॥

---

ಮಂಜುಳವಾಗಿ ಧ್ವನಿಗೈಯುತ್ತಿರುವವು. ಮತ್ತು ಈ ಕಾಲುಂಗುರಗಳಲ್ಲಿರುವ ರತ್ನಗಳಿಂದ ಹೊರಹೊರಟ ಕಾಂತಿಯು ಸುತ್ತಲೂ ಪ್ರಸರಿಸಿ ಇವರ ಮನೋಹರವಾದ ಆಕಾರವನ್ನು ಸೌಂದರ್ಯಯುತವನ್ನಾಗಿ ಮಾಡುತ್ತಿರುವುದು.

೧೪-೧೫. ಶಕ್ತಿಯ ಅಂಶವಿಲ್ಲದಿರುವ ಮೂರ್ತಿಗಳು ಶವದಂತೆ ಯಾವ ಅನುಗ್ರಹವನ್ನೂ ಮಾಡಲು ಸಮರ್ಥವಾಗದಿರುವವು. ಇವುಗಳಿಗೆ ಸುಮ್ಮನೆ ಆಕಾರ ಮಾತ್ರವಿರುವದು. ಆದರೆ ಆ ಮೂರ್ತಿಗಳು ಶಕ್ತ್ಯಂಶವನ್ನುಳ್ಳದ್ದಾಗಿದ್ದರೆ ಆ ಮೂರ್ತಿಗಳಿಗೆ ಈಶ್ವರನಿಗಿರುವಂತೆ ಅನುಗ್ರಹ ಸಾಮರ್ಥ್ಯವಿರುವದು. ಸರ್ವರನ್ನು ಅನುಗ್ರಹಿಸಬೇಕೆಂಬ ಇಚ್ಛೆಯಿಂದ ಮಹೇಶ್ವರನೇ ಈ ಪಂಚಮೂರ್ತಿಗಳ ಆಕಾರವನ್ನು ಸ್ವೀಕಾರ ಮಾಡಿರುವನು. ಆದುದರಿಂದ ಈಶ್ವರಾಂಶದಿಂದಿರುವ ಈ ಪಂಚಮೂರ್ತಿಗಳಿಗೆ ಸಮಸ್ತಕಾರ್ಯವನ್ನು ಮಾಡುವ ಸಾಮರ್ಥ್ಯವೂ ಭಕ್ತರಿಗೆ ಅನುಗ್ರಹಮಾಡುವ ಸಾಮರ್ಥ್ಯವೂ ಸಹ ಇರುವದು.

೧೬-೨೫. ಈ ದೇವಿಯರನ್ನು ಹೀಗೆ ಧ್ಯಾನಮಾಡಿ ಇವರು ಇನ್ನೊಬ್ಬರಿಗೆ ಅನುಗ್ರಹಮಾಡುವದರಲ್ಲಿ ಆಸಕ್ತರಾದ್ದರಿಂದ ಈ ದೇವಿಯರ ಪಾದಗಳಲ್ಲಿ ಶಂಖದಲ್ಲಿರುವ ನೀರಿನ ಹನಿಗಳಿಂದ ಪಾದ್ಯವನ್ನೂ, ಕೈಗಳಲ್ಲಿ ಆಚಮನೀಯವನ್ನೂ, ಶಿರಸ್ಸಿನಲ್ಲಿ

ಧೂಪಂ ಚ ಪರಮಾಮೋದಂ ಸಾಜ್ಯವರ್ತಿ ಚ ದೀಪಕಂ ।
ಸರ್ವಂ ಸಮರ್ಪಯಾಮೀತಿ ಪ್ರಣವಂ ಹ್ರೀಮುಪಕ್ರಮಾತ್ ॥ ೨೦ ॥

ನಮೋಽನ್ತಂ ಚ ತತೋ ದದ್ಯಾತ್ಪಾಯಸಂ ಮಧುನಾಪ್ಲುತಂ ।
ಸಾಜ್ಯಶರ್ಕರಯಾಪೂಪಕದಲೀಗುಡಪೂರಿತಂ ॥ ೨೧ ॥

ಪ್ರತ್ಯೇಕಂ ಕದಲೀಪತ್ರೇ ಭರಿತಂ ಚ ಸುವಾಸಿತಂ ।
ಭೂರ್ಭುವಸ್ಸ್ವರಿತಿ ಪ್ರೋಚ್ಯ ಪ್ರೋಕ್ಷಣಾದೀನಿ ಕಾರಯೇತ್ ॥ ೨೨ ॥

ಓಂ ಹ್ರೀಮಿತಿ ಸಮುಚ್ಚಾರ್ಯ ನೈವೇದ್ಯಂ ವಹ್ನಿಜಾಯಯಾ ।
ಪಾನೀಯಂ ನಮ ಇತ್ಯುಕ್ತ್ವಾ ಪರಂ ಪ್ರೇಮ್ಣಾ ಸಮರ್ಪಯೇತ್ ॥ ೨೩ ॥

ತತ ಉದ್ವಾಸಯೇತ್ಪ್ರೀತ್ಯಾ ಪೂರ್ವತೋ ಮುನಿಸತ್ತಮ ।
ಸ್ಥಲಂ ವಿಶೋಧ್ಯ ಗಂಡೂಷಾಚಮನಾರ್ಘ್ಯಾಣಿ ದಾಪಯೇತ್ ॥ ೨೪ ॥

ತಾಂಬೂಲಂ ಧೂಪದೀಪೌ ಚ ಪ್ರದಕ್ಷಿಣನಮಸ್ಕೃತೀ ।
ವಿಧಾಯ ಪ್ರಾರ್ಥಯೇದೇತಾಶ್ಶಿರಸ್ಯಂಜಲಿಮಾದಧತ್ ॥ ೨೫ ॥

---

ಅರ್ಘ್ಯವನ್ನೂ ಸಮರ್ಪಿಸಿ ಶಂಖದಲ್ಲಿರುವ ನೀರಿನಿಂದ ಸ್ನಾನಮಾಡಿಸಬೇಕು. ಉತ್ತಮವಾದ ಕೆಂಪುಬಣ್ಣದ ಬಟ್ಟೆಗಳನ್ನೂ ಉತ್ತರೀಯವನ್ನೂ ಸಮರ್ಪಿಸಿ ಕಿರೀಟವೇ ಮೊದಲಾದ ಬಹಳ ಬೆಲೆಯುಳ್ಳ ಆಭರಣಗಳಿಂದ ಅಲಂಕರಿಸಬೇಕು. ಸುವಾಸನೆಯಿಂದ ಕೂಡಿದ ಗಂಧವನ್ನೂ ಅಕ್ಷತೆಯನ್ನೂ, ಹೂವುಗಳನ್ನೂ ಧೂಪ, ಮೂರು ಬತ್ತಿಯಿಂದಿರುವ ದೀಪ, ಇವುಗಳನ್ನೂ "ಓಂ ಹ್ರೀಂ ಗಂಧಂ ಸಮರ್ಪಯಾಮಿ ನಮಃ" ಎಂದು ಮುಂತಾಗಿ ಹೇಳುತ್ತಾ ಒಪ್ಪಿಸಬೇಕು. ಬಳಿಕ ಜೇನುತುಪ್ಪದಿಂದ ಕೂಡಿರುವ ಪಾಯಸವನ್ನೂ, ತುಪ್ಪ, ಸಕ್ಕರೆ, ಯರಿಯಪ್ಪ, ಬಾಳೆಹಣ್ಣು, ಬೆಲ್ಲ ಮೊದಲಾದ ನೈವೇದ್ಯವನ್ನು ಬೇರೆಬೇರೆಯಾಗಿ ಬಾಳೆಯೆಲೆಯಲ್ಲಿ ಇರಿಸಿ, "ಓಂ ಭೂರ್ಭುವಸ್ಸ್ವಃ" ಎಂಬ ಮಂತ್ರದಿಂದ ಪ್ರೋಕ್ಷಿಸಿ "ಓಂ ಹ್ರೀಂ ಸ್ವಾಹಾ" ಎಂದು ಮಂತ್ರವನ್ನು ಹೇಳಿ ನೈವೇದ್ಯವನ್ನು ಒಪ್ಪಿಸಿ ಪಾನೀಯವನ್ನು "ಓಂ ಹ್ರೀಂ ನಮಃ" ಎಂಬ ಮಂತ್ರದಿಂದ ಭಕ್ತಿಪೂರ್ವಕವಾಗಿ ಸಮರ್ಪಿಸಬೇಕು. ಎಲೈ ಮುನಿಶ್ರೇಷ್ಠನೇ! ಕೇಳು. ಆನಂತರ ಪೂರ್ವದಿಕ್ಕಿನಲ್ಲಿ ಭೂಮಿಯನ್ನು ಪ್ರೋಕ್ಷಿಸಿ ಗಂಡೂಷ ಆಚಮನ ಅರ್ಘ್ಯ ಇವುಗಳನ್ನು ಕೊಡಬೇಕು. ತಾಂಬೂಲವನ್ನೂ, ಧೂಪದೀಪಗಳನ್ನೂ ಕೊಟ್ಟು ಪ್ರದಕ್ಷಿಣೆನಮಸ್ಕಾರಗಳನ್ನೂ ಮಾಡಿ ತನ್ನ ಶಿರಸ್ಸಿನಮೇಲೆ ಅಂಜಲಿಬದ್ಧನಾಗಿ ಇವರನ್ನು ಪ್ರಾರ್ಥನೆ ಮಾಡಬೇಕು.

ಶ್ರೀಮಾತರಸ್ಸುಪ್ರಸನ್ನಾ ಯತಿಂ ಶಿವಪದೈಷಿಣಂ ।
ರಕ್ಷಣೀಯಂ ಪ್ರಬ್ರುವಂತು ಪರಮೇಶಪದಾಬ್ಜಯೋಃ ॥ ೨೬ ॥

ಇತಿ ಸಂಪ್ರಾರ್ಥ್ಯ ತಾಸ್ಸರ್ವಾ ವಿಸೃಜ್ಯ ಚ ಯಥಾಗತಂ ।
ತಾಸಾಂ ಪ್ರಸಾದಮುದ್ಧೃತ್ಯ ಕನ್ಯಕಾಭ್ಯಃ ಪ್ರದಾಪಯೇತ್ ॥ ೨೭ ॥

ಗೋಭ್ಯೋ ವಾ ಜಲಮಧ್ಯೇ ವಾ ನಿಕ್ಷಿಪೇನ್ನಾನ್ಯಥಾ ಕ್ವಚಿತ್ ।
ಅತ್ರೈವ ಪಾರ್ವಣಂ ಕುರ್ಯಾನ್ನೈಕೋದ್ದಿಷ್ಟಂ ಯತೇಃ ಕ್ವಚಿತ್ ॥ ೨೮ ॥

ಅತ್ರಾಯಂ ಪಾರ್ವಣಶ್ರಾದ್ಧೇ ನಿಯಮಃ ಪ್ರೋಚ್ಯತೇ ಮಯಾ ।
ತಂ ಶೃಣುಷ್ವ ಮುನಿಶ್ರೇಷ್ಠ ಯೇನ ಶ್ರೇಯೋ ಭವೇತ್ತತಃ ॥ ೨೯ ॥

ಕರ್ತಾ ಸ್ನಾತ್ವಾ ಧೃತಪ್ರಾಣ ಉಪವೀತೀ ಸಮಾಹಿತಃ ।
ಸಪವಿತ್ರಕರಸ್ತ್ವಸ್ಯಾಂ ಪುಣ್ಯತಿಥ್ಯಾಮಿತಿ ಬ್ರುವನ್ ॥ ೩೦ ॥

---

೨೬–೨೮. ಸಂಪದ್ಯುಕ್ತರಾದ ಎಲೈ ಮಾತೃದೇವತೆಗಳಿರಾ, ನೀವು ಶಿವನ ಪಾದಕಮಲವನ್ನು ಅಪೇಕ್ಷಿಸುವ ಈ ಯತಿಯನ್ನು ಪರಮೇಶ್ವರನ ಪಾದಕಮಲಗಳಲ್ಲಿ ಸೇರುವಂತೆ ಮಾಡಿ ಕಾಪಾಡಬೇಕು ಎಂದು ಪ್ರಾರ್ಥನೆಯನ್ನು ಮಾಡಬೇಕು. ಬಳಿಕ ಅವರೆಲ್ಲರನ್ನೂ ವಿಸರ್ಜನೆಯನ್ನೂ ಮಾಡಿ ಅವರುಗಳ ಪ್ರಸಾದವನ್ನು ತೆಗೆದುಕೊಂಡು ಕನ್ನೆಯರಿಗೆ ಕೊಟ್ಟು ಉಳಿದದ್ದೆಲ್ಲವನ್ನೂ ದನಗಳಿಗಾಗಲಿ ನೀರಿನ ಮಧ್ಯದಲ್ಲಿಯಾಗಲಿ ಹಾಕಬೇಕು. ಬೇರೆಕಡೆ ಹಾಕಬಾರದು ಇದಾದಬಳಿಕ ಪಾರ್ವಣಶ್ರಾದ್ಧವನ್ನು ಮಾಡತಕ್ಕದ್ದು. ಯತಿಯಾದವನನ್ನು ಉದ್ದೇಶಿಸಿ ಏಕೋದ್ದಿಷ್ಟಶ್ರಾದ್ಧವನ್ನು ಯಾವಾಗಲೂ ಮಾಡಕೂಡದು.

೨೯–೩೨. ಈ ಪಾರ್ವಣಶ್ರಾದ್ಧದಲ್ಲಿ ಆಚರಿಸಬೇಕಾದ ನಿಯಮವನ್ನು ಹೇಳುವೆನು. ಎಲೈ ಮುನಿಶ್ರೇಷ್ಠನೆ ಕೇಳು. ಅದರಿಂದ ಶ್ರೇಯಸ್ಸುಂಟಾಗುವುದು. ಕರ್ತೃವಾದವನು ಸ್ನಾನವನ್ನು ಮಾಡಿ ಉಪವೀತವನ್ನು ಬಲಕ್ಕೆ ಹಾಕಿಕೊಂಡು ಪವಿತ್ರವನ್ನು ಧರಿಸಿ ನಿಶ್ಚಲಚಿತ್ತನಾಗಿ ಪ್ರಾಣಾಯಾಮವನ್ನು ಮಾಡಿ ಈ ಪುಣ್ಯತಿಥಿಯಲ್ಲಿ ಪಾರ್ವಣಶ್ರಾದ್ಧವನ್ನು ಮಾಡುವೆನು ಎಂದು ಸಂಕಲ್ಪವನ್ನು ಮಾಡಬೇಕು. ಬಳಿಕ ಉತ್ತರದಿಕ್ಕಿನಲ್ಲಿ ಆಸನಕ್ಕಾಗಿ ಉತ್ತಮವಾದ ದರ್ಭೆಗಳನ್ನು ಇರಿಸಿ, ನೀರಿನಿಂದ ಕೈಗಳನ್ನು ತೊಳೆದುಕೊಂಡು ನಿಯಮನಿಷ್ಠರೂ, ಶಿವನಲ್ಲಿ ಭಕ್ತಿಯುಳ್ಳವರೂ ಆದ ನಾಲ್ಕು

ಕರಿಷ್ಯೇ ಪಾರ್ವಣಂ ಶ್ರಾದ್ಧಮಿತಿ ಸಂಕಲ್ಪ್ಯ ಚೋತ್ತರೇ ।
ದದ್ಯಾದ್ದರ್ಭಾನುತ್ತಮಾಂಶ್ಚ ಹ್ಯಾಸನಾರ್ಥಂ ಜಲಂ ಸ್ಪೃಶೇತ್ ॥ ೩೧ ॥

ತತ್ರೋಪವೇಶಯೇದ್ಭಕ್ತ್ಯಾ ಸಾಭ್ಯಂಗಂ ಕೃತಮಜ್ಜನಾತ್ ।
ಆಹೂಯ ಚತುರೋ ವಿಪ್ರಾಂಶ್ಶಿವಭಕ್ತಾನ್ದೃಢವ್ರತಾನ್ ॥ ೩೨ ॥

ವಿಶ್ವೇದೇವಾರ್ಥಂ ಭವತಾ ಪ್ರಸಾದಃ ಕ್ರಿಯತಾಮಿತಿ ।
ಆತ್ಮನೇ ಭವತಾ ಪಶ್ಚಾದಂತರಾತ್ಮನ ಇತ್ಯಪಿ ॥ ೩೩ ॥

ಪರಮಾತ್ಮನ ಇತ್ಯೇವಂ ಪ್ರೋಚ್ಯ ಪ್ರಾರ್ಥ್ಯ ಚ ತಾನ್ ಯತಿಃ ।
ಶ್ರದ್ಧಯಾಚರಣಂ ತೇಷಾಂ ಕುರ್ಯಾದ್ಯಾಥಾರ್ಥ್ಯಮಾದರಾತ್ ॥ ೩೪ ॥

ಪಾದೌ ಪ್ರಕ್ಷಾಲ್ಯ ತೇಷಾಂ ತು ಪ್ರಾಙ್ಮುಖಾನುಪವೇಶ್ಯ ಚ ।
ಗಂಧಾದಿಭಿರಲಂಕೃತ್ಯ ಭೋಜಯೇಚ್ಚ ಶಿವಾಗ್ರತಃ ॥ ೩೫ ॥

ಗೋಮಯೇನೋಪಲಿಪ್ಯಾತ್ರ ದರ್ಭಾನ್ಪ್ರಾಗಗ್ರಕಲ್ಪಿತಾನ್ ।
ಆಸ್ತೀರ್ಯ ಸಂಯತಪ್ರಾಣಃ ಪಿಂಡಾನಾಂ ಚ ಪ್ರದಾನಕಂ ॥ ೩೬ ॥

---

ಜನ ಬ್ರಾಹ್ಮಣರನ್ನು ಕರೆದುಕೊಂಡು ಬಂದು ಅವರಿಗೆ ಅಭ್ಯಂಜನವನ್ನು ಮಾಡಿಸಿ ಆಸನಗಳಲ್ಲಿ ಭಕ್ತಿಯಿಂದ ಕೂರಿಸಬೇಕು.

೩೩–೩೫. ಅವರಲ್ಲಿ ಒಬ್ಬನಿಗೆ ವಿಶ್ವೇದೇವರಿಗಾಗಿ ನೀನು ಪ್ರಸಾದವನ್ನು ಮಾಡಬೇಕೆಂತಲೂ ಉಳಿದವರಿಗೆ ಆತ್ಮ ಅಂತರಾತ್ಮ ಪರಮಾತ್ಮ ಇವರುಗಳಿಗಾಗಿ ನೀವು ಪ್ರಸನ್ನರಾಗಬೇಕು ಎಂತಲೂ ಹೇಳಿ ಪ್ರಾರ್ಥನೆಯನ್ನು ಮಾಡಿಕೊಂಡು, ಯತಿಯಾದ ತಾನು ಅವರುಗಳಿಗೆ ಶ್ರಾದ್ಧದಲ್ಲಿ ಹೇಳಿರುವಂತೆ ಆದರದಿಂದ ನಡೆದುಕೊಳ್ಳಬೇಕು. ಅವರ ಕಾಲುಗಳನ್ನು ತೊಳೆದು ಅವರನ್ನು ಶಿವನ ಎದುರಿನಲ್ಲಿ ಕೂರಿಸಿ, ಗಂಧವೇ ಮೊದಲಾದುವುಗಳಿಂದ ಪೂಜಿಸಿ ಅವರಿಗೆ ಭೋಜನಮಾಡಿಸಬೇಕು.

೩೬–೩೯. ಊಟವಾದ ಬಳಿಕ ಆ ಸ್ಥಲವನ್ನು ಗೋಮಯದಿಂದ ಸಾರಿಸಿ ಆ ಪ್ರದೇಶದಲ್ಲಿ ಮೊದಲು ಉಪಯೋಗಿಸದಿರುವ ದರ್ಭೆಗಳನ್ನು ನೆಲದಮೇಲೆ ಹರಡಬೇಕು. ಅನಂತರ ಪ್ರಾಣಾಯಾಮವನ್ನು ಮಾಡಿ ಪಿಂಡಪ್ರದಾನವನ್ನು ಮಾಡುತ್ತೇನೆ ಎಂದು ಸಂಕಲ್ಪವನ್ನು ಮಾಡಿ, ಮೂರು ಮಂಡಲವನ್ನು ಮಾಡಿ ಪೂಜಿಸಿ "ಆತ್ಮನೇ ಇದಂ ಪಿಂಡಂ ದದಾಮಿ" ಎಂದು ಮುಂತಾಗಿ ಹೇಳುತ್ತಾ ಆತ್ಮನಿಗೆ ಈ

ಕರಿಷ್ಯ ಇತಿ ಸಂಕಲ್ಪ್ಯ ಮಂಡಲತ್ರಯಮರ್ಚ್ಯ ಚ ।
ಆತ್ಮಾನಮಂತರಾತ್ಮಾನಂ ಪರಮಾತ್ಮಾನಮುಷ್ಯತಃ ॥ ೩೭ ॥

ಚತುರ್ಥ್ಯಂತಂ ವದನ್ ಪಶ್ಚಾದಿಮಂ ಪಿಂಡಮಿತೀರಯನ್ ।
ದದಾಮೀತಿ ಚ ಸಂಪ್ರೋಚ್ಯ ದದ್ಯಾತ್ಪಿಂಡಾನ್ಸ್ವಭಕ್ತಿತಃ ॥ ೩೮ ॥

ಕುಶೋದಕಂ ತತೋ ದದ್ಯಾದ್ಯಥಾವಿಧಿ ವಿಧಾನತಃ ।
ತತ ಉತ್ಥಾಪ್ಯ ವೈ ಕುರ್ಯಾತ್ಪ್ರದಕ್ಷಿಣನಮಸ್ಕೃತೀ ॥ ೩೯ ॥

ತತೋ ದತ್ವಾ ಬ್ರಾಹ್ಮಣೇಭ್ಯೋ ದಕ್ಷಿಣಾಂ ಚ ಯಥಾವಿಧಿ ।
ನಾರಾಯಣಬಲಿಂ ಕುರ್ಯಾತ್ತಸ್ಮಿನ್ನೇವ ಸ್ಥಲೇ ದಿನೇ ॥ ೪೦ ॥

ರಕ್ಷಾರ್ಥಮೇವ ಸರ್ವತ್ರ ವಿಷ್ಣೋಃ ಪೂಜಾವಿಧಿಃ ಸ್ಮೃತಃ ।
ಕುರ್ಯಾದ್ವಿಷ್ಣೋರ್ಮಹಾಪೂಜಾಂ ಪಾಯಸಾನ್ನಂ ನಿವೇದಯೇತ್ ॥ ೪೧ ॥

ದ್ವಾದಶಾಥ ಸಮಾಹೂಯ ಬ್ರಾಹ್ಮಣಾನ್ವೇದಪಾರಗಾನ್ ।
ಕೇಶವಾದಿಭಿರಭ್ಯರ್ಚ್ಯ ಗಂಧಪುಷ್ಪಾಕ್ಷತಾದಿಭಿಃ ॥ ೪೨ ॥

---

ಪಿಂಡವನ್ನು ಕೊಡುತ್ತೇನೆ ಎಂದು ಕ್ರಮದಿಂದ ಅಂತರಾತ್ಮ ಪರಮಾತ್ಮ ಇವರುಗಳಿಗೂ ಪಿಂಡದಾನವನ್ನು ಮಾಡಬೇಕು. ಭಕ್ತಿಯಿಂದ ಪಿಂಡದಾನಮಾಡಿದಮೇಲೆ ಶಾಸ್ತ್ರಕ್ರಮವನ್ನನುಸರಿಸಿ ದರ್ಭೆಯಿಂದ ನೀರನ್ನು ಕೊಡಬೇಕು. ಅನಂತರ ಮೇಲಕ್ಕೆದ್ದು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು.

೪೦–೪೧. ಆಮೇಲೆ ಶಾಸ್ತ್ರವಿಧಿಯಂತೆ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಆದಿನ ಆ ಪ್ರದೇಶದಲ್ಲಿ ಎಲ್ಲರ ಸಂರಕ್ಷಣೆಗಾಗಿ ನಾರಾಯಣ ಬಲಿಯನ್ನು ಮಾಡಬೇಕು. ಈ ಪೂಜಾಕ್ರಮವನ್ನು ಎಲ್ಲರ ಸಂರಕ್ಷಣೆಗಾಗಿಯೇ ಮಾಡತಕ್ಕದ್ದಾಗಿರುವದು. ವಿಷ್ಣುವಿಗೆ ಮಹಾಪೂಜೆಯನ್ನು ಮಾಡಿ ಪಾಯಸ ಅನ್ನ ಇವುಗಳನ್ನು ನೈವೇದ್ಯಮಾಡಬೇಕು.

೪೨–೪೪. ಈ ನಾರಾಯಣಬಲಿಯನ್ನು ಮಾಡುವಾಗ ವೇದಪಾರಂಗತರಾದ ಹನ್ನೆರಡುಜನ ಬ್ರಾಹ್ಮಣರನ್ನು ಕರೆದು ಕೇಶವಾದಿ ನಾಮಗಳನ್ನುಚ್ಚರಿಸುತ್ತಾ ಗಂಧ ಹೂವು ಅಕ್ಷತೆ ಇವುಗಳಿಂದ ಪೂಜಿಸಿ ಪಾದರಕ್ಷೆ ಛತ್ರಿ ವಸ್ತ್ರ ಇವುಗಳನ್ನು ಅವರಿಗೆ ಶಾಸ್ತ್ರಕ್ರಮದಂತೆ ದಾನಮಾಡಿ ಅವರನ್ನು ಬಹಳ ಭಕ್ತಿಯಿಂದಲೂ ಉಪಚಾರೋಕ್ತಿ

ಉಪಾನಚ್ಛತ್ರವಸ್ತ್ರಾದಿ ದತ್ವಾ ತೇಭ್ಯೋ ಯಥಾವಿಧಿ ।
ಸಂತೋಷಯೇನ್ಮಹಾಭಕ್ತ್ಯಾ ವಿವಿಧೈರ್ವಚನೈಶ್ಶುಭೈಃ ॥ ೪೩ ॥

ಆಸ್ತೀರ್ಯ ದರ್ಭಾನ್ಪೂರ್ವಾಗ್ರಾನ್ಭೂಸ್ಸ್ವಹಾ ಚ ಭುವಸ್ಸುವಃ ।
ಪ್ರಣವಾದಿ ಪ್ರೋಚ್ಯ ಭೂಮೌ ಪಾಯಸಾನ್ನಂ ಬಲಿಂ ಹರೇತ್ ॥ ೪೪ ॥

ಏಕಾದಶಾಹಸುವಿಧಿರ್ಮಯಾ ಪ್ರೋಕ್ತೋ ಮುನೀಶ್ವರ ।
ದ್ವಾದಶಾಹವಿಧಿಂ ವಕ್ಷ್ಯೇ ಶೃಣುಷ್ವಾದರತೋ ದ್ವಿಜ ॥ ೪೫ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ಯತೀನಾಮೇಕಾದಶಾಹಕೃತ್ಯವರ್ಣನಂ ನಾಮ
ದ್ವಾವಿಂಶೋಽಧ್ಯಾಯಃ



ಗಳಿಂದಲೂ ಸಂತೋಷಪಡಿಸಬೇಕು. ಅನಂತರ ಪೂರ್ವದಿಕ್ಕಿಗೆ ಅಗ್ರಗಳು ಬರುವಂತೆ ದರ್ಭೆಗಳನ್ನು ಹಾಸಿ ಪ್ರಣವಪೂರ್ವಕವಾದ ವ್ಯಾಹೃತಿಗಳಿಂದ ಭೂಮಿಯಲ್ಲಿ ಪಾಯಸವನ್ನೂ ಅನ್ನವನ್ನೂ ಬಲಿಯನ್ನಾಗಿ ಒಪ್ಪಿಸಬೇಕು. ಈರೀತಿಯಾಗಿ ನಾರಾಯಣ ಬಲಿಯನ್ನು ಕ್ರಮವಾಗಿ ಮಾಡಬೇಕು.

೪೫. ಎಲೈ ಮುನಿಶ್ರೇಷ್ಠನೇ ಕೇಳು, ನಾನು ಹನ್ನೊಂದನೆಯ ದಿನದ ಕಾರ್ಯವನ್ನೂ ಅದನ್ನು ಮಾಡುವ ಕ್ರಮವನ್ನೂ ಹೇಳಿರುವೆನು. ಇನ್ನು ಮುಂದೆ ಹನ್ನೆರಡನೆಯ ದಿನದ ಕಾರ್ಯಕಲಾಪಗಳನ್ನು ಹೇಳುವೆನು. ಆದರದಿಂದ ಕೇಳು ಎಂದನು.

ಇಲ್ಲಿಗೆ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಯತಿಗಳ ಮರಣಾನಂತರ ಹನ್ನೊಂದನೆಯದಿವಸದಲ್ಲಿ ಮಾಡಬೇಕಾದ ಕಾರ್ಯಗಳನ್ನು ವಿವರಿಸುವ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



ಶ್ರೀಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ಕೈಲಾಸಸಂಹಿತಾಯಾಂ

## ತ್ರಯೋವಿಂಶೋಽಧ್ಯಾಯಃ



॥ ಸುಬ್ರಹ್ಮಣ್ಯ ಉವಾಚ ॥

ದ್ವಾದಶಾಹೇ ಸಮುತ್ಥಾಯ ಪ್ರಾತಃ ಸ್ನಾತ್ವಾ ಕೃತಾಹ್ನಿಕಃ ।
ಶಿವಭಕ್ತಾನ್ಯತೀನ್ವಾಪಿ ಬ್ರಾಹ್ಮಣಾನ್ವಾ ಶಿವಪ್ರಿಯಾನ್ ॥ ೧ ॥

ವಿಮಂತ್ರ್ಯ ತಾನ್ಸಮಾಹೂಯ ಮಧ್ಯಾಹ್ನೇ ಚಾಪ್ಲುತಾಞ್ಛುಚೀನ್ ।
ವಿಧಿವದ್ಭೋಜಯೇದ್ಭಕ್ತ್ಯಾ ಸ್ವಾದ್ವನ್ನೈರ್ವಿವಿಧೈಶ್ಶುಭೈಃ ॥ ೨ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧-೨. ಸುಬ್ರಹ್ಮಣ್ಯೇಶ್ವರನಿಂತೆಂದನು.—ಹನ್ನೆರಡನೆಯ ದಿನದಲ್ಲಿ ಎದ್ದ ಕೂಡಲೇ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿಕೊಂಡು ತನ್ನ ಆಹ್ನಿಕವನ್ನು ಮಾಡಿದನಂತರ ಶಿವಭಕ್ತರಾಗಿರುವ ಯತಿಗಳನ್ನಾಗಲಿ, ಶಿವನ ಪ್ರೀತಿಗೆ ಪಾತ್ರರಾದ ಬ್ರಾಹ್ಮಣರನ್ನಾಗಲಿ ಕರೆದುಕೊಂಡು ಬಂದು ಮಧ್ಯಾಹ್ನದಲ್ಲಿ ಅವರಿಗೆ ಸ್ನಾನಮಾಡಿಸಿ ಪರಿಶುದ್ಧರಾದ ಅವರಿಗೆ ಶಾಸ್ತ್ರವಿಧಿಗನುಸಾರವಾಗಿ ಭಕ್ತಿಯಿಂದ ರುಚಿಕರವಾದ ಅನ್ನವೇ ಮೊದಲಾದವುಗಳಿಂದಲೂ, ಅನೇಕವಿಧವಾದ ಭಕ್ಷ್ಯಗಳಿಂದಲೂ ಭೋಜನಮಾಡಿಸಿ ತೃಪ್ತಿಪಡಿಸಬೇಕು.

ಸನ್ನಿಧೌ ಪರಮೇಶಸ್ಯ ಪಂಚಾವರಣಮಾರ್ಗತಃ ।
ಪೂಜಯೇತ್ತಸ್ಯ ಸಂಸ್ಥಾಪ್ಯ ಪ್ರಾಣಾನಾಯಮ್ಯ ವಾಗ್ಯತಃ ॥ ೩ ॥

ಮಹಾಸಂಕಲ್ಪಮಾರ್ಗೇಣ ಸಂಕಲ್ಪ್ಯಾಸ್ಮದ್ಗುರೋರಿಹ ।
ಪೂಜಾಂ ಕರಿಷ್ಯ ಇತ್ಯುಕ್ತ್ವಾ ತತೋ ದರ್ಭಾನುಪಸ್ಪೃಶೇತ್ ॥ ೪ ॥

ಪಾದೌ ಪ್ರಕ್ಷಾಲ್ಯ ಚಾಚಮ್ಯ ಸ್ವಯಂ ಕರ್ತಾ ಚ ವಾಗ್ಯತಃ ।
ಸ್ಥಾಪಯೇದಾಸನೇ ತಾನ್ವೈ ಪ್ರಾಙ್ಮುಖಾನ್ಭಸ್ಮಭೂಷಿತಾನ್ ॥ ೫ ॥

ಸದಾಶಿವಾದಿಕ್ರಮತೋ ಧ್ಯಾಯೇದಷ್ಟೌ ಚ ತತ್ರ ತಾನ್ ।
ಪರಯಾ ಸಂಭಾವನಯೇತರಾನಪಿ ಮುನೇ ದ್ವಿಜಾನ್ ।
ಪರಮೇಷ್ಠಿಗುರುಂ ಧ್ಯಾಯೇತ್ಸಾಂಬಬುದ್ಧ್ಯಾ ಸ್ವನಾಮತಃ ।
ಗುರುಂ ಚ ಪರಮಂ ತಸ್ಮಾತ್ಪರಾಪರಗುರುಂ ತತಃ ॥ ೬ ॥

---

೩-೬. ಬ್ರಾಹ್ಮಣಭೋಜನಕ್ಕೆ ಪೂರ್ವಭಾವಿಯಾಗಿ ಮಾಡಬೇಕಾದ ಕಾರ್ಯಕ್ರಮವನ್ನು ಸಂಕ್ಷೇಪವಾಗಿ ಹೇಳುವೆನು.—ಪರಮೇಶ್ವರನ ಸನ್ನಿಧಿಯಲ್ಲಿ ನಿಮಂತ್ರಿತರಾದ ಬ್ರಾಹ್ಮಣರನ್ನು ಕೂರಿಸಿ ಪಂಚಾವರಣಮಾರ್ಗದಿಂದ ಪೂಜೆಯನ್ನು ಮಾಡಬೇಕು. ಅನಂತರ ಪರಮೇಶ್ವರನ ಸಮೀಪದಲ್ಲಿ ಕೂತುಕೊಂಡು ವಾಙ್ನಿಯಮದಿಂದ ಪ್ರಾಣಾಯಾಮಪೂರ್ವಕವಾಗಿ ಮಹಾಸಂಕಲ್ಪಕ್ರಮದಿಂದ ನಮ್ಮ ಗುರುವಿನ ಪೂಜೆಯನ್ನು ಮಾಡುತ್ತೇನೆ ಎಂದು ಸಂಕಲ್ಪಮಾಡಿ ದರ್ಭೆಗಳನ್ನು ತೆಗೆದುಕೊಳ್ಳಬೇಕು. ಕರ್ತೃವಾದವನು ಪಾದಗಳನ್ನು ತೊಳೆದುಕೊಂಡು ಆಚಮನವನ್ನು ಮಾಡಬೇಕು. ವಾಙ್ನಿಯಮವುಳ್ಳವನಾಗಿ ಭಸ್ಮದಿಂದ ಅಲಂಕೃತರಾಗಿರುವ ಆ ಬ್ರಾಹ್ಮಣರನ್ನು ಪೂರ್ವಮುಖವಾಗಿ ಆಸನಗಳಲ್ಲಿ ಕೂರಿಸಿ ಸದಾಶಿವನೇ ಮೊದಲಾದ ಎಂಟುನಾಮಗಳಿಂದ ಆಯಾಯ ಬ್ರಾಹ್ಮಣರಲ್ಲಿ ಶಿವನ ಆಯಾಯ ಮೂರ್ತಿಗಳನ್ನು ಧ್ಯಾನಮಾಡಿದ ನಂತರ ಉತ್ತಮವಾದ ಭಕ್ತಿಯಿಂದ ಇತರರಾದ ಬ್ರಾಹ್ಮಣರನ್ನು ಕರೆದುಕೊಂಡು ಬಂದು ಅವರಲ್ಲಿಯೂ ಪರಮೇಶ್ವರನೆಂಬ ಬುದ್ಧಿಯಿಂದ ಗುರು, ಪರಮಗುರು, ಪರಾತ್ಪರಗುರು, ಪರಮೇಷ್ಠಿಗುರು ಎಂಬ ನಾಲ್ಕು ಗುರುಗಳನ್ನೂ ಧ್ಯಾನಮಾಡಬೇಕು.

ಇದಮಾಸನಮಿತ್ಯುಕ್ತ್ವಾ ಚಾಸನಾನಿ ಪ್ರಕಲ್ಪಯೇತ್ ।
ಪ್ರಣವಾದಿ ದ್ವಿತೀಯಾಂತೇ ಸ್ವಸ್ಯ ನಾಮ ಸಮುಚ್ಚರನ್ ॥ ೭ ॥

ಆವಾಹಯಾಮಿ ನಮ ಇತ್ಯಾವಾಹ್ಯಾರ್ಘೋದಕೇನ ತು ।
ಪಾದ್ಯಮಾಚಮನಂ ಚಾರ್ಘ್ಯಂ ವಸ್ತ್ರಗಂಧಾಕ್ಷತಾನಪಿ ॥ ೮ ॥

ದತ್ವಾ ಪುಷ್ಪೈರಲಂಕೃತ್ಯ ಪ್ರಣವಾದ್ಯಷ್ಟನಾಮಭಿಃ ।
ಸಚತುರ್ಥೀನಮೋಽಂತೈಶ್ಚ ಸುಗಂಧಕುಸುಮೈಸ್ತತಃ ॥ ೯ ॥

ಧೂಪದೀಪೌ ಹಿ ದತ್ವಾ ಚ ಸಕಲಾರಾಧನಂ ಕೃತಂ ।
ಸಂಪೂರ್ಣಮಸ್ತ್ವಿತಿ ಪ್ರೋಚ್ಯ ನಮಸ್ಕುರ್ಯಾತ್ಸಮುತ್ಥಿತಃ ॥ ೧೦ ॥

ಪಾತ್ರಾಣಿ ಕದಲೀಪತ್ರಾಣ್ಯಾಸ್ತೀರ್ಯಾದ್ಭಿರ್ವಿಶೋಧ್ಯ ಚ ।
ಶುದ್ಧಾನ್ನಪಾಯಸಾಪೂಪಸೂಪವ್ಯಂಜನಪೂರ್ವಕಂ ॥ ೧೧ ॥

---

೭-೧೦. ಬಳಿಕ "ಇದಮಾಸನಂ" ಈ ಪೀಠವನ್ನು ನಿಮಗರ್ಪಿಸುವೆನು ಎಂದು ಹೇಳಿ ಆಸನವನ್ನು ಕೊಡಬೇಕು. ಪ್ರಣವಮಂತ್ರವನ್ನು ಮೊದಲುಮಾಡಿ ಕೊಂಡು ದ್ವಿತೀಯಾವಿಭಕ್ತಿಯು ಕೊನೆಯಲ್ಲಿ ಬರುವಂತೆ ಎಂದರೆ ಓಂ ಸದಾಶಿವ ಮಾವಾಹಯಾಮಿ ನಮಃ ಎಂದು ಮುಂತಾಗಿ ಆವಾಹನೆಯನ್ನು ಮಾಡಿ ಪರಿಶುದ್ಧ ವಾದ ನೀರಿನಿಂದ ಪಾದ್ಯ, ಆಚಮನ, ಅರ್ಘ್ಯ, ವಸ್ತ್ರ, ಗಂಧ ಅಕ್ಷತೆ ಇವುಗಳನ್ನು ಸಮರ್ಪಿಸಿ ಹೂವುಗಳನ್ನೂ ತೆಗೆದುಕೊಂಡು ಪ್ರಣವಮಂತ್ರವೇ ಮೊದಲಾಗಿ ಎಂಟು ಹೆಸರುಗಳಿಗೂ ಚತುರ್ಥೀವಿಭಕ್ತಿಯನ್ನೂ ಸೇರಿಸಿ ನಮಃ ಎಂಬುದು ಕೊನೆಗೆ ಬರ ವಂತೆ ಉಚ್ಚರಿಸಿ, ಎಂದರೆ ಓಂ ಸದಾಶಿವಾಯನಮಃ ಪಾದ್ಯಂ ಸಮರ್ಪಯಾಮಿ ಎಂದು ಮುಂತಾಗಿ ಹೇಳುತ್ತಾ ಸುವಾಸನೆಯುಳ್ಳ ಹೂವುಗಳಿಂದ ಅಲಂಕಾರವಾಗಿ ಪೂಜೆಯನ್ನು ಮಾಡಿ, ಧೂಪದೀಪಗಳನ್ನೂ ಕೊಟ್ಟು, ಎಲ್ಲಾ ವಿಧವಾದ ಆರಾಧ ನೆಯೂ ಮಾಡಿರುವೆನು. ಆರಾಧನೆಯು ಸಂಪೂರ್ಣವಾಗುವಂತೆ ಅನುಗ್ರಹಿಸಬೇಕು ಎಂದು ಪ್ರಾರ್ಥಿಸಿ ನಮಸ್ಕಾರವನ್ನು ಮಾಡಬೇಕು.

೧೧-೧೨. ಅನಂತರದಲ್ಲಿ ಎದ್ದು ಬಾಳೆಯ ಎಲೆಗಳನ್ನು ಹಾಕಿ ನೀರಿನಿಂದ ತೊಳೆದು ಆ ಎಲೆಗಳಮೇಲೆ ಪರಿಶುದ್ಧವಾದ ಅನ್ನ, ಪಾಯಸ, ಅಪೂಪ (ಭಕ್ಷ್ಯ ವಿಶೇಷ) ತೊವ್ವೆ, ವ್ಯಂಜನ ಈ ಪದಾರ್ಥಗಳನ್ನು ಬಡಿಸಿ ಬಾಳೆಯಹಣ್ಣು, ತೆಂಗಿನ

ದತ್ವಾ ಪದಾರ್ಥಾನ್ಕದಲೀನಾಲಿಕೇರಗುಡಾನ್ವಿತಾನ್ ।
ಪಾತ್ರಾಸನಾನಿ ಚ ಪೃಥಗ್ದದ್ಯಾತ್ಸಂಪ್ರೋಚ್ಯ ಚ ಕ್ರಮಾತ್ ॥ ೧೨ ॥

ಪರಿಷಿಚ್ಯ ಚ ಸಂಪ್ರೋಕ್ಷ್ಯ ವಿಷ್ಣೋರ್ಹವ್ಯಮಿತಿ ಬ್ರುವನ್ ।
ರಕ್ಷಸ್ವೇತಿ ಕರಸ್ಪರ್ಶಂ ಕಾರಯಿತ್ವಾ ಸಮುತ್ಥಿತಃ ॥ ೧೩ ॥

ಆಪೋಶನಂ ಸಮುಪ್ಯಾರ್ಥ ಪ್ರಾರ್ಥಯೇತ್ತಾನಿದಂ ಪ್ರತಿ ।
ಸದಾಶಿವಾದಯಃ ಪ್ರೀತಾ ವರದಾಶ್ಚ ಭವಂತು ಮೇ ॥ ೧೪ ॥

ಯೇ ದೇವಾ ಇತಿ ಚ ತತೋ ಜಪ್ತ್ವೇದಂ ಸಾಕ್ಷತಂ ತ್ಯಜೇತ್ ।
ನಮಸ್ಕೃತ್ಯ ಸಮುತ್ಥಾಯ ಸರ್ವತ್ರಾಮೃತಮಸ್ತ್ವಿತಿ ॥ ೧೫ ॥

ಉಕ್ತ್ವಾ ಪ್ರಸಾದ್ಯ ಚ ಜಪನ್ಗಣಾನಾಂ ತ್ವೇತ್ಯುಪಕ್ರಮಾತ್ ।
ವೇದಾದೀನ್ರುದ್ರಚಮಕೌ ರುದ್ರಸೂಕ್ತಂ ಚ ಪಂಚ ಚ ॥ ೧೬ ॥

---

ಕಾಯಿ, ಬೆಲ್ಲ ಇವುಗಳಿಂದ ಕೂಡಿದ ಪದಾರ್ಥಗಳನ್ನೂ ಬಡಿಸಿದ ನಂತರ ಅವುಗಳನ್ನು ಪ್ರತ್ಯೇಕವಾಗಿ ವಿಧ್ಯುಕ್ತರೀತಿಯಿಂದ ಅರ್ಪಿಸಬೇಕು.

೧೩. ಆ ಎಲೆಗಳಿಗೆ ಪರಿಷೇಚನೆಯನ್ನು ಮಾಡಿ, ನೀರಿನಿಂದ ಪ್ರೋಕ್ಷಿಸಿ, ವಿಷ್ಣುವಿಗೆ ಈ ಹವಿಸ್ಸನ್ನು "ವಿಷ್ಣೋ ಹವ್ಯಂ ರಕ್ಷಸ್ವ" ಇದನ್ನು ರಕ್ಷಿಸು ಎಂದು ಹೇಳುತ್ತಾ ಆ ಬ್ರಾಹ್ಮಣನ ಕೈಯನ್ನು ಹಿಡಿದುಕೊಂಡು ಆ ಪದಾರ್ಥಗಳನ್ನು ಮುಟ್ಟಿಸಿ, ತಾನು ಎದ್ದು ನಿಂತುಕೊಂಡು ಆಪೋಶನವನ್ನು ಹಾಕಿದನಂತರ ಅವನನ್ನು ಪ್ರಾರ್ಥಿಸಿಕೊಳ್ಳಬೇಕು.

೧೪–೧೭. ಸದಾಶಿವನೇ ಮೊದಲಾದವರು ಸಂತುಷ್ಟರಾಗಿ ನನಗೆ ವರಗಳನ್ನು ಕೊಡುವವರಾಗಲಿ ಎಂದು ಪ್ರಾರ್ಥಿಸುತ್ತಾ "ಯೇದೇವಾದಿವ್ಯೇಕಾದಶಸ್ಥಾ" ಎಂಬ ಮಂತ್ರವನ್ನು ಹೇಳಿ ಅಕ್ಷತೆಯಿಂದ ಕೂಡಿದ ನೀರನ್ನು ಬಿಡಬೇಕು. ನಮಸ್ಕರಿಸಿ ಎದ್ದುನಿಂತುಕೊಂಡು ಎಲ್ಲರಿಗೂ "ಅಮೃತಮಸ್ತು" ಎಂದು ಹೇಳಿ ಪ್ರಾರ್ಥನೆ ಮಾಡಿ ಅವರು ಊಟಮಾಡುತ್ತಿರುವಾಗ ಅಭಿಶ್ರವಣಾದಿ ಮಂತ್ರವನ್ನು ಪ್ರಾರಂಭಿಸಿ ವೇದಸೂಕ್ತಗಳನ್ನೂ, ರುದ್ರ, ಚಮಕ, ರುದ್ರಸೂಕ್ತ, ಪಂಚಬ್ರಹ್ಮಮಂತ್ರಗಳು ಇವುಗಳನ್ನೂ, ಹೇಳುತ್ತಿರಬೇಕು. ಊಟವಾದನಂತರ ಹೇಳಬೇಕಾದ ಮಂತ್ರಗಳೆಲ್ಲವನ್ನೂ ಪೂರ್ತಿಯಾಗಿ ಹೇಳಿ ಮಂತ್ರಾಕ್ಷತೆಸಹಿತವಾದ ನೀರನ್ನು ಬಿಟ್ಟು, ಉತ್ತರಾ

ಬ್ರಹ್ಮಾಣಿ ಭೋಜನಾಂತೇ ತು ಯಾವನ್ಮಂತ್ರಾಂಶ್ಚ ಸಾಕ್ಷತಾನ್ ।
ದತ್ವೋತ್ತರಾಪೋಶನಂ ಚ ಹಸ್ತಾಂಘ್ರಿಮುಖಶೋಧನಂ ॥ ೧೭ ॥

ಕೃತ್ವಾಚಾಂತಾನ್ಸ್ವಾಸನೇಷು ಸ್ಥಾಪಯಿತ್ವಾ ಯಥಾಸುಖಂ ।
ಶುದ್ಧೋದಕಂ ಪ್ರದಾಯಾಥ ಕರ್ಪೂರಾದಿ ಯಥೋದಿತಂ ॥ ೧೮ ॥

ಮುಖವಾಸಂ ದಕ್ಷಿಣಾಂ ಚ ಪಾದುಕಾಸನಪತ್ರಕಂ ।
ವ್ಯಜನಂ ಫಲಕಾನ್ದಂಡಂ ವೈಣವಂ ಚ ಪ್ರದಾಯ ತಾನ್ ॥ ೧೯ ॥

ಪ್ರದಕ್ಷಿಣನಮಸ್ಕಾರೈಸ್ಸಂತೋಷ್ಯಾಶಿಷಮಾವಹೇತ್ ।
ಪುನಃ ಪ್ರಣಮ್ಯ ಸಂಪ್ರಾರ್ಥ್ಯ ಗುರುಭಕ್ತಿಮಚಂಚಲಾಂ ॥ ೨೦ ॥

ಸದಾಶಿವಾದಯಃ ಪ್ರೀತಾ ಗಚ್ಛಂತು ಚ ಯಥಾಸುಖಂ ।
ಇತ್ಯುದ್ವಾಸ್ಯ ದ್ವಾರದೇಶಾವಧಿ ಸಮ್ಯಗನುವ್ರಜನ್ ॥ ೨೧ ॥

---

ಪೋಶನವನ್ನೂ ಕೊಟ್ಟು ಆ ಬ್ರಾಹ್ಮಣರು ಕೈಕಾಲು, ಬಾಯಿಗಳನ್ನು ಚೆನ್ನಾಗಿ ತೊಳೆದುಕೊಂಡು ಶುದ್ಧವಾದ ಆಚಮನವನ್ನು ಮಾಡಿದನಂತರ ಅವರನ್ನು ಅವರವರ ಆಸನಗಳಲ್ಲಿ ಸುಖವಾಗಿ ಕೂಡಿಸಬೇಕು.

೧೮-೨೧. ಅನಂತರ ಅವರ ಹಸ್ತಗಳಲ್ಲಿ ಪರಿಶುದ್ಧವಾದ ನೀರನ್ನು ಹಾಕಿ ಪಚ್ಚಕರ್ಪೂರವೇ ಮೊದಲಾದ ಪದಾರ್ಥಗಳಿಂದ ಕೂಡಿದ ತಾಂಬೂಲವನ್ನೂ ಕೊಟ್ಟನಂತರ ಪಾದುಕಾ, ಆಸನ, ಬೀಸಣಿಗೆ, ವರಗಿಕೊಳ್ಳುವಮಣೆ, ಬಿದುರಿನದೊಣ್ಣೆ ಇವುಗಳನ್ನು ಕೊಟ್ಟು ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಿ, ಅವರನ್ನು ಸಂತೋಷಪಡಿಸಿ ಅವರಿಂದ ಆಶೀರ್ವಾದವನ್ನು ಪಡೆಯಬೇಕು. ಪುನಃ ನಮಸ್ಕಾರನನ್ನು ಮಾಡಿ ಸ್ಥಿರವಾಗಿರುವ ಗುರುಭಕ್ತಿಯನ್ನು ಅನುಗ್ರಹಿಸಬೇಕೆಂದು ಅವರನ್ನು ಪ್ರಾರ್ಥಿಸಿದನಂತರ ಸದಾಶಿವನೇ ಮೊದಲಾದವರು, ಸಂತುಷ್ಟರಾಗಿರುವರು. ನಿಮಗೆ ಸುಖಪ್ರಯಾಣವಾಗಲಿ ಎಂದು ಹೇಳಿ ಅವರನ್ನು ಉದ್ವಾಸನೆಮಾಡಿ ತನ್ನ ಮನೆಯ ಬಾಗಿಲಿನವರೆಗೂ ಅವರನ್ನು ಹಿಂಬಾಲಿಸಿ ಕಳುಹಿಸಿಕೊಡಬೇಕು.

ನಿರುದ್ಧಸ್ತೈಃ ಪರಾವೃತ್ಯ ದ್ವಾಸ್ಥೈರ್ವಿಪ್ರೈಶ್ಚ ಬಂಧುಭಿಃ ।
ದೀನಾನಾಥೈಶ್ಚ ಸಹಿತೋ ಭುಕ್ತ್ವಾ ತಿಷ್ಠೇದ್ಯಥಾಸುಖಂ ॥ ೨೨ ॥

ವಿಕೃತಂ ನ ಭವೇತ್ಕ್ವಾಪಿ ಸತ್ಯಂ ಸತ್ಯಂ ಪುನಃ ಪುನಃ ।
ಪ್ರತ್ಯಬ್ದಮೇವಂ ಕುರ್ವಾಣೋ ಗುರ್ವಾರಾಧನಮುತ್ತಮಂ ।
ಇಹ ಭುಕ್ತ್ವಾ ಮಹಾಭೋಗಾ ಶಿವಲೋಕಮವಾಪ್ನುಯಾತ್ ॥ ೨೩ ॥

॥ ಸೂತ ಉವಾಚ ॥

ಏವಂ ಕೃತಾನುಗ್ರಹಮಾತ್ಮಶಿಷ್ಯಂ
ಶ್ರೀವಾಮದೇವಂ ಮುನಿವರ್ಯಮುಕ್ತ್ವಾ ।
ಪ್ರಸನ್ನಧೀರ್ಜ್ಞಾನಿವರೋ ಮಹಾತ್ಮಾ
ಕೃತ್ವಾ ಪರಾನುಗ್ರಹಮಾಶು ದೇವಃ ॥ ೨೪ ॥

ಯನ್ನೈಮಿಷಾರಣ್ಯಮುನೀಶ್ವರಾಣಾಂ
ಪ್ರೋಕ್ತಂ ಪುರಾ ವ್ಯಾಸಮುನೀಶ್ವರೇಣ ।

೨೨-೨೩. ಆಗ ಅವರುಗಳು ತಮ್ಮನ್ನು ಹಿಂಬಾಲಿಸಿ ಬರುತ್ತಿರುವ ಆ ಶ್ರಾದ್ಧ ಮಾಡಿದವನನ್ನು ಹಿಂದಕ್ಕೆ ಕಳುಹಿಸುವರು. ಹಿಂದಕ್ಕೆ ಬಂದನಂತರ ಬಾಗಿಲಿನಲ್ಲಿ ಇರುವ ಬ್ರಾಹ್ಮಣರೂ, ಬಂಧುಗಳೂ, ದೀನರೂ, ಅನಾಥರೂ ಇವರೊಡನೆ ಕೂಡಿ ತಾನೂ ಊಟಮಾಡಬೇಕು. ಇಲ್ಲಿಗೆ ಆರಾಧನೆ ಕ್ರಮವು ಮುಗಿಯಿತು. ಹೀಗೆ ಆರಾಧನೆಯನ್ನು ಮಾಡುವವನಿಗೆ ಎಲ್ಲಿಯೂ, ಯಾವಾಗಲೂ, ಕೆಟ್ಟದ್ದು ಆಗುವದಿಲ್ಲ ಇದರಲ್ಲಿ ಸ್ವಲ್ಪವೂ ಸಂಶಯವನ್ನು ಪಡಬಾರದು. ಇದು ಸತ್ಯವಾದದ್ದು. ಗುರುವಿನ ಆರಾಧನೆಯನ್ನು ಉತ್ತಮವಾದ ಈ ಪ್ರಕಾರದಿಂದ ಪ್ರತಿವರ್ಷವೂ ಮಾಡುವವನು ಈ ಲೋಕದಲ್ಲಿ ಬಹಳ ಸುಖವನ್ನನುಭವಿಸಿ ಕೊನೆಗೆ ಶಿವಲೋಕವನ್ನು ಹೊಂದುವನು.

೨೪. ಸೂತಪುರಾಣಿಕನಿಂತೆಂದನು.—ಜ್ಞಾನಿಗಳಲ್ಲಿ ಶ್ರೇಷ್ಠನೂ ಮಹಾ ಮಹಿಮೆಯುಳ್ಳವನೂ ಆದ ಷಣ್ಮುಖದೇವನು, ತನಗೆ ಶಿಷ್ಯನೂ ಮುನಿಶ್ರೇಷ್ಠನೂ ಆದ ವಾಮದೇವನಿಗೆ ಈ ಪ್ರಕಾರದಿಂದ ಅವನು ಪ್ರಶ್ನೆಮಾಡಿದ ವಿಷಯವೆಲ್ಲಕ್ಕೂ ಸರಿಯಾದ ಉತ್ತರವನ್ನು ಹೇಳಿ ಅನುಗ್ರಹಮಾಡಿದನು.

೨೫. ಪೂರ್ವದಲ್ಲಿ ನೈಮಿಶಾರಣ್ಯದಲ್ಲಿ ವಾಸಮಾಡುತ್ತಿದ್ದ ಋಷಿಗಳಿಗೆ ವ್ಯಾಸ ಋಷೀಶ್ವರನು ಇದನ್ನು ಹೇಳಿದನು. ಆದ್ದರಿಂದ ಅವನು ಗುರುಗಳಲ್ಲಿ ಮೊದಲನೆ

ತಸ್ಮಾದಸಾವಾದಿಗುರುರ್ಭವಾಂಸ್ತು
ದ್ವಿತೀಯ ಆರ್ಯೋ ಭುವನೇ ಪ್ರಸಿದ್ಧಃ ॥ ೨೫ ॥

ಶ್ರುತ್ವಾ ಮುನೀಂದ್ರೋ ಭವತೋ ಮುಖಾಬ್ಜಾ-
ತ್ಸನತ್ಕುಮಾರಃ ಶಿವಭಕ್ತಿಪೂರ್ಣಃ ।
ವ್ಯಾಸಾಯ ವಕ್ತಾ ಸ ಚ ಶೈವವರ್ಯ-
ಶ್ಶುಕಾಯ ವಕ್ತಾ ಭವಿತಾ ಚ ಪೂರ್ಣಃ ॥ ೨೬ ॥

ಪ್ರತ್ಯೇಕಂ ಮುನಿಶಾರ್ದೂಲಂ ಶಿಷ್ಯವರ್ಗಚತುಷ್ಟಯಂ ।
ವೇದಾಧ್ಯಯನಸಂವೃತ್ತಂ ಧರ್ಮಸ್ಥಾಪನಪೂರ್ವಕಂ ॥ ೨೭ ॥

ವೈಶಂಪಾಯನ ಏವ ಸ್ಯಾತ್ಪೈಲೋ ಜೈಮಿನಿರೇವ ಚ ।
ಸುಮಂತುಶ್ಚೇತಿ ಚತ್ವಾರೋ ವ್ಯಾಸಶಿಷ್ಯಾ ಮಹೌಜಸಃ ॥ ೨೮ ॥

ಅಗಸ್ತ್ಯಶ್ಚ ಪುಲಸ್ತ್ಯಶ್ಚ ಪುಲಹಃ ಕ್ರತುರೇವ ಚ ।
ತವ ಶಿಷ್ಯಾ ಮಹಾತ್ಮಾನೋ ವಾಮದೇವ ಮಹಾಮುನೇ ॥ ೨೯ ॥

---

ಯವನಾದನು. ಪೂಜ್ಯನಾದ ನೀನು ಲೋಕದಲ್ಲಿ ಗುರುಗಳಲ್ಲಿ ಎರಡನೆಯವನೆಂದು ಪ್ರಸಿದ್ಧಿಯನ್ನು ಹೊಂದಿರುತ್ತೀಯೆ.

೨೬-೨೮. ಶಿವಭಕ್ತಿಯಿಂದ ಪೂರ್ಣನಾದ ಸನತ್ಕುಮಾರಮುನೀಶ್ವರನು ವ್ಯಾಸಋಷಿಗೆ ಇದನ್ನು ಹೇಳಿದನು. ಆ ಶಿವಭಕ್ತನಾದ ವ್ಯಾಸನು ಶುಕಮುನಿಗೆ ಇದನ್ನು ಹೇಳಿದನು. ಇವರಿಗೆ ಬೇರೆಬೇರೆಯಾಗಿ ನಾಲ್ಕುನಾಲ್ಕು ಮಂದಿಯರಂತೆ ಶಿಷ್ಯರು ಇರುವರು. ಅವರೆಲ್ಲರೂ, ವೇದಾಧ್ಯಯನಸಂಪನ್ನರು. ಧರ್ಮವನ್ನು ಲೋಕಕ್ಕೆ ಉಪದೇಶಮಾಡಿ, ಧರ್ಮವನ್ನು ಸ್ಥಾಪನೆಮಾಡುವವರು. ವೈಶಂಪಾಯನ, ಪೈಲ. ಜೈಮಿನಿ, ಸುಮಂತು ಎಂಬುದಾಗಿ ಹೆಸರುಳ್ಳ ಮಹಾಮಹಿಮರಾದ ಈ ನಾಲ್ಕುಮಂದಿಯೂ, ವ್ಯಾಸಋಷಿಯ ಶಿಷ್ಯರು.

೨೯-೩೧. ಎಲೈ ಮಹಾಮುನಿಯಾದ ವಾಮದೇವನೇ ಕೇಳು, ಮಹಾಮಹಿರಾದ ಅಗಸ್ತ್ಯ, ಪುಲಸ್ತ್ಯ, ಪುಲಹ, ಕ್ರತು ಎಂಬ ನಾಲ್ಕು ಮಂದಿಯು ನಿನ್ನ ಶಿಷ್ಯರು. ಸನಕ, ಸನಂದ, ಸನಾತನಮುನಿ, ಸನತ್ಸುಜಾತ ಎಂಬ ನಾಲ್ಕುಜನ ಯೋಗಿಶ್ರೇಷ್ಠರೂ ಶಿವನ ಪ್ರೀತಿಗೆ ಪಾತ್ರರಾಗಿ ಎಲ್ಲಾ ವೇದಾರ್ಥಗಳನ್ನೂ ತಿಳಿದ ಗುರು, ಪರಮಗುರು, ಪರಾತ್ಪರಗುರು, ಪರಮೇಷ್ಠಿಗುರು ಎಂಬ ಹೆಸರಿನಿಂದ ನಾಲ್ಕುಜನರು

**ಸನಕಶ್ಚ ಸನಂದಶ್ಚ ಸನಾತನಮುನಿಸ್ತತಃ ।**
**ಸನತ್ಸುಜಾತ ಇತ್ಯೇತೇ ಯೋಗಿವರ್ಯಾಃ ಶಿವಪ್ರಿಯಾಃ ॥ ೩೦ ॥**

**ಸನತ್ಕುಮಾರಶಿಷ್ಯಾಸ್ತೇ ಸರ್ವವೇದಾರ್ಥವಿತ್ತಮಾಃ ।**
**ಗುರುಶ್ಚ ಪರಮಶ್ಚೈವ ಪರಾತ್ಪರಗುರುಸ್ತತಃ ।**
**ಪರಮೇಷ್ಠಿಗುರುಶ್ಚೈತೇ ಪೂಜ್ಯಾಸ್ಸ್ಯುಶ್ಶುಕಯೋಗಿನಃ ॥ ೩೧ ॥**

**ಇದಂ ಪ್ರಣವವಿಜ್ಞಾನಂ ಸ್ಥಿತಂ ವರ್ಗಚತುಷ್ಟಯೇ ।**
**ಸರ್ವೋತ್ಕೃಷ್ಟನಿದಾನಂ ಚ ಕಾಶ್ಯಾಂ ಸನ್ಮುಕ್ತಿಕಾರಣಂ ॥ ೩೨ ॥**

**ಏತನ್ಮಂಡಲಮದ್ಭುತಂ ಪರಶಿವಾಧಿಷ್ಠಾನರೂಪಂ ಸದಾ**
**ವೇದಾಂತಾರ್ಥವಿಚಾರಪೂರ್ಣಮತಿಭಿಃ ಪೂಜ್ಯಂ ಯತೀಂದ್ರೈಃ ಪರಂ ।**
**ವೇದಾದಿಪ್ರವಿಭಾಗಕಲ್ಪಿತಮಹಾಕಾಶಾದಿನಾಪ್ಯಾವೃತಂ**
**ತ್ವತ್ಸಂತೋಷಕರಂ ತಥಾಸ್ತು ಜಗತಾಂ ಶ್ರೇಯಸ್ಕರಂ ಶ್ರೀಪ್ರದಂ ॥ ೩೩ ॥**

---

ಸನತ್ಕುಮಾರಯೋಗಿಯ ಶಿಷ್ಯರಾಗಿ ಶುಕನೇ ಮೊದಲಾದ ಯೋಗಿಗಳಿಂದ ಪೂಜಿಸಲ್ಪಡುವರು.

೩೨. ಪ್ರಣವಮಂತ್ರದ ಈ ಜ್ಞಾನವು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧವಾದ ಪುರುಷಾರ್ಥಗಳನ್ನೂ, ಸರ್ವವಿಧವಾದ ಶ್ರೇಯಸ್ಸನ್ನೂ ಉಂಟುಮಾಡುವದಲ್ಲದೆ ಕಾಶಿಯಲ್ಲಿ ವಾಸಮಾಡುವವರಿಗೆ ಮುಕ್ತಿಯನ್ನು ಕೊಡುವುದಾಗಿರುವುದು.

೩೩-೩೪. ಎಲೈ ವಾಮದೇವಮುನಿಯೇ ಕೇಳು. ಈಗ ನಾನು ಹೇಳಿರುವ ಮಂಡಲದ ವಿಚಾರವು ಬಹಳ ಆಶ್ಚರ್ಯಕರವಾದದ್ದು. ಈ ಮಂಡಲವು ಯಾವಾಗಲೂ ಪರಶಿವನಿಗೆ ಅಧಿಷ್ಠಾನರೂಪದಿಂದಿರುವದು. ಇದು ವೇದಾಂತಶಾಸ್ತ್ರದ ವಿಚಾರದಿಂದ ಪರಿಪಕ್ವವಾದ ಮನಸ್ಸುಳ್ಳ ಯತಿಗಳಿಂದ ಪೂಜಿಸಲ್ಪಟ್ಟಿರುವದು. ವೇದವೇ ಮೊದಲಾದ ವಿಭಾಗಗಳಿಂದ ಬೇರೆಬೇರೆಯಾಗಿ ಕಲ್ಪಿಸಿರುವ ಮಹಾಕಾಶವೇ ಮೊದಲಾದ ಪಂಚಮಹಾಭೂತಗಳಿಂದ ಆವೃತವಾಗಿರುವ ಎಂದರೆ ಪ್ರಕೃತಿಪರಿಜ್ಞಾನವನ್ನುಂಟುಮಾಡುವ ಈ ಮಂಡಲಜ್ಞಾನವು ನಿನಗೆ ಸಂತೋಷವನ್ನುಂಟುಮಾಡುತ್ತಾ, ಜಗತ್ತಿಗೆಲ್ಲಕ್ಕೂ ಶ್ರೇಯಸ್ಸನ್ನೂ, ಐಶ್ವರ್ಯವನ್ನೂ ಉಂಟುಮಾಡುತ್ತಾ ಇರಲಿ. ಎಲೈ ವಾಮದೇವಮುನಿಯೇ ಕೇಳು. ಸಾಕ್ಷಾತ್ ಶಿವನೇ ಹೇಳಿರುವ ವೇದಾಂತಶಾಸ್ತ್ರದ ಸಿದ್ಧಾಂತಗಳನ್ನೊಳಗೊಂಡು ಉತ್ತಮವಾದ ಈ ಪ್ರಣವವಿಜ್ಞಾನರೂಪದಿಂದಿರುವ ರಹಸ್ಯ

ಇದಂ ರಹಸ್ಯಂ ಪರಮಂ ಶಿವೋದಿತಂ
ವೇದಾಂತಸಿದ್ಧಾಂತವಿನಿಶ್ಚಿತಂ ಪರಂ ।
ಮತ್ತಶ್ಶ್ರುತಂ ಯದ್ಭವತಾ ತತೋ ಮುನೇ
ಭವನ್ಮತಂ ಪ್ರಾಜ್ಞತಮಾ ವದಂತಿ ॥ ೩೪ ॥

ತಸ್ಮಾದನೇನೈವ ಪಥಾ ಗತಶ್ಶಿವಂ
ಶಿವೋಽಹಮಸ್ಮೀತಿ ಶಿವೋ ಭವೇದ್ಯತಿಃ ।
ಪಿತಾಮಹಾದಿಪ್ರವಿಭಾಗಮುಕ್ತಯೇ
ನದ್ಯೋ ಯಥಾ ಸಿಂಧುಮಿಮಾಃ ಪ್ರಯಾಂತಿ ॥ ೩೫ ॥

॥ ಶ್ರೀಸೂತ ಉವಾಚ ॥

ಏವಂ ಮುನೀಶ್ವರಾಯೈತದುಪದಿಶ್ಯ ಸುರೇಶ್ವರಃ ।
ಸಂಸ್ಮೃತ್ಯ ಚರಣಾಂಭೋಜೇ ಪಿತ್ರೋಸ್ಸರ್ವಸುರಾರ್ಚಿತೇ ॥ ೩೬ ॥

ಕೈಲಾಸಶಿಖರಂ ಪ್ರಾಪ ಕುಮಾರಶ್ಶಿಖರಾವೃತಂ ।
ರಾಜಿತಂ ಪರಮಾಶ್ಚರ್ಯದಿವ್ಯಜ್ಞಾನಪ್ರದೋ ಗುರುಃ ॥ ೩೭ ॥

---

ವನ್ನು ನನ್ನಿಂದ ನೀನು ಕೇಳಿರುವೆಯಾದ್ದರಿಂದ ಲೋಕದಲ್ಲಿ ಪೂಜ್ಯರಾದವರು ಇದನ್ನು ನಿನ್ನ ಮತವೆಂದೇ (ವಾಮದೇವಮತ) ತಿಳಿಯುವರು.

೩೫. ಆದ್ದರಿಂದ ಈ ಮಾರ್ಗದಿಂದ ಉಪಾಸನೆಯನ್ನು ಮಾಡುವವನು "ಶಿವೋಹಮಸ್ಮಿ" ಎಂದು ಯಾವಾಗಲೂ, ಭಾವನೆಯುಳ್ಳವನಾದ್ದರಿಂದ ಆ ಯತಿಯು ಶಿವನೇ ಆಗುವನು. ದೊಡ್ಡದಾದ ನದಿಗಳು ಸಮುದ್ರವನ್ನು ಸೇರುವವೇ ಹೊರ್ತು ಬೇರೆಯುಕಡೆಗೆ ಹೋಗುವದಿಲ್ಲವಷ್ಟೆ. ಅದರಂತೆ ಶಿವೋಮಹಸ್ಮಿ ಎಂಬ ಭಾವನೆಯಿಂದ ಬ್ರಹ್ಮ, ವಿಷ್ಣು, ರುದ್ರಾದಿಗಳನ್ನು ಭಜನಮಾಡಿದವರೂ ಶಿವಜ್ಞಾನಪ್ರಭಾವದಿಂದ ಶಿವನಲ್ಲಿಯೇ ಐಕ್ಯವನ್ನು ಪಡೆಯುವರು.

೩೬-೩೭. ಈ ಷಣ್ಮುಖನು ಬಹಳ ಆಶ್ಚರ್ಯಕರವಾದ ಉತ್ತಮವಾದ ಜ್ಞಾನವನ್ನು ಉಪದೇಶಮಾಡುವದರಲ್ಲಿ ಉತ್ತಮವಾದ ಗುರುವು ಎಂದೆನಿಸಿಕೊಂಡಿರುವನು. ದೇವತೆಗಳಿಗೆ ಅಧಿಪನಾದ ಈ ಕುಮಾರಸ್ವಾಮಿಯು ಮುನೀಶ್ವರನಾದ ವಾಮದೇವನಿಗೆ ಈರೀತಿ ಪ್ರಣವಜ್ಞಾನವನ್ನು ವಿವರಿಸಿ ಹೇಳಿ, ಎಲ್ಲಾ ದೇವತೆಗಳಿಂದಲೂ ಪೂಜಾರ್ಹವಾದ ತನ್ನ ತಾಯಿತಂದೆಗಳ ಪಾದಕಮಲಗಳನ್ನು ಸ್ಮರಿಸುತ್ತಾ ಅನೇಕ ಶಿಖರಗಳಿಂದ ಕೂಡಿರುವ ಕೈಲಾಸಪರ್ವತವನ್ನು ಕುರಿತು ಪ್ರಯಾಣಮಾಡಿದನು.

ವಾಮದೇವೋಽಪಿ ಸಚ್ಛಿಷ್ಯೈಸ್ಸಂವೃತಶ್ಶಿಖಿವಾಹನಂ ।
ಸಂಪ್ರಣಮ್ಯ ಜಗಾಮಾಶು ಕೈಲಾಸಂ ಪರಮಾದ್ಭುತಂ ॥ ೩೮ ॥

ಗತ್ವಾ ಕೈಲಾಸಶಿಖರಂ ಪ್ರಾಪ್ಯೇಶನಿಕಟಂ ಮುನಿಃ ।
ದದರ್ಶ ಮೋಕ್ಷದಂ ಮಾಯಾನಾಶಂ ಚರಣಮೀಶಯೋಃ ॥ ೩೯ ॥

ಭಕ್ತ್ಯಾ ಚಾರ್ಪಿತಸರ್ವಾಂಗೋ ವಿಸ್ಮೃತ್ಯ ಸ್ವಕಲೇವರಂ ।
ಪಪಾತ ಸನ್ನಿಧೌ ಭೂಯೋ ಭೂಯೋ ನತ್ವಾ ಸಮುತ್ಥಿತಃ ॥ ೪೦ ॥

ತತೋ ಬಹುವಿಧೈಃ ಸ್ತೋತ್ರೈರ್ವೇದಾಗಮರಸೋತ್ಕಟೈಃ ।
ತುಷ್ಟಾವ ಪರಮೇಶಾನಂ ಸಾಂಬಿಕಂ ಸಸುತಂ ಮುನಿಃ ॥ ೪೧ ॥

ನಿಧಾಯ ಚರಣಾಂಭೋಜಂ ದೇವದೇವ್ಯೋಸ್ಸ್ವಮೂರ್ಧನಿ ।
ಪೂರ್ಣಾನುಗ್ರಹಮಾಸಾದ್ಯ ತತ್ರೈವ ನ್ಯವಸತ್ಸುಖಂ ॥ ೪೨ ॥

---

೩೮, ಇತ್ತ ವಾಮದೇವಮುನಿಯೂ ಕೂಡ ಉತ್ತಮರಾದ ತನ್ನ ಶಿಷ್ಯರೊಡಗೂಡಿ ಮಯೂರವಾಹನನಾಗಿರುವ ಷಣ್ಮುಖನಿಗೆ ನಮಸ್ಕಾರಮಾಡಿ, ಬಹಳ ಆಶ್ಚರ್ಯಕರವಾದ ಕೈಲಾಸಪರ್ವತಕ್ಕೆ ಬೇಗನೆ ತಾನೂ ಹೋಗಿ ಸೇರಿದನು.

೩೯-೪೧. ಆ ವಾಮದೇವಮುನಿಯು ಕೈಲಾಸಪರ್ವತದಲ್ಲಿ ಪರಮೇಶ್ವರನ ಸಮೀಪವನ್ನು ಹೊಂದಿ ಅಲ್ಲಿ ಜಗತ್ಪತಿಗಳಾದ ಪಾರ್ವತೀಪರಮೇಶ್ವರರ ಪಾದಕಮಲಗಳನ್ನು ದರ್ಶನಮಾಡಿದನು. ಅನಂತರ ಭಕ್ತಿಯಿಂದ ತನ್ನ ಶರೀರದಮೇಲಿನ ಅಭಿಮಾನವನ್ನೂ ಮರೆತು ಶರೀರವೆಲ್ಲವನ್ನೂ ಅಲ್ಲಿ ಸಮರ್ಪಿಸಿ, ಸಂಸಾರಿಜೀವರುಗಳ ಮಾಯೆಯನ್ನು ನಾಶಗೊಳಿಸಿ ಅವರಿಗೆ ಮುಕ್ತಿಯನ್ನು ಕೊಡುವ ಅವರ ಪಾದಗಳನ್ನು ಅನೇಕಸಾರಿ ನಮಸ್ಕಾರಮಾಡಿದನು. ಆಮೇಲೆ ಎದ್ದುನಿಂತುಕೊಂಡು ವೇದ, ಶಾಸ್ತ್ರ ಇವುಗಳ ಸಿದ್ಧಾಂತದಿಂದ ತುಂಬಿರುವ ಅನೇಕ ವಿಧವಾದ ಸ್ತೋತ್ರಗಳಿಂದ, ಜಗನ್ಮಾತೆಯಾದ ಪಾರ್ವತಿಯೊಡನೆಯೂ, ಗಣೇಶಷಣ್ಮುಖರೆಂಬ ಪುತ್ರರೊಡನೆಯೂ ಇರುವ ಪರಮೇಶ್ವರನನ್ನು ಸ್ತೋತ್ರಮಾಡಿದನು.

೪೨–೪೪. ಆ ವಾಮದೇವಮುನಿಯು ಪಾರ್ವತೀಪರಮೇಶ್ವರರ ಪಾದಕಮಲಗಳನ್ನು ತನ್ನ ಶಿರಸ್ಸಿನಲ್ಲಿ ಧರಿಸಿ, ಅವರ ಸಂಪೂರ್ಣವಾದ ಅನುಗ್ರಹವನ್ನು ಹೊಂದಿ ಅಲ್ಲಿಯೇ ಸುಖದಿಂದಿದ್ದನು. ಎಲೈ ಋಷಿಗಳಿರಾ ಕೇಳಿರಿ. ನೀವುಗಳೂ ಕೂಡ ಪ್ರಣವಮಂತ್ರಕ್ಕೆ ಅರ್ಥವಾಗಿರುವ ಮಹೇಶ್ವರನನ್ನು, ಈಗ ನಾನು ಹೇಳಿರುವ

ಭವಂತೋಽಪಿ ವಿದಿತ್ವೈವಂ ಪ್ರಣವಾರ್ಥಂ ಮಹೇಶ್ವರಂ ।
ವೇದಗುಹ್ಯಂ ಚ ಸರ್ವಸ್ವಂ ತಾರಕಂ ಬ್ರಹ್ಮ ಮುಕ್ತಿದಂ ॥ ೪೩ ॥

ಅತ್ರೈವ ಸುಖಮಾಸೀನಾಃ ಶ್ರೀವಿಶ್ವೇಶ್ವರಪಾದಯೋಃ ।
ಸಾಯುಜ್ಯರೂಪಾಮತುಲಾಂ ಭಜಧ್ವಂ ಮುಕ್ತಿಮುತ್ತಮಾಂ ॥ ೪೪ ॥

ಅಹಂ ಗುರುಪದಾಂಭೋಜಸೇವಾಯೈ ಬಾದರಾಶ್ರಮಂ ।
ಗಮಿಷ್ಯೇ ಭವತಾಂ ಭೂಯಸ್ಸತ್ಸಂಭಾಷಣಮಸ್ತು ಮೇ ॥ ೪೫ ॥

ಇತಿ ಶ್ರೀಶಿವಮಹಾಪುರಾಣೇ ಷಷ್ಠ್ಯಾಂ ಕೈಲಾಸಸಂಹಿತಾಯಾಂ
ದ್ವಾದಶಾಹಕೃತ್ಯವರ್ಣನಪೂರ್ವಕ ವ್ಯಾಸಾದಿಶಿಷ್ಯವರ್ಗ
ಕಥನಂ ನಾಮ ತ್ರಯೋವಿಂಶೋಽಧ್ಯಾಯಃ
ಸಮಾಪ್ತಾ ಚೇಯಂ ಷಷ್ಠೀ ಕೈಲಾಸಸಂಹಿತಾ

---

ಕ್ರಮದಿಂದ ತಿಳಿದುಕೊಂಡು, ಈ ಪ್ರಣವಮಂತ್ರವು ವೇದದ ರಹಸ್ಯವೆಂದೂ, ಎಲ್ಲವೂ ಇದರಲ್ಲಿ ಅಡಗಿರುವುದೆಂದೂ, ಮುಕ್ತಿಯನ್ನು ಕೊಡುವ ತಾರಕಬ್ರಹ್ಮವೆಂದೂ, ಭಾವಿಸಿ ಇಲ್ಲಿಯೇ ಸುಖವಾಗಿ ವಾಸಮಾಡುತ್ತಾ, ಮಹಾಮಹಿಮನಾದ ಮಹೇಶ್ವರನ ಪಾದ ಕಮಲಗಳಲ್ಲಿ ಭಕ್ತಿಯನ್ನಿರಿಸಿ, ಉತ್ತಮವಾದ, ಸಾಯುಜ್ಯವೆಂಬ ಮೋಕ್ಷಪದವಿ ಯನ್ನು ಹೊಂದಿರಿ.

೪೫. ನಾನೂ ಸಹ ನನ್ನ ಗುರುವಾದ ವ್ಯಾಸಋಷಿಯ ಪಾದಕಮಲಗಳ ಸೇವೆಗಾಗಿ ಬದರಿಕಾಶ್ರಮವನ್ನು ಕುರಿತು ಪ್ರಯಾಣಮಾಡುವೆನು. ಆದರೆ ನನಗೆ ನಿಮ್ಮಂತಹ ಸಜ್ಜನರಲ್ಲಿ ಮಾತನಾಡುವ ಪ್ರಸಂಗವು ಪದೇಪದೇ ಉಂಟಾಗುತ್ತಿರಲಿ ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಆರನೆಯ ಕೈಲಾಸಸಂಹಿತೆಯಲ್ಲಿ ಯತಿಗಳ ಮರಣಾ
ನಂತರ ಹನ್ನೆರಡನೆಯ ದಿನದ ಕಾರ್ಯಕಲಾಪಗಳನ್ನೂ, ವ್ಯಾಸಾದಿಶಿಷ್ಯವರ್ಗ
ಕಥನವನ್ನೂ ವಿವರಿಸುವ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಮಂಗಳಂ ॥

---

Printed by Y. R. Ranga Rao, Proprietor
Sri Chamundeswari Electric Press, Mysore